# ನಾ ಕಂಡ ಕಲಾವಿದರು

ಬರೆಹಗಾರರು :

ವಾ ಸು ದೇ ವಾ ಚಾ ರ್ಯ



ಪ್ರಕಾಶಕರು :

ತಳುಕಿನ ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ

ಮೈಸೂರು

# ಸಂಪಾದಕನ ವಿಜ್ಞಾಪನೆ

ಸರಸ್ವತಿಯ ವರಪುತ್ರರಾದ ಶ್ರೀಮಾನ್ ವಾಸುದೇವಾಚಾರ್ಯರ "ನಾ ಕಂಡ ಕಲಾವಿದರು" ಒಂದು ಅಪೂರ್ವ ಗ್ರಂಥ. ರಸಿಕ ರಸ ಋಷಿಗಳಾದ ಶ್ರೀಮಾನ್ ಆಚಾರ್ಯರ ಸುದೀರ್ಘವಾದ, ವಿಸ್ತಾರವಾದ ಅನುಭವದಲ್ಲಿ ಅಪೂರ್ವವಾದ ಸಾಹಿತ್ಯಸಾಮಗ್ರಿಯ ರತ್ನಗಳು ಅಡಗಿವೆ. ಅವರು ತಮ್ಮ ದೀರ್ಘಾನುಭವದತ್ತ ಸಿಂಹಾವಲೋಕನ ಮಾಡುವುದೇ ತಡ, ಈ ಪುಟ್ಟ ಪುಸ್ತಕದಲ್ಲಿ ಕಾಣಿಸಿಕೊಂಡಿರುವಂತಹ ನೂರಾರು ಘಟನೆಗಳು ಅವರ ಕಣ್ಣೆದುರು ಎದ್ದು ನಿಲ್ಲುತ್ತವೆ. ಅವನ್ನು ಕಣ್ಣಿಗೆ ಕಟ್ಟುವಂತೆ ಹಾವ ಭಾವ ವಿಲಾಸ ವಿಭ್ರಮಗಳೊಡನೆ ವಿವರಿಸುತ್ತಾರೆ. ಪೂಜ್ಯ ಆಚಾರ್ಯರು ಅವರು ಮನಸ್ಸುಮಾಡಿದರೆ, ಇಂತಹ ನಾಲ್ಕಾರು ಪುಸ್ತಕಗಳನ್ನು ಕನ್ನಡಿಗರಿಗೆ ದಾನಮಾಡಬಲ್ಲರು. ಮೃದು ಹಾಸ್ಯದಿಂದ ಓದುಗರ ಮನಸ್ಸನ್ನು ಅರಳಿಸುತ್ತಾ, ಗತಕಾಲದ ನಮ್ಮ ಸಂಸ್ಕೃತಿಯ ಭಾಗ್ಯದಮೇಲೆ ಬೆಳಕು ಚೆಲ್ಲುವ ಈ ಕಾರ್ಯವನ್ನು ತೃಪ್ತಿಕರವಾಗಿ ನೆರವೇರಿಸುವಂತೆ ಭಗವಂತನು ಈ ಸಂಗೀತ ಪಿತಾಮಹರಿಗೆ ಆಯುರಾರೋಗ್ಯವನ್ನು ನೀಡಲೆಂದು ಪ್ರಾರ್ಥಿಸುತ್ತೇನೆ. ಮುದ್ದಾದ ಈ ಪುಸ್ತಕವನ್ನು ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆಯಲ್ಲಿನ ಒಂದು ನಾಯಕಮಣಿಯಾಗಿ ಸೇರಿಸಲು ನೆರವಾದ ನನ್ನ ಮಾನ್ಯಮಿತ್ರರುಗಳಾದ ಶ್ರೀಮಾನ್ ಎ. ನಾರಾಯಣ ರಾಯರಿಗೂ ಮತ್ತು ಶ್ರೀ ಕೃಷ್ಣಮೂರ್ತಿಯವರಿಗೂ ನಾನು ಚಿರಋಣಿ.

ಈ ಗ್ರಂಥಕ್ಕೆ ವಿಚಾರ ಪೂರ್ಣವಾದ ಮುನ್ನುಡಿಯೊಂದನ್ನು ಬರೆದು ಕೊಟ್ಟು ಉಪಕರಿಸಿರುವ ಪೂಜ್ಯ ಡಿ. ವಿ. ಜಿ. ಯವರನ್ನು ಭಕ್ತಿಪೂರ್ವಕವಾಗಿ ವಂದಿಸುತ್ತೇನೆ.

ಈ ಪುಸ್ತಕವನ್ನು ಅತ್ಯಂತ ಶೀಘ್ರವಾಗಿಯೂ ಸುಂದರವಾಗಿಯೂ ಮುದ್ರಿಸಿ ಪ್ರಕಟಿಸಲು ನೆರವಾದ "ಹಿಂದೂಸ್ಥಾನ್ ಪ್ರೆಸ್" ಮಾಲೀಕರಾದ ಶ್ರೀಮಾನ್ ಎಂ. ಶಾಮರಾವ್, ಬಿ.ಇ. ಅವರಿಗೆ ನನ್ನ ಹೃತ್ಪೂರ್ವಕವಾದ ಅಭಿನಂದನೆಗಳು,

**ಸಂಪಾದಕ.**

# ಮುನ್ನುಡಿ

ಶ್ರೀಮಾನ್ ವಾಸುದೇವಾಚಾರ್ಯರ ಕೃತಿಗೆ ನನ್ನಿಂದ ಸಲ್ಲಬೇಕಾದದ್ದು ಮುನ್ನುಡಿಯಲ್ಲ; ಮನ್ನಣೆ, ಕೃತಜ್ಞತೆ, ಪೂಜೆ.

ಅವರ ಕೃತಿಗೆ ಯಾರ ಮುನ್ನುಡಿಯ ಶಿಫಾರಸೂ ಬೇಕಾಗಿಲ್ಲ. ಅವರು ಸ್ವತಃ ದೊಡ್ಡವರು.

ಮುನ್ನುಡಿ ಅವಶ್ಯವೆಂದು ಭಾವಿಸುವ ಪಕ್ಷದಲ್ಲಿ ಅದನ್ನೊದಗಿಸಲರ್ಹರಾದವರು ಈಗ ಯಾರಿದ್ದಾರೋ ನಾನರಿಯೆ. ಶೃಂಗೇರಿಯ ಜಗದ್ಗುರುಗಳು ಶ್ರೀ ಶಿವಾಭಿನವ ನೃಸಿಂಹ ಭಾರತೀ ಸ್ವಾಮಿಗಳವರು ಶ್ರೀ ವಾಸುದೇವಾಚಾರ್ಯರಲ್ಲಿ ತುಂಬ ಅಭಿಮಾನವನ್ನಿಟ್ಟಿದ್ದರು. ಆಚಾರ್ಯರ ಸಂಸ್ಕೃತ ಪಾಂಡಿತ್ಯ, ಸಾಹಿತ್ಯ ರಸಿಕತೆ, ಸಂಗೀತ ಪ್ರತಿಭೆ ಇವುಗಳನ್ನು ಕುರಿತು ಶ್ರೀ ಶ್ರೀ ಸ್ವಾಮಿಗಳವರು ಪ್ರಶಂಸೆಮಾಡಿ ಆಶೀರ್ವಚನವನ್ನು ಅನುಗ್ರಹಿಸುತ್ತಿದ್ದರೆನ್ನಲು ಸಂಶಯವಿಲ್ಲ. ಅದು ಉಚಿತವಾಗಿರುತ್ತಿತ್ತು. ಆಚಾರ್ಯರ ವಿಷಯದಲ್ಲಿ ಅಧಿಕಾರವಾಣಿಯಿಂದ ಮಾತನಾಡ ಬಲ್ಲವರಿನ್ನೊಬ್ಬರು ಮಹಾ ಮಹೋಪಾಧ್ಯಾಯ ಶ್ರೀ ಆರ್. ನರಸಿಂಹಾಚಾರ್ಯರು. ಅವರು ಸಂಸ್ಕೃತ ಸಾಹಿತ್ಯ ಸಂಗೀತಗಳಲ್ಲಿ ಸಿಶಿತಯೋಗ್ಯತೆ ಪಡೆದಿದ್ದವರು. ಅವರು ಆಚಾರ್ಯರ ಗಾಯನವನ್ನು ಮೆಚ್ಚಿದ್ದವರು. ಅವರ ಮುನ್ನುಡಿ ಯುಕ್ತವಾಗಿರುತ್ತಿತ್ತು. ವೀಣೆ ಶೇಷಣ್ಣನವರೂ ವೀಣೆ ಸುಬ್ಬಣ್ಣನವರೂ ಆಚಾರ್ಯರನ್ನು ಕುರಿತು ಬರೆಯಲರ್ಹರಾದವರು. ಆ ವೈಣಿಕೋತ್ತಮರಿಬ್ಬರೂ ವಾಸುದೇವಾಚಾರ್ಯರನ್ನು ಬಾಲ್ಯದಿಂದ ಕಂಡು ಅವರ ಗಾನ ಕಲಾಭಿವೃದ್ಧಿಯನ್ನು ಕುತೂಹಲದಿಂದ ನೋಡಿ ತೃಪ್ತಿ ಪಡುತ್ತಿದ್ದವರು. ಅಂಥವರು ಮಾಡಬಹುದಾಗಿದ್ದ ಸಂತೋಷದ ಕಾರ್ಯವನ್ನು ಮಾಡುವ ಅಧಿಕಾರ ಈಗ ಯಾರಿಗುಂಟು?

ಶ್ರೀ ವಾಸುದೇವಾಚಾರ್ಯರು ಮನುಷ್ಯನು ಬಯಸಬಹುದಾದ ಅನೇಕ ಭಾಗ್ಯಗಳ ವಿಷಯಲ್ಲಿ ಈಶ್ವರಾನುಗ್ರಹಕ್ಕೆ ಪಾತ್ರರಾಗಿದ್ದಾರೆ. ಅವರು ವಯಸ್ಸಿನಲ್ಲಿ ಪರಿಣತರಾಗುವುದಕ್ಕೆ ಎಷ್ಟೋ ಕಾಲ ಮುಂಚೆಯೇ ಶಾಸ್ತ್ರಕಲಾ ಸಂಪತ್ತಿನಲ್ಲಿ ಪರಿಣತರಾಗಿದ್ದರು. ಸತ್ಕುಲ ಸಂಪನ್ನತೆಯ ಜೊತೆಗೆ ಸೌಶೀಲ್ಯ ಸೌಜನ್ಯಗಳು ಸಹಜವಾಗಿ ಬಂದಿದ್ದವು. ಇಂಥವರು

ಸರ್ವರಿಗೂ ಮಾನ್ಯರೂ ಪ್ರಿಯರೂ ಆಗಿರುವುದು ಸ್ವಾಭಾವಿಕವಾಗಿಯೇ ಇದೆ.

ಶ್ರೀ ವಾಸುದೇವಾಚಾರ್ಯರಿಗೆ ಭಗವತ್ಕೃಪೆಯಿಂದ ಬಂದಿರುವ ಭಾಗ್ಯಗಳಲ್ಲಿ ಮಹಾಪುರುಷ ಮೈತ್ರಿಯೊಂದು. ಅವರ ಜೀವಮಾನದಲ್ಲಿ ನಾಲ್ಕಾರುಮಂದಿ ಪ್ರಸಿದ್ಧ ವಿದ್ವದ್ಗಾಯಕರ ಸ್ನೇಹ ವಾತ್ಸಲ್ಯಗಳನ್ನು ಸಂಪಾದಿಸಿ ಅವರ ವ್ಯಕ್ತಿಸ್ವರೂಪವನ್ನು ಬಹು ಹತ್ತಿರದಿಂದ ಕಂಡು ಗ್ರಹಿಸುವ ಅವಕಾಶ ಅವರ ಪಾಲಿಗೆ ಬಂದಿತ್ತು. ಆ ಅವಕಾಶಗಳ ಫಲಿತಾಂಶ ಈ ಗ್ರಂಥ. ಇದರಲ್ಲಿಯ ವ್ಯಕ್ತಿ ಚಿತ್ರಣಗಳು ವಿಶದಗಳಾದ ಅಂಗಾಂಗ ಭಂಗಿಗಳಿಂದ ಹೃದಯಂಗಮಗಳಾಗಿವೆ. ಅಂತಸ್ಸ್ಫೂರ್ತಿ ಜೀವಿಗಳಾದ ಕಲಾ ವ್ಯಾಸಂಗಿಗಳ ಮನಸ್ಸು ಹೇಗೆ ಹೇಗೆ ಹಾರಾಡುತ್ತದೆ, ಲೋಕದ ಚೇಷ್ಟೆಗಳಿಗೆ ಅವರ ಸ್ವಭಾವ ಹೇಗೆ ಪ್ರತಿ ಚೇಷ್ಟೆ ಮಾಡುತ್ತದೆ ಎಂಬುದನ್ನಿಲ್ಲಿ ಚೆನ್ನಾಗಿ ಕಾಣಬಹುದು.

ಶ್ರೀ ವಾಸುದೇವಾಚಾರ್ಯರ ವ್ಯಕ್ತಿಭಾವ ಈ ಗ್ರಂಥದಲ್ಲಿ ಪ್ರಸ್ತಾವಿತರಾಗಿರುವ ಮಹನೀಯರಲ್ಲಿ ಯಾರ ಪ್ರಭಾವಕ್ಕೂ ಕಡಮೆಯಾದದ್ದಲ್ಲ. ಅವರು ಕರ್ಣಾಟಕ ಸಂಗೀತ ವಾಗ್ಗೇಯಕಾರರ ಪಂಕ್ತಿಯಲ್ಲಿ ಶಾಶ್ವತವಾದ ಉನ್ನತ ಸ್ಥಾನವನ್ನು ಸಂಪಾದಿಸಿಕೊಂಡಿದ್ದಾರೆ. ಹತ್ತಾರು ಮಂದಿ ಶಿಷ್ಯರಿಗೆ ವಿದ್ಯಾದಾನ ಮಾಡಿದ್ದಾರೆ. ನೂರಾರು ಸಭೆಗಳಿಗೆ ನೂರಾರು ಸಲ ಗಾನಾನಂದ ಸಮಾರಾಧನೆಯನ್ನು ಮಾಡಿಸಿದ್ದಾರೆ. ನಾನು ಈಗ ಸುಮಾರು ೪೫ ವರ್ಷಗಳಿಂದ ಅವರ ಈ ಸಮಾರಾಧನೆಗಳಲ್ಲಿ ಉಂಡು ಬೆಳೆದವನು. ೧೯೧೦ ರ ಸುಮಾರಿನಲ್ಲಿ ವಾಸುದೇವಾಚಾರ್ಯರು ಸಂಸ್ಕೃತ ಶ್ಲೋಕಗಳನ್ನು ಬೆಂಗಳೂರಿನ ದೊಡ್ಡ ದೊಡ್ಡ ಸಭೆಗಳಲ್ಲಿ ಹಾಡಿದರು. ಆಗ ಅವರು ದಿಗ್ದರ್ಶನ ಮಾಡಿಸಿದ,

"ಶಂಕರ ಗುರುವರ ಮಹಿಮಾ"–ರಾಗಮಾಲಿಕೆ

"ದೇವರಾಜ ಸೇವ್ಯಮಾನ"–ರಾಗತಾಳ ಮಾಲಿಕೆ

ಇವೇ ಮೊದಲಾದ ಸಂಸ್ಕೃತ ಶ್ಲೋಕ ಗೇಯಗಳು ಜನದ ಮನಸ್ಸನ್ನು ಸೂರೆಗೊಂಡವು. ಆಗ ಸಂಗೀತ ರಸಿಕರಿದ್ದ ಕಡೆಯಲ್ಲೆಲ್ಲ ನಾಲ್ಕಾರು ವಾರ ಅದೇ ಮಾತಾಗಿರುತ್ತಿತ್ತು. ಆಚಾರ್ಯರ ರಾಗ ವಿನ್ಯಾಸ, ಅವರ ಗಮಕದ ಘೋರಣೆ, ಅವರ ಅಕ್ಷರೋಚ್ಚಾರಣೆಯ ಸ್ಫುಟತೆ, ಧ್ವನಿ ಸಂಚಾ

ರದ ಸೊಬಗು, ಹಾಡಿಕೆಯ ಒಟ್ಟಿನ ಉದಾತ್ತ ಗಾಂಭೀರ್ಯ—ಇವು ಸಂಗೀತವನ್ನು ಚಿತ್ತೋನ್ನತಿಗಾಗಿ ಉಪಾಸಿಸುವವರಿಗೆ ಮಹೋಪಕಾರಕ ಗಳಾದುವು.

ಸಂಗೀತ ಕಲೆಯಲ್ಲಿ,—ಮಿಕ್ಕೆಲ್ಲ ಕಲೆಗಳಲ್ಲಿಯೂ ಇರುವಂತೆ,—ತಾರ ತಮ್ಯ ಸೋಪಾನವುಂಟು. ಮೇಲು ಮೇಲಣ ಆಪ್ಯಾಯನಕ್ಕಾಗಿ ಒದಗ ತಕ್ಕ ಸಂಗೀತದ್ದು ಒಂದು ಮಟ್ಟ, ಆಳವಾದ ಶೋಕ ದೈನ್ಯಾದಿ ಭಾವಗಳಿಗೆ ಸಮಾಧಾನ ಹೇಳುವ ಸಂಗೀತ ಇನ್ನೊಂದು ಮಟ್ಟ. ಜೀವವನ್ನು ತೊಳೆದು ಆತ್ಮಕ್ಕೆ ದಿವ್ಯದರ್ಶನವನ್ನುಂಟುಮಾಡುವ ಸಂಗೀತ ಮತ್ತೊಂದು ಮಟ್ಟದ್ದು. ವಾಸುದೇವಾಚಾರ್ಯರ ಗಾಯನ ಈ ಉನ್ನತ ಘಟ್ಟದ್ದು; ಸುತ್ತಮುತ್ತ ಲಿನ ಕ್ಷಣಿಕ ಪ್ರಪಂಚವನ್ನು ಮರೆಯಿಸಿ ದಿವ್ಯಧ್ಯಾನದಲ್ಲಿ ಮನಸ್ಸನ್ನು ಲೀನಮಾಡಿಸಬಲ್ಲದ್ದು. ಅಂಥ ಸಂಗೀತವನ್ನು ಕೇಳುವಾಗ ಮತ್ತು ನೆನೆಯು ವಾಗ ಮನಸ್ಸು ಅನುಭವಿಸುವ ಬಿಡುಗಡೆಯೂ ಏಕಾಂತೋನ್ನತಿಯೂ ಮೋಕ್ಷವೆಂಬುದಲ್ಲದಿದ್ದರೆ ಆ ಶಬ್ದದ ಅರ್ಥಕ್ಕೆ ಭೂಲೋಕದಲ್ಲಿ ಬೇರೆ ಉದಾಹರಣೆ ಯಾವುದುಂಟೋ ಅದನ್ನು ಕಂಡವರಿಲ್ಲ.

ಶ್ರೀ ವಾಸುದೇವಾಚಾರ್ಯರವರು ಈಗ ಎರಡು ವರ್ಷಗಳಿಂದ ಅಡ್ಯಾರ್ ಕಲಾ ಕ್ಷೇತ್ರದಲ್ಲಿ ಸಂಗೀತ ಶಾಖೆಯ ಮುಖ್ಯ ಪ್ರವರ್ತಕರಾಗಿ ದ್ದಾರೆ. ಈ ಅವಕಾಶದಲ್ಲಿ ಅವರು ಶ್ರೀ ಮದ್ರಾಮಾಯಣಾದಿ ಸತ್ಕಾವ್ಯ ಗಳಿಗೆ ಸಂಗೀತವನ್ನಳವಡಿಸುವ ಮಹಾಕಾರ್ಯದಲ್ಲಿ ಪ್ರವೃತ್ತರಾಗಿದ್ದಾ ರೆಂದು ಕೇಳಿದ್ದೇನೆ. ಲೋಕ ಕಲ್ಯಾಣಕಾರಕವಾದ ಆ ಮಹತ್ಕಾರ್ಯ ಸರ್ವ ಸಂಪೂರ್ಣವಾಗಿ ರಸಿಕ ಸಮಾಜಕ್ಕೆ ದೊರಕುವ ದಿನವನ್ನು ಸಮಸ್ತ ಭಾರತೀಯರೂ ಕುತೂಹಲದಿಂದ ನಿರೀಕ್ಷಿಸಿಕೊಂಡಿದ್ದಾರೆ.

ಭಗವಂತನು ಶ್ರೀಮದಾಚಾರ್ಯರಲ್ಲಿ ಅನುಗ್ರಹ ತೋರುವುದರ ಮೂಲಕ ಸಮಸ್ತ ಕರ್ಣಾಟಕ ಸಂಗೀತ ಪ್ರಪಂಚಕ್ಕೂ ಸಮಸ್ತ ಭರತ ಖಂಡಕ್ಕೂ ಅನುಗ್ರಹ ತೋರುತ್ತಲಿದ್ದಾನೆ. ಇಂತು ಶಿವಂ.

**ಡಿ. ವಿ. ಜಿ.**

# ವಿಷಯ ಸೂಚಿಕೆ





ಸಂಗೀತಕಲಾನಿಧಿ, ಸಂಗೀತಶಾಸ್ತ್ರವಿಶಾರದ ಮೈಸೂರು ವಾಸುದೇವಾಚಾರ್ಯರು

# ಲೇಖಕನ ಮಾತು



ಇಂದು ನನಗೆ 90 ವರ್ಷಗಳು ತುಂಬಿ 91 ನೆಯ ವರ್ಷ ಪ್ರಾರಂಭ. ಸುಮಾರು ನನ್ನ ಐದನೆಯ ವಯಸ್ಸಿನಲ್ಲಿ ನಾನು 'ಸಪಸ' ಕೂಗಿದ್ದು. ಅಲ್ಲಿಂದ ಇಲ್ಲಿಯ ತನಕ, ಅಂದರೆ 85 ವರ್ಷಗಳ ಅವಧಿಯಲ್ಲಿ ಅನೇಕಾನೇಕ ಸುಪ್ರಸಿದ್ಧ ವಿದ್ವಾಂಸರುಗಳ ಸಂದರ್ಶನಲಾಭ ಪ್ರಾಪ್ತವಾಯಿತು ನನಗೆ. ಅವರಲ್ಲಿ ಕೆಲವರು ಗುರು ಸ್ವರೂಪರಾದರು ಮತ್ತೆ ಕೆಲವರು ಪರಮಮಿತ್ರರಾದರು. ನನ್ನ ಜೀವನದ ಗುರಿ ಹಾಗೂ ಸಾಧನಗಳಮೇಲೆ ಈ ಮಹಾವ್ಯಕ್ತಿಗಳೆಲ್ಲ ಒಂದಲ್ಲ ಒಂದು ವಿಧದಲ್ಲಿ ಪ್ರಭಾವ ಬೀರಿದ್ದಾರೆ. ಹುಟ್ಟಿದ ದಿನವಾದ ಇಂದು ಅವರೆಲ್ಲರನ್ನೂ ಪೂಜ್ಯಭಾವನೆಯಿಂದಲೂ ಕೃತಜ್ಞತೆಯಿಂದಲೂ ಸ್ಮರಿಸಿಕೊಳ್ಳುವ ಉದ್ದೇಶದಿಂದ ಈ ಪುಟ್ಟ ಪುಸ್ತಕವನ್ನು ರೂಪಗೊಳಿಸಿದ್ದೇನೆ. ಇದೇ ಕನ್ನಡ ಬಂಧುಗಳಿಗೆ ನಾನು ನೀಡುತ್ತಿರುವ ಪ್ರಥಮ ಕಾಣಿಕೆ. ಆದ್ದರಿಂದ ಭಾಷೆ, ಶೈಲಿ, ವಿತರಣೆ ಮೊದಲಾದವುಗಳಲ್ಲಿ ನ್ಯೂನತೆಗಳು ಕಂಡುಬರುವುದು ಸಹಜ. ವಾಚಕರು ಉದಾರ ಮನಸ್ಸಿನಿಂದ ವಿಷಯಗ್ರಹಣ ಮಾತ್ರ ಮಾಡಬೇಕಾಗಿ ಕೋರುತ್ತೇನೆ.

ಸಂಗೀತದಲ್ಲಿ ನನ್ನ ಮೊದಲನೆಯ ಗುರುಗಳಾದ ವಿದ್ವಾನ್ ಸುಬ್ಬರಾಯರ ಸಂಬಂಧವಾಗಿ ಯಾವ ವಿವರಗಳೂ ದೊರೆಯದೇ ಇದ್ದದ್ದು ನನ್ನ ದೌರ್ಭಾಗ್ಯ. ನನಗೆ ಆಗ್ಗೆ ತುಂಬ ಚಿಕ್ಕವಯಸ್ಸಾದ್ದರಿಂದ ಅವರ ನಡೆ ನುಡಿಗಳ ವಿವರಗಳ ನೆನಪು ವಿಶದವಾಗಿಲ್ಲ.

ಈ ಪುಸ್ತಕದಲ್ಲಿ ಚಿತ್ರಿಸಿರುವ ಸನ್ನಿವೇಶಗಳನ್ನೆಲ್ಲ ನಾನೇ ಪ್ರತ್ಯಕ್ಷವಾಗಿ ನೋಡಿ ಅನುಭವಿಸದಂತಹವು, ಇಲ್ಲವೇ ಹಿರಿಯರಾದ ಶೇಷಣ್ಣ ಹಾಗೂ ಸುಬ್ಬಣ್ಣನವರು ಹೇಳುತ್ತಿದ್ದುದನ್ನು ಕೇಳಿ ತಿಳಿದಂತಹವು. ಅಲ್ಲಲ್ಲಿ ಕಂಡು ಬರುವ ಕೆಲವು ಸಂಭಾಷಣೆಗಳು ಆತ್ಮಪ್ರಂಶಸೆಯ ನುಡಿಗಳಂತೆ ತೋರಬಹುದು. ಆದರೆ, ಆಯಾ ಸನ್ನಿವೇಶಗಳಲ್ಲಿ ಸಂಭಾಷಣೆಗಳು ಹೇಗೆ ಹೇಗೆ ನಡೆದಿದ್ದವೋ ಹಾಗೆಯೇ ಅವುಗಳನ್ನು ಓದುಗರ ಮುಂದಿಡಲು ಯತ್ನಿಸಿದ್ದೇನೆ. ಇಲ್ಲಿ ಚಿತ್ರಿತವಾಗಿರುವ ವ್ಯಕ್ತಿಗಳ ಹಿರಿಮೆ ಎದ್ದು ಕಾಣಲೆಂಬುದೇ ಲೇಖಕನ ಉದ್ದೇಶ.

ಈ ಪುಸ್ತಕದಲ್ಲಿ ಚಿತ್ರಿಸದೇ ಇರುವ ಇನ್ನೂ ಹಲವಾರು ವಿದ್ವಾಂಸರು ಗಳಿದ್ದಾರೆ. ನನ್ನ ಜೀವನವನ್ನು ರಸಪುಷ್ಟಿಯನ್ನಾಗಿ ಮಾಡಿರುವ ಈ ವಿದ್ವಾಂಸರುಗಳ ಜೀವನಚರಿತ್ರೆಯನ್ನೂ ದೈವಚಿತ್ತವಿದ್ದಲ್ಲಿ ಶೀಘ್ರದಲ್ಲಿಯೇ ನನ್ನ ಕನ್ನಡ ಬಂಧುಗಳ ಮುಂದಿಡಬೇಕೆಂಬ ಹಿರಿಯಾಸೆ ಇದೆ.

ಈ ಪುಸ್ತಕವನ್ನು ಬರೆಯಲು ನನ್ನನ್ನು ಹುರಿದುಂಬಿಸಿ, ಪುಸ್ತಕಕ್ಕೆ ಮುನ್ನುಡಿಯನ್ನು ಬರೆದು, ಉಪಕರಿಸಿದ ನನ್ನ ಪರಮಮಿತ್ರರಾದ ಶ್ರೀಮಾನ್ ಡಿ. ವಿ. ಗುಂಡಪ್ಪನವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ನಾನು ಆಗಾಗ್ಗೆ ಹೇಳುತ್ತಿದ್ದ ಸಂಗತಿಗಳನ್ನೆಲ್ಲ ಜೋಪಾನವಾಗಿ ಶೇಖರಿಸಿಟ್ಟು, ಈ ಪುಸ್ತಕ ಬರೆಯುವ ವೇಳೆ ನನ್ನ ಬಳಿ ಕುಳಿತು, ಅವು ಗಳನ್ನೆಲ್ಲ ನನ್ನ ಅಪೇಕ್ಷೆಯಂತೆ ಮತ್ತೆ ಕ್ರಮಪಡಿಸಿ, ಪುಸ್ತಕವನ್ನು ರೂಪ ಗೊಳಿಸಲು ಅನುವಾದ ನನ್ನ ಮೊಮ್ಮಕ್ಕಳಾದ ಚಿ|| ಕೃಷ್ಣಮೂರ್ತಿಗೂ ರಾಘವೇಂದ್ರನಿಗೂ ನನ್ನ ಹೃತ್ಪೂರ್ವಕವಾದ ಆಶೀರ್ವಾದಗಳು.

ಈ ಪುಸ್ತಕ ಬರವಣಿಗೆಯ ಕೆಲವು ಸಂದರ್ಭಗಳಲ್ಲಿ ಒತ್ತಾಸೆ ನೀಡಿದ ವೀಣೆ ಶೇಷಣ್ಣನವರ ಮೊಮ್ಮಕ್ಕಳಾದ ಆಸ್ಥಾನ ವಿದ್ವಾನ್ ವೆಂಕಟ ನಾರಾಯಣರಾಯರಿಗೂ ವೀಣೆ ಪದ್ಮನಾಭಯ್ಯನವರ ಮೊಮ್ಮಕ್ಕಳಾದ ವಿದ್ವಾನ್ ಎಸ್. ಅನಂತಪದ್ಮನಾಭರಾಯರಿಗೂ ಗಾನವಿಶಾರದ ಬಿಡಾರಂ ಕೃಷ್ಣಪ್ಪನವರ ಅಣ್ಣಂದಿರ ಮಕ್ಕಳಾದ ಬಿಡಾರಂ ಮೂರ್ತಿರಾಯರಿಗೂ ವಿದ್ವಾನ್ ಬೆಳಕವಾಡಿ ಶ್ರೀನಿವಾಸಯ್ಯಂಗಾರ್ಯರಿಗೂ ನನ್ನ ವಂದನೆಗಳು ಸಲ್ಲಬೇಕಾಗಿವೆ.

ಪುಸ್ತಕ ಪ್ರಕಟಣಕಾರ್ಯದಲ್ಲಿ ಸಹಾಯನೀಡಿದ ಪ್ರೊಫೆಸರ್ ಎ. ನಾರಾಯಣರಾಯರಿಗೂ ಮತ್ತು ಶ್ರೀಮಾನ್ ಟಿ. ಎಸ್. ಶ್ಯಾಮರಾಯ ರಿಗೂ ನನ್ನ ಕೃತಜ್ಞತೆಯ ವಂದನೆಗಳು.

25—5—1955
ಮೈಸೂರು.

ವಾಸುದೇವಾಚಾರ್ಯ.

# ಸಮರ್ಪಣೆ

ನನ್ನ ವಿದ್ಯಾರ್ಜನೆಗೆ ಸಕಲ ಪ್ರೋತ್ಸಾಹವನ್ನೂ ನೀಡಿದ, ನನ್ನ
ಪುರೋಭಿವೃದ್ಧಿಗೆ ಕಾರಣಕರ್ತರೂ ಆಳಿದ ಮಹಾಸ್ವಾಮಿಯವರೂ
ಆದ ಶ್ರೀ ಚಾಮರಾಜ ಪ್ರಭುಗಳ ಪವಿತ್ರ ಸ್ಮರಣೆಗಾಗಿ
ಈ ಕಿರಿಯ ಕಾಣಿಕೆಯನ್ನು ಸಮರ್ಪಿಸಿದ್ದೇನೆ.



ವೈಣಿಕ ಪ್ರವೀಣ ಸುಬ್ಬಣ್ಣನವರು ಮತ್ತು ವೈಣಿಕ ಶಿಖಾಮಣಿ ಶೇಷಣ್ಣನವರು

# ವೀಣೆ ಶೇಷಣ್ಣ

## ೧

"ಹೆಗಲ ಮೇಲೆ ವೀಣೆಯನ್ನೇರಿಸಿಕೊಂಡು, ಹಸುರು ಮಾವಿನ ಸೊಪ್ಪಿನ ತೋರಣ ಕಣ್ಣಿಗೆ ಬಿದ್ದ ಸ್ಥಳಗಳಿಗೆ ನಾನಾಗಿಯೇ ಹೋಗಿ ವೀಣೆಯನ್ನು ನುಡಿಸಿ, ಅವರಾಗಿ ಕೊಟ್ಟ ಅತ್ಯಲ್ಪ ಸಂಭಾವನೆಯನ್ನೇ ಮಹತ್ತಾಗಿ ಭಾವಿಸಿ ಜೀವನ ಸಾಗಿಸಿದ ದಿನಗಳು ಹಲವಾರು, ಕಾಣ್ರಯ್ಯ; ಕೇವಲ ಐದು ರೂಪಾಯಿಗೆಲ್ಲ ಒಂದು ಕಛೇರಿ ಮಾಡಿದ ಪ್ರಮೇಯವೂ ಉಂಟು" ಎಂದು ನೊಂದ ಹೃದಯವನ್ನು ತೋಡಿಕೊಂಡು ಅಂದು ಶೇಷಣ್ಣನವರು ಆಡಿದ ಬಿಸಿನುಡಿಗಳು ಇಂದಿಗೂ ನನ್ನ ಹೃದಯವನ್ನು ಕಲಕುತ್ತವೆ. ಶಾರದಾನುಗ್ರಹಕ್ಕೆ ಪಾತ್ರರಾದವರ ಮೇಲೆ ಲಕ್ಷ್ಮೀ ಕಟಾಕ್ಷ ಸಾಮಾನ್ಯವಾಗಿ ಅಷ್ಟಕ್ಕಷ್ಟೆ. ಶೇಷಣ್ಣನವರ ಬಾಳ್ವೆಯಲ್ಲಿ ಸಿಹಿಗಿಂತ ಕಹಿಯೇ ಹೆಚ್ಚೆನ್ನಬಹುದು. ಬಂದ ಎಡರುತೊಡರುಗಳನ್ನೆಲ್ಲ ಕೆಚ್ಚೆದೆಯಿಂದ ಎದುರಿಸಿ, ವಿದ್ಯಾರ್ಜನೆಮಾಡಿ, ಪ್ರತಿಭಾವಂತರಾಗಿ ವಿಖ್ಯಾತಿಗೊಂಡು, ಯಶೋವಂತರಾದ ವೀಣಾವಾದನಧುರೀಣ ಶೇಷಣ್ಣನವರು ಕನ್ನಡಕುಲರಸಿಕರಲ್ಲಿ ಕಲಶಪ್ರಾಯರು. ಶೇಷಣ್ಣನವರ ಸಂಗಡಲೇ ಅಡಿಯಿಡುತ್ತ, ನಮ್ಮ ನಲ್ಮೆಯ ನಾಡಿಗೆ 'ವೀಣೆಯ ಬೆಡಗಿದು ಮೈಸೂರು' ಎಂಬ ಅನ್ವರ್ಥವಾದ ಧವಳ ಕೀರ್ತಿಯನ್ನು ದೊರಕಿಸಿಕೊಟ್ಟ ಶೇಷಣ್ಣನವರಿಗೆ ಬಲಭುಜದಂತಿದ್ದ ಮತ್ತೊಬ್ಬ ಹಿರಿಯ ವೈಣಿಕ ವಿದ್ವಾಂಸರೆಂದರೆ ಸುಬ್ಬಣ್ಣನವರು.

## ೨

ಶೇಷಣ್ಣನವರ ಮನೆತನ, ವೀಣೆ ಸುಬ್ಬಣ್ಣನವರ ಮನೆತನ ಎರಡೂ ಯಮಳ ನದಿಗಳಂತೆ, ಮೊದಲಿನಿಂದಲೂ ಹೆಣೆದುಕೊಂಡೇ ಬೆಳೆದುಬಂದುವು. ಮಾತೃಸಂತತಿ, ಪಿತೃಸಂತತಿ ಎರಡೂ ಪೀಳಿಗೆಗಳೂ ಸಂಗೀತಕ್ಕೆ ತೌರುಮನೆಯಾಗಿದ್ದವು. ಈ ಎರಡು ವಂಶಗಳಿಗೂ ಮೂಲ

ಪುರುಷರು ವೈಣಿಕ ವಿದ್ವಾಂಸರಾಗಿದ್ದ ಆದಪ್ಪಯ್ಯನವರು. ವೀಣೆ ಶೇಷಣ್ಣ ನವರಿಗೆ ಇಪ್ಪತ್ತೆರಡು ತಲೆ ಹಿಂದಿನವರು. ಏಕಕಾಲದಲ್ಲಿ ವೀಣೆಯಲ್ಲಿ ಒಂದು ರಾಗವನ್ನು ನುಡಿಸಿಕೊಂಡು, ಬಾಯಿಯಲ್ಲಿ ಮತ್ತೊಂದು ರಾಗ ವನ್ನು ಹಾಡುವ ಅದ್ವಿತೀಯ ಸಾಮರ್ಥ್ಯವಿತ್ತಂತೆ ಅದಪ್ಪಯ್ಯನವರಿಗೆ.

ವೀಣೆ ಕುಪ್ಪಯ್ಯ, ವೀಣೆ ಅಪ್ಪಯ್ಯ ಎಂಬ ಇಬ್ಬರು ಸೋದರರು ಈ ವಂಶಸ್ಥರು. ಒಮ್ಮೆ ಈ ಸಹೋದರರು ಶರಭೋಜ ಮಹಾರಾಜರ ಆಸ್ಥಾನಕ್ಕೆ ಹೋಗಿ ತಮ್ಮ ಪಾಂಡಿತ್ಯಪ್ರದರ್ಶನ ಮಾಡುವ ಅಭಿಲಾಷೆ ಯಿಂದ ತಂಜಾವೂರಿಗೆ ಪ್ರಯಾಣ ಬೆಳಸಿದರು. ಆದರೆ ರಾಜನ ಭೇಟಿ ಸುಲಭವಾಗಿ ದೊರೆಯುವಂತಿರಲಿಲ್ಲ. ಸ್ಥಳೀಯ ವಿದ್ವಾಂಸರುಗಳು ಮೈ ಎಲ್ಲ ಕಣ್ಣಾಗಿಟ್ಟುಕೊಂಡು, ಪರಸ್ಥಳದ ವಿದ್ವಾಂಸರುಗಳು ತಮ್ಮ ಸ್ಥಾನ ಮಾನಗಳಿಗೆ ಎಂದೂ ಚ್ಯುತಿ ತರದಂತೆ ಎಚ್ಚರದಿಂದಿರುತ್ತಿದ್ದರಂತೆ. ಇದಕ್ಕೆ ಅಣ್ಣ ತಮ್ಮಂದಿರು ಒಂದು ಉಪಾಯ ಹೂಡಿದರು. ಸಂಗೀತ ವಿದ್ಯಾ ಭ್ಯಾಸಮಾಡಲು ಇಚ್ಛೆಯುಳ್ಳ ವಿದ್ಯಾರ್ಥಿಗಳಂತೆ ಸೋಗುಹಾಕಿಕೊಂಡು ತಂಜಾವೂರಿನ ವಿದ್ವಾಂಸರಾದ ಚಿನ್ನವೇಲು, ಪೆರೀವೇಲು ಎಂಬುವರನ್ನು ಆಶ್ರಯಮಾಡಿದರು. ಗುರುಗಳ ನಂಬಿಕೆ ವಿಶ್ವಾಸಗಳನ್ನು ಕ್ರಮ ಕ್ರಮ ವಾಗಿ ಸಂಪಾದಿಸಿಕೊಂಡರು. ರಾಜನ ಆಸ್ಥಾನಕ್ಕೆ ಗುರುಗಳ ಸಂಗಡ ಹೋಗಿ ಬರುವುದು ವಾಡಿಕೆಯಾಯಿತು. ಕೆಲವು ತಿಂಗಳುಗಳು ಕಳೆದ ನಂತರ ಒಂದು ಸ್ವಾರಸ್ಯವಾದ ಪ್ರಸಂಗ ಜರುಗಿತು. ಮಹಾರಾಜರು ಅಪ್ಪಯ್ಯ, ಕುಪ್ಪಯ್ಯನವರ ಕಡೆ ಬೆರಳು ತೋರಿ "ಇವರಾರು ?" ಎಂದು ಪ್ರಶ್ನಿಸಿದರಂತೆ. "ಇವರು ನಮ್ಮಲ್ಲಿ ಶಿಷ್ಯವೃತ್ತಿ ಮಾಡಿಕೊಂಡಿದ್ದಾರೆ. ಕೊಂಚ ವೀಣೆ ನುಡಿಸುತ್ತಾರೆ. ಸಾಮಾನ್ಯವಾಗಿ ಹಾಡುತ್ತಾರೆ" ಎಂದರು ಗುರುಗಳು. ಸಮಯ ಕಾಯುತ್ತಿದ್ದ ಕುಪ್ಪಯ್ಯನವರು ಕುಳಿತಿದ್ದ ಸ್ಥಳ ದಿಂದ ಝುಗ್ಗನೆದ್ದು, ರಾಜಸಮ್ಮುಖಕ್ಕೆ ಬಂದು, ಪ್ರಣಾಮ ಮಾಡಿ ವಿನಯ ದಿಂದ "ಪ್ರಭುಗಳು ಮನ್ನಿಸಬೇಕು. ನಮ್ಮ ಸ್ಥಳ ಮೈಸೂರು. ಜನ ನನ್ನನ್ನು ವೀಣೆ ಕುಪ್ಪಯ್ಯನೆಂದು ಕರೆಯುತ್ತಾರೆ" ಎಂದು ನುಡಿದರು. ಕುಪ್ಪಯ್ಯನವರ ಹೆಸರು ಕಿವಿಗೆ ಬಿದ್ದ ಕ್ಷಣವೇ ಚಾಟಿ ಏಟು ತಗುಲಿದ ಅಶ್ವದಂತೆ ಎಲ್ಲರೂ ಚಕಿತರಾದರು. ಗುರುಗಳ ಕಣ್ಣುಗಳು ಕೋಪದ ಕಿಡಿಗಳಿಂದ ಕೆಂಪೇರಿದವು. ಕಣ್ಣು ಸಂಜ್ಞೆಯಿಂದಲೇ ಸೂಚಿತವಾದ

ರಾಜಾಜ್ಞೆಯಂತೆ ಸುಮ್ಮನಿರಬೇಕಾಯಿತು. ಪರಶುರಾಮರ ಬಳಿ ಪ್ರಚ್ಛನ್ನ ವೇಷದಲ್ಲಿ ವಿದ್ಯಾರ್ಜನೆಮಾಡಿದ ಕರ್ಣನಂತೆ ತಾವು ನಾಟಕಹೂಡಿದ ಸಂಗತಿಯೆಲ್ಲವನ್ನೂ ಕುಪ್ಪಯ್ಯನವರು ರಾಜರಲ್ಲಿ ನಿವೇದಿಸಿದರು. ಶರಭೋಜ ಮಹಾರಾಜರಿಗೆ ಅತ್ಯಂತ ಆನಂದವಾಯಿತು. ತನ್ನ ವಿದ್ವಾಂಸರುಗಳ ಮಾತ್ಸರ್ಯದ ಹಿಂಸೆಗೊಳಗಾಗದಂತೆ, ಅಣ್ಣ ತಮ್ಮಂದಿರಿಬ್ಬರನ್ನೂ ಅರಮನೆಯಲ್ಲಿಯೇ ಇರಿಸಿಕೊಂಡರು. ತಂಜಾವೂರು ವಿದ್ವಾಂಸರುಗಳಿಗೆ ಹೊಟ್ಟೆ ಕಿವುಚಿಕೊಳ್ಳುವಂತಾಯಿತು. ಏನಾದರೂ ಮಾಡಿ ಈ ಅಣ್ಣ ತಮ್ಮಂದಿರ ಮುಖ ಮುರಿಯಬೇಕೆಂದು ಹವಣಿಸತೊಡಗಿದರು. ನಾಲ್ಕು ಪ್ರಮುಖ ವಿದ್ವಾಂಸರುಗಳು ಗುಟ್ಟಾಗಿ ಸೇರಿ, ಒಬ್ಬೊಬ್ಬರು ಒಂದೊಂದಾವರ್ತದಂತೆ ಅಟ್ಟತಾಳದ ವರ್ಣವೊಂದನ್ನು ರಚಿಸಿದರಂತೆ. ಆ ವರ್ಣ ಸಿದ್ಧವಾದ ಮೇಲೆ ಗುಟ್ಟಾಗಿ ಸಾಧಕಮಾಡಿ, ರಾಜಾಸ್ಥಾನದಲ್ಲಿ ಕುಪ್ಪಯ್ಯನ ಎದುರು ಮೂರು ಬಾರಿ ನುಡಿಸುವುದು, ಅದನ್ನು ಕೇಳಿ, ಕುಪ್ಪಯ್ಯ ವರ್ಣವನ್ನು ತ್ರಿಕಾಲದಲ್ಲಿ ಅಲ್ಲೆ ಅದೇ ಸಮಯದಲ್ಲಿ ನುಡಿಸಬೇಕು. ಇಲ್ಲವಾದರೆ ಪರಾಜಿತನಾದೆನೆಂದು ಹೇಳಿ ತನ್ನ ವೀಣೆಯನ್ನು ತಮಗೆ ಒಪ್ಪಿಸಬೇಕು. ಇದು ಅವರ ಏರ್ಪಾಡು. ಎಲ್ಲವೂ ಗುಟ್ಟಿನಲ್ಲೇ ನಡೆಯುತ್ತಿತ್ತು. ಆದರೆ, ಗುಟ್ಟು ರಟ್ಟಾಗಲು ಬಹುಕಾಲ ಬೇಕಾಗಲಿಲ್ಲ. ಅಪ್ಪಯ್ಯ ಪ್ರತಿದಿನ ಬೆಳಗಿನಝಾವ ಸುತ್ತಾಡುವ ಪದ್ಧತಿ ಇಟ್ಟುಕೊಂಡಿದ್ದರು. ಈ ಸಂದರ್ಭದಲ್ಲಿ ಇವರ ತಂತ್ರ ಕೊಂಚ ಕೊಂಚ ಅಪ್ಪಯ್ಯನವರ ಕಿವಿಗೆ ಬಿತ್ತು. ತಾವೂ ಕೂಡ ಗುಟ್ಟಾಗಿ ಅವರು ಸಾಧಕಮಾಡುವ ವೇಳೆ ಹಾಜರಿದ್ದು ಕೇಳಿದಷ್ಟನ್ನು ಗುರುತುಹಾಕಿಕೊಂಡು ಅಣ್ಣನಿಗೆ ನಡೆದ ಸಂಗತಿಯನ್ನೆಲ್ಲ ವಿವರಿಸಿದರು. ಹೀಗಾಗಿ ಕುಪ್ಪಯ್ಯನವರು ಸ್ಪರ್ಧೆಗೆ ಸಿದ್ಧರಾಗಿದ್ದರು.

ಅಂದು ಸಂಜೆ, ರಾಜಸಭೆಯಲ್ಲಿ ವೀಣೆ ಕುಪ್ಪಯ್ಯನವರಿಗೆ ರಾಜಸನ್ಮಾನಮಾಡಲು ಸರ್ವಸಿದ್ಧತೆಗಳೂ ನಡೆದಿದ್ದವು.

" ಮಹಾಸ್ವಾಮಿ " ಅಂದರು ಆಸ್ಥಾನ ವಿದ್ವಾಂಸರು.

" ಏನದು ? "

" ಈ ಇಬ್ಬರು ಅಣ್ಣತಮ್ಮಂದಿರುಗಳಿಂದ ನಮ್ಮೆಲ್ಲರಿಗೂ ಬಹಳ ಅಪಮಾನವಾಗಿದೆ. ನಮಗೆ ಮೋಸಮಾಡಿ, ತಮ್ಮ ಅನುಗ್ರಹಕ್ಕೆ ಪಾತ್ರ

ರಾಗುವ ಸಾಹಸಮಾಡಿದ್ದಾರೆ. ಇವತ್ತು ಅವರ ಪಾಂಡಿತ್ಯ ಪರೀಕ್ಷೆ ಆಗಲು ಅವಕಾಶಕೊಡಬೇಕಾಗಿ ಕೇಳಿಕೊಳ್ಳುತ್ತೇವೆ" ಎಂದರು.

ಕುಪ್ಪಯ್ಯನವರು ಏನೂ ಅರಿಯದವರಂತೆ ಸುಮ್ಮನಿದ್ದರು. ರಾಜನಿಗೆ ಏನು ಹೇಳಲೂ ತೋಚಲಿಲ್ಲ. ಕುಪ್ಪಯ್ಯನವರ ಕಡೆ ಒಂದು ಬಾರಿ ನೋಡಿದರು. ದೊರೆಯ ಇಂಗಿತವನ್ನರಿತ ಕುಪ್ಪಯ್ಯನವರು "ಸ್ಪರ್ಧೆಗೆ ಸಿದ್ಧವಾಗಿದ್ದೇನೆ ಪ್ರಭು" ಎಂದರು.

ಆಸ್ಥಾನ ವಿದ್ವಾಂಸರು ಅತ್ಯಂತ ಅಟ್ಟಹಾಸ ರೀತಿಗಳಿಂದ ತಮ್ಮ ಸಮಸ್ಯೆಯನ್ನು ವಿವರಿಸಿದರು. ವರ್ಣವನ್ನು ಮೂರು ಬಾರಿ ನುಡಿಸಿದರು. ಕುಪ್ಪಯ್ಯನವರು ಕೇಳಿದರು—"ಇಷ್ಟೇನೋ, ಇನ್ನೂ ಇದೆಯೋ, ನಿಮ್ಮ ಅಬ್ಬರ?"–ಎಂದು. "ಸದ್ಯಕ್ಕೆ ಇಷ್ಟಾಗಲಿ" ಎಂದರು ವಿದ್ವಾಂಸರು. ಪ್ರತ್ಯುತ್ತರವಾಗಿ "ಅಪ್ಪಯ್ಯ–ತಾ ನನ್ನ ವೀಣೆಯನ್ನು-ತಾಳ ಹಾಕು" ಅಂದರು ಕುಪ್ಪಯ್ಯ. ಅವರು ನುಡಿಸಿದ ತ್ರಿಕಾಲವನ್ನು ಕಾಲವನ್ನಾಗಿಟ್ಟುಕೊಂಡು ಅದಕ್ಕೆ ತ್ರಿಕಾಲದಲ್ಲಿ ವರ್ಣವನ್ನು ನುಡಿಸಿ ವೀಣೆಯನ್ನು ಕೆಳಗಿಟ್ಟರು. ವಿದ್ವಾಂಸರ ಅಂಗಳು ನಾಲಿಗೆ ಒಣಗಿ ಬಂತು. ಒಬ್ಬನ ಬಾಯಲ್ಲೂ ಮಾತೇ ಇಲ್ಲ. ರಾಜನ ಆನಂದಕ್ಕೆ ಮಿತಿಯೇ ಇಲ್ಲ.

ಕುಪ್ಪಯ್ಯನವರ ಕಛೇರಿ ಅನಂತರ ಪ್ರಾರಂಭವಾಯಿತು. ಮಧ್ಯರಾತ್ರಿಯವರೆಗೂ ನಡೆಯಿತು. ರಾಜರು ಒಳಗೆ ಹೋಗಿ, ಅಮೂಲ್ಯವಾದ ಜವಾಹಿರಿ, ಖಿಲ್ಲತ್ತು, ಸಫೇಮುತುರಾಯಿ, ಪಾಗು ಎಲ್ಲವನ್ನೂ ತರಿಸಿಕೊಂಡು ಬಂದರು. ಕುಪ್ಪಯ್ಯನವರಿಗೆ ಕನಕಾಭಿಷೇಕ ಮಾಡಿದರು. ಮುತ್ತಿನ ಕುಚ್ಚಿನಿಂದ ಕೂಡಿದ ಬೆಳ್ಳಿಯ ವೀಣೆಯನ್ನರ್ಪಿಸಿದರು. ಕಪಿಸ್ಥಳವೆಂಬ ಜಹಗೀರನ್ನು ದಯಪಾಲಿಸಿದರು. ಪಾಗನ್ನು ಕುಪ್ಪಯ್ಯನವರ ತಲೆಯ ಮೇಲೆ ತಾವೇ ಇಡಲು ಉದ್ಯುಕ್ತರಾದರು. ಆಗ ಕುಪ್ಪಯ್ಯನವರು ಮೋಹನ ರಾಗದಲ್ಲಿ "ಪಾಗಾ ಇಚ್ಚರ ಸರಿಗ" ಎಂಬ ಪಲ್ಲವಿಯನ್ನು ನುಡಿಸಿದರಂತೆ. ಆನಂದಬಾಷ್ಪಯುಕ್ತನಾದ ದೊರೆ, ಸ್ವಯಂ ರಸಿಕ, 'ಸಾದಾ ಪಾಗಾ ಇಚ್ಚನೇ' ಎಂದು ವೀಣಾವಾದನದೊಡನೆ ತನ್ನ ಕೊರಳನ್ನೂ ಸೇರಿಸಿದನಂತೆ.

ಮೈಸೂರಿಗೆ ವಾಪಸ್ಸು ತೆರಳುವ ಸಮಯದಲ್ಲಿ ಕುಪ್ಪಯ್ಯನವರ ಸಂಗಡ ಅರಮನೆಯ ಕಾವಲುಗಾರರನ್ನು ಕಳುಹಿ, ಮೈಸೂರನ್ನು ಅವರು ರಾಜಮರ್ಯಾದೆಯೊಡನೆ ಸುರಕ್ಷಿತವಾಗಿ ತಲುಪಿದ್ದಕ್ಕೆ ಮೈಸೂರು ಅರಮನೆಯಿಂದ ಪತ್ರ ತರುವಂತೆ ಆಜ್ಞಾಪಿಸಿ, ಶರಭೋಜ ಮಹಾರಾಜರವರು ಕುಪ್ಪಯ್ಯ ಅಪ್ಪಯ್ಯನವರನ್ನು ಬೀಳ್ಕೊಟ್ಟರಂತೆ.

ವೀಣೆ ಕುಪ್ಪಯ್ಯನವರ ಮಕ್ಕಳು ತಂಜಾವೂರಿನಲ್ಲೇ ನೆಲಸಿ ತಂದೆಯ ಆಸ್ತಿಪಾಸ್ತಿಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿದ್ದರು. ಇವರಿಗೆ ಮೂರು ಜನ ಮಕ್ಕಳು. ಅವರಲ್ಲಿ ವೆಂಕಟಸುಬ್ಬಯ್ಯನವರೇ ಹಿರಿಯರು. ಆಸ್ತಿ ವಿಭಾಗವಾಗುವ ಸಂದರ್ಭದಲ್ಲಿ ಅಣ್ಣತಮ್ಮಂದಿರಲ್ಲಿ ಮನಸ್ತಾಪಗಳು ಉದ್ಭವಿಸಿ, ವೆಂಕಟಸುಬ್ಬಯ್ಯನವರು ತಂಜಾವೂರನ್ನು ಬಿಟ್ಟು ಮೈಸೂರಿಗೆ ಬಂದು ನೆಲಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರು ರಾಜ್ಯಭಾರವನ್ನು ತಾವೇ ಸ್ವತಃ ವಹಿಸಿಕೊಂಡ ತರುಣ. ವಿಜಯನಗರ ಸಾಮ್ರಾಜ್ಯವೈಭವದಂತೆಯೇ ಮೈಸೂರು ರಾಜ್ಯವೂ ಕಂಗೊಳಿಸಬೇಕೆಂಬ ಉದ್ದೇಶದಿಂದ ದಿವಾನ್ ಪೂರ್ಣಯ್ಯನವರು ಹುಮ್ಮಸ್ಸಿನಿಂದ ಪ್ರಯತ್ನಿಸುತ್ತಿದ್ದರು. ಮಹಾರಾಜರಿಗೆ ಗಾನಕಲೆಯ ಪರಿಚಯಮಾಡಿಕೊಡಲು ವೀಣೆ ವೆಂಕಟಸುಬ್ಬಯ್ಯನವರನ್ನು ಗೊತ್ತು ಮಾಡಿದರು. ಕ್ರಮೇಣ, ವೆಂಕಟಸುಬ್ಬಯ್ಯನವರು ಇಡೀ ರಾಜ್ಯದಲ್ಲೇ ಅತ್ಯಂತ ಪ್ರಭಾವಶಾಲಿಗಳಾದ ವ್ಯಕ್ತಿಗಳಾದರು. ಸಂಗೀತ ವಿದ್ವಾಂಸರು, ರಾಜಗುರುಗಳು ಮಾತ್ರವಲ್ಲದೆ ಪ್ರಮುಖ ರಾಜಕಾರಣಿಗಳಾಗಿಯೂ ಖ್ಯಾತಿಗೊಂಡರು. ವೀಣೆ ವೆಂಕಟಸುಬ್ಬಯ್ಯನವರು ಅಂದರೆ ಕೃಷ್ಣರಾಜ ಒಡೆಯರಿಗೆ ಒಲು ಪ್ರೀತಿ, ಗೌರವ. ಅವರು ಹೇಳಿದ್ದಕ್ಕೆ ಇಲ್ಲ ಅಂದದ್ದೇ ಇಲ್ಲ. ವೆಂಕಟಸುಬ್ಬಯ್ಯನವರ ಮನೆ ಅಂದರೆ ಎರಡನೇ ಅರಮನೆ ಇದ್ದಂತೆ. ಮನೆಯ ಮುಂದೆ ಏಳು ಬಿಚ್ಚುಕತ್ತಿ ಪಹರೆ. ಅರಮನೆಗೆ ಹೋಗಲು ಪಲ್ಲಕ್ಕಿಯೇ ಮೊದಲಾದ ಸಮಸ್ತ ರಾಜ ಮರ್ಯಾದೆಗಳೂ ಕೊಡಲ್ಪಟ್ಟಿದ್ದವು. ಹೀಗೆ ವೈಭವದಿಂದ ಬಾಳಿದವರು ವೆಂಕಟಸುಬ್ಬಯ್ಯನವರು.

ಶೇಷಣ್ಣ ಸುಬ್ಬಣ್ಣನವರು ತಮ್ಮ ವಂಶೀಕರ ಬಗ್ಗೆ ಹೇಳುತ್ತಿದ್ದ ಕಥೆ ಇದು :

ಒಂದು ದಿನ ಬೆಳಿಗ್ಗೆ ಸುಮಾರು 9 ಘಂಟೆ ಸಮಯ. ಕೈಲಿ ಒಂದು ತಂಬೂರಿ, ಹೆಗಲಿನಲ್ಲಿ ಒಂದು ಚೀಲವನ್ನು ಹಾಕಿಕೊಂಡು ಅಪರಿಚಯಸ್ಥನೊಬ್ಬ ವೆಂಕಟಸುಬ್ಬಯ್ಯನವರ ಮನೆ ಮುಂಭಾಗಕ್ಕೆ ಬಂದು ನಿಂತರು. "ಶುಂಠಿ ವೆಂಕಟರಮಣಯ್ಯ ಅನ್ನುವನೊಬ್ಬ ಬಂದಿದ್ದಾನೆಂದು ತಿಳಿಸು" ಎಂದು ಕಾವಲುಗಾರನಿಗೆ ತಿಳಿಸಿದರು. ಸೇವಕನು ತಂದ ಸುದ್ದಿಯನ್ನು ಕೇಳಿದೊಡನೆಯೇ ವೆಂಕಟಸುಬ್ಬಯ್ಯನವರು ಮಹಡಿಯಿಂದ ಇಳಿದು ಬಂದು ಅತ್ಯಂತ ಗೌರವದಿಂದ ಸ್ವಾಗತಿಸಿ ಒಳಗೆ ಕರೆದುಕೊಂಡು ಹೋದರು. ಕೊಂಚ ಹೊತ್ತು ಲೋಕಾಭಿರಾಮವಾಗಿ ಮಾತುಕತೆ ನಡೆಯಿತು. ಫಲಹಾರವಾಯಿತು. "ಏನಾದರು ಕೊಂಚ ಹಾಡಬಹುದಲ್ಲ" ಅಂದರು ವೆಂಕಟಸುಬ್ಬಯ್ಯನವರು. "ಏನು ಹಾಡಲಿ ?"

"ತಮಗೆ ತೋರಿದ್ದನ್ನ ಹಾಡಬಹುದು"

"ಹಾಗಲ್ಲ, ತಾವೇ ಹೇಳಿಬಿಡಿ"

"ಹಾಗಾದರೆ, ಸ್ವಲ್ಪ ದ್ವಿಜಾವಂತಿರಾಗ ಆಲಾಪನೆಮಾಡಿ"

ಹಾಗಂದೊಡನೆಯೇ ಬಂದಿದ್ದ ಆಗಂತುಕರು ಮರುಮಾತಿಲ್ಲದೇ ತಂಬೂರಿಯನ್ನು ತೆಗೆದುಕೊಂಡು ಹೊರಬಿದ್ದರಂತೆ. ವೆಂಕಟಸುಬ್ಬಯ್ಯನವರಿಗೆ ಇದರ ಅರ್ಥವೇ ಆಗಲಿಲ್ಲ. ಊರೆಲ್ಲ ಹುಡುಕಿಸಿದರೂ ವೆಂಕಟರಮಣಯ್ಯನವರ ಸಮಾಚಾರವೇ ತಿಳಿದುಬರಲಿಲ್ಲ.

ಇದಾದ ಒಂದು ವರ್ಷಕ್ಕೆ ಸರಿಯಾಗಿ ಮತ್ತೆ ಪ್ರಾಪ್ತವಾದರು ವೆಂಕಟರಮಣಯ್ಯನವರು. "ದ್ವಿಜಾವಂತಿ ಹಾಡುವ ವೆಂಕಟರಮಣಯ್ಯ ಬಂದಿದ್ದಾನೆಂದು ತಿಳಿಸು ಯಜಮಾನರಿಗೆ" ಎಂದು ಸೇವಕನಿಗೆ ಹೇಳಿದರು. ವರ್ತಮಾನ ಕೇಳಿದ ಕ್ಷಣವೇ ವೆಂಕಟಸುಬ್ಬಯ್ಯನವರಿಗೆ ಅತ್ಯಂತ ಹರ್ಷವಾಯಿತು. ದಡಬಡನೆ ಓಡಿ ಬಂದು ವೆಂಕಟರಮಣಯ್ಯನವರನ್ನು ಆಲಿಂಗಿಸಿಕೊಂಡರು. ಮಹಡಿಯಮೇಲೆ ಹಜಾರದಲ್ಲಿ ಇಬ್ಬರೂ ಕೂತರು. ಮರುಮಾತಿಲ್ಲದೆ ತಂಬೂರಿ ಶ್ರುತಿಮಾಡಿ ವೆಂಕಟರಮಣಯ್ಯನವರು ದ್ವಿಜಾವಂತಿರಾಗ ಹಾಡಲುಪಕ್ರಮಿಸಿದರು. ಹಾಡುತ್ತ ಹಾಡುತ್ತ ಅಂತರ್ಮುಖಿಗಳಾದರು. ವೆಂಕಟಸುಬ್ಬಯ್ಯನವರ ನೇತ್ರಗಳಿಂದ ಆನಂದ ಬಾಷ್ಪಗಳುದುರಿದವು. ತಕ್ಷಣವೇ ಸದ್ದುಮಾಡದೆ ಅಲ್ಲಿಂದ ಎದ್ದು, ಪಲ್ಲಕ್ಕಿಯನ್ನು ತರಹೇಳಿ ಅರಮನೆಗೆ ಹೊರಟರು.

" ಮಹಸ್ವಾಮಿ "

" ಏನು ವೆಂಕಟಸುಬ್ಬಯ್ಯನವರೇ ? "

" ನಮ್ಮ ಮನೆಗೆ ಈಗಲೇ ಬಿಜಯಮಾಡಿಸಬೇಕು ಪ್ರಭು "

" ವಿಶೇಷವೇನು, ಅಯ್ಯನವರೇ ?

" ಪ್ರಭು, ಕಾಲ ವಿಳಂಬಕ್ಕೆ ಅವಕಾಶವಿಲ್ಲ. ಮನೆಗೆ ದಯಮಾಡಿಸಿದರೆ ವಿಷಯ ತಾನೇ ಅರ್ಥವಾಗುತ್ತೆ "

ಅದೇ ಪಲ್ಲಕ್ಕಿಯಲ್ಲೇ ಅಯ್ಯನವರೊಡನೆ ಪ್ರಭುಗಳೂ ಹೊರಟು ಬಂದರು. ವೆಂಕಟರಮಣಯ್ಯನವರ ಗಾನವಾಹಿನಿ ತಾನೇತಾನಾಗಿ ಪ್ರವಹಿಸುತ್ತಿದೆ. ವಿದ್ವಾಂಸರು ಇನ್ನೂ ಸಮಾಧಿ ಸ್ಥಿತಿಯಲ್ಲೇ ಇದ್ದಾರೆ. ತಲೆಯ ಮೇಲೆ ಸಿಂಬೆಯ ಹಣ್ಣನ್ನಿಟ್ಟರೂ ಕೆಳಗೆ ಬೀಳದಷ್ಟು ಗಂಭೀರವಾಗಿ ಕುಳಿತು ಹಾಡುತ್ತಿದ್ದಾರೆ. ವೆಂಕಟಸುಬ್ಬಯ್ಯನವರೂ, ಮಹಾರಾಜರೂ ಬೆಕ್ಕಿನ ಹೆಜ್ಜೆಗಳನ್ನಿಡುತ್ತಾ, ಹೋಗಿ ಮೆಲ್ಲಗೆ ಕೂತರು. ಸುಮಾರು ಮಧ್ಯಾನ್ಹ ಎರಡುಗಂಟೆಯ ಹೊತ್ತಿಗೆ ವೆಂಕಟರಮಣಯ್ಯನವರು ಮುಚ್ಚಿದ್ದ ಕಣ್ಣುಗಳನ್ನು ತೆರೆದರು; ಅಯ್ಯನವರ ಜೊತೆಯಲ್ಲಿ ಬೇರೊಂದು ವ್ಯಕ್ತಿಯನ್ನು ಕಂಡು ವಿಸ್ಮಿತರಾದರು. ವೆಂಕಟಸುಬ್ಬಯ್ಯನವರು ವೆಂಕಟರಮಣಯ್ಯನವರನ್ನು ಎಬ್ಬಿಸಿ, ಮುಜರೆ ಮಾಡಿಸಿದರು. " ವೆಂಕಟರಮಣಯ್ಯನವರೇ! ಇಗೋ, ಇವರೇ ನಮ್ಮ ಪ್ರಭುಗಳು, ಮೈಸೂರು ರತ್ನ ಸಿಂಹಾಸನಾಧೀಶ್ವರರು—ಮುಮ್ಮಡಿ ಕೃಷ್ಣರಾಜ ಪ್ರಭುಗಳು, ವಿದ್ವಜ್ಜನ ಪೋಷಕರು. ಇನ್ನು ನಿಮ್ಮ ಯೋಗದೆಶೆ ಪ್ರಾರಂಭವಾದಂತೆಯೇ ಸರಿ. ಪ್ರಭು ಕಟಾಕ್ಷಕ್ಕೆ ಪಾತ್ರರಾದಿರಿ " ಎಂದರು. ಮಹಸ್ವಾಮಿಯವರಿಗೂ, ವೆಂಕಟರಮಣಯ್ಯನವರಿಗೂ ಅಂದು ಅಯ್ಯನವರ ಮನೆಯಲ್ಲೇ ಭೋಜನ ಸತ್ಕಾರಗಳು ಜರುಗಿದವು.

ಅರಮನೆಯಲ್ಲಿ ವೆಂಕಟರಮಣಯ್ಯನವರ ಕಛೇರಿಗಳಾದವು. ಸುಪ್ರೀತರಾದ ಪ್ರಭುವರ್ಯರು ವಿದ್ವಾಂಸರಿಗೆ 60 ವರಹ ಸಂಬಳ ಮಾಡಿ ಕೊಟ್ಟರು. 60 ಸೇರು ಅಕ್ಕಿ ಖಾಸಾ ಲವಾಜಮೆ ಅಪ್ಪಣೆಯಾಯಿತು. ವೆಂಕಟರಮಣಯ್ಯನವರಿಗೆ ಕನಕಾಭಿಷೇಕ ಮಾಡಿ ಗೌರವಿಸಿದರು. ತಮ್ಮ ಅಂತ್ಯಕಾಲದವರೆಗೆ ವೆಂಕಟರಮಣಯ್ಯನವರು ಮೈಸೂರಿನಲ್ಲೇ ನೆಲಸಿದರು. ಅವರ ಹೆಂಡತಿ ಪತಿಯ ಚಿತೆಯಲ್ಲಿ ಸಹಗಮನ ಮಾಡಿದ

ರಂತೆ! ಪಶ್ಚಿಮವಾಹಿನಿಯ ಕೃಷ್ಣವನದಲ್ಲಿ ಅವರು ಬೃಂದಾವನಸ್ಥರಾದರು. ಈ ಸಂದರ್ಭದಲ್ಲಿ ವೆಂಕಟಸುಬ್ಬಯ್ಯನವರ ಮನೆಯಿಂದ ವಿಶೇಷವಾಗಿ ಧನ ಧಾನ್ಯಗಳ ಸರಬರಾಜಾಯಿತೆಂದು ಮೊನ್ನೆ ಮೊನ್ನೆಯವರಿಗೂ ಇದ್ದ ದಾಖಲೆಗಳಿಂದ ತಿಳಿದುಬರುತ್ತದೆ.

ವೆಂಕಟಸುಬ್ಬಯ್ಯನವರ ದಿವಸದಲ್ಲಿ ಶುಂಠಿ ವೆಂಕಟರಮಣಯ್ಯನವರು ಮೈಸೂರಿಗೆ ಬಂದಿದ್ದರೆಂಬುದಕ್ಕೆ ಮತ್ತೊಂದು ನಿದರ್ಶನವಿದೆ. ಒಂದು ದಿನ ಸಂಜೆ, ಆಳಿದ ಮಹಸ್ವಾಮಿಯುವರಾದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ, ಅರಮನೆಯ ಸಂಗೀತ ಪಾಠಶಾಲೆಯಲ್ಲಿ ಅಠಾಣರಾಗ ಚರ್ಚೆಗೆ ಬಂದಿತು. ಚರ್ಚೆ ಮಹಾರಾಜರ ಸಮ್ಮುಖದಲ್ಲೇ ನಡೆಯಿತು. ಅಠಾಣರಾಗಕ್ಕೆ ಅಂತರ ಗಾಂಧಾರ ಪ್ರಯೋಗ ಉಂಟೇ ಅಥವಾ ಇಲ್ಲವೇ ಎಂಬುದೇ ಚರ್ಚೆಯ ವಿಷಯ. ಆಗ ವೀಣೆ ಶೇಷಣ್ಣನವರು ಪ್ರಭುಗಳಿಗೆ ಅರಿಕೆಮಾಡುತ್ತ, ವೆಂಕಟಸುಬ್ಬಯನವರ ಮೇಲೆ ಶುಂಠಿವೆಂಕಟ ರಮಣಯ್ಯನವರು ಒಂದು ಲಕ್ಷಣಗೀತೆಯನ್ನು ಅಠಾಣರಾಗದಲ್ಲಿ ರಚಿಸಿ ಹಾಡಿದ್ದರೆಂದೂ, ಅದು ತಮಗೆ ಪಾಠವಾಗಿದೆಯೆಂದೂ, ಅದರಲ್ಲಿ ಅಂತರ ಗಾಂಧಾರ ಪ್ರಯೋಗ ಮಾಡಿದ್ದರೆಂದೂ ವಿವರಿಸಿದರು. ವೀಣೆ ಸುಬ್ಬಣ್ಣ ನವರು ಆ ಲಕ್ಷಣ ಗೀತೆಯನ್ನು ಹಾಡಿ ತೋರಿಸಿದರು.

ವೆಂಕಟಸುಬ್ಬಯ್ಯನವರು ಪುತ್ರಸಂತತಿ ಇಲ್ಲದಿದ್ದ ನಿಮಿತ್ತ ಶೇಷಣ್ಣ ನವರನ್ನು ದತ್ತುವನ್ನಾಗಿ ಸ್ವೀಕಾರಮಾಡಿಕೊಂಡರು. ಇವರೇ ಕ್ರಮೇಣ ದೊಡ್ಡ ಶೇಷಣ್ಣನೆಂದು ಸಂಬೋಧಿಸಲ್ಪಟ್ಟರು. ಇವರ ಮಕ್ಕಳೇ ಮೈಸೂರಿನ ವೀಣೆ ಸುಬ್ಬಣ್ಣನವರು.

೩

ವೀಣೆ ಸೋಮಣ್ಣನವರೆಂಬುವರು ಶರಭೋಜ ಮಹಾರಾಜನ ಆಸ್ಥಾನದ ವಿಖ್ಯಾತ ವಿದ್ವಾಂಸರು. ಇವರಿಗೆ ಮೂರು ಜನ ಮೊಮ್ಮಕ್ಕಳು. ಕಡೆಯವರೇ ಚಿಕ್ಕರಾಮಪ್ಪನವರು .ಶರಭೋಜ ಮಹಾರಾಜನ ಕೃಪೆಗೆ ಪಾತ್ರರಾದ ಸೋಮಣ್ಣನವರಿಗೆ ಧಾರಾನೆಲ್ಲೂರೇ ಮೊದಲಾದ ಜಹಗೀರಿ ಗಳು ದೊರೆತಿದ್ದವು. ಆಸ್ತಿಪಾಸ್ತಿಗಳ ಪಾಲಿನ ವಿಷಯದಲ್ಲಿ ವ್ಯಾಜ್ಯ ತಲೆದೋರಿದ್ದರ ಪರಿಣಾಮವಾಗಿ, ಚಿಕ್ಕರಾಮಪ್ಪನವರು ತಂಜಾವೂರನ್ನು ಬಿಟ್ಟು ಮೈಸೂರಿಗೆ ಬಂದು ನೆಲಸಿದರು; ವೆಂಕಟಸುಬ್ಬಯ್ಯನವರನ್ನು

ಆಶ್ರಯಿಸಿದರು. ಅರಮನೆಯಲ್ಲಿ ಆರು ವರಹ ಸಂಬಳವಾಯಿತು. ವೀಣೆ ವೆಂಕಟಸುಬ್ಬಯ್ಯನವರು ಸುಮಾರು ಕ್ರಿ.ಶ. 1838 ನೇ ಇಸವಿಯಲ್ಲಿ ವಿಧಿವಶರಾದ ಬಳಿಕ ಚಿಕ್ಕರಾಮಪ್ಪನವರು ಅವರ ಸ್ಥಾನವನ್ನಲಂಕರಿಸಿದರು. ಸಂಸ್ಥಾನದ ಹಿರಿಯ ವಿದ್ವಾಂಸರೂ, ಮಹಾಪ್ರಭುಗಳ ಆಪ್ತವರ್ಗಕ್ಕೆ ಸೇರಿದ ಗಣ್ಯವ್ಯಕ್ತಿಗಳೂ ಆಗಿ ಅತ್ಯಂತ ಪ್ರಭಾವಶಾಲಿಗಳಾಗಿ ಬಾಳಿದರು.

ಚಿಕ್ಕರಾಮಪ್ಪನವರಿಗೆ ಇಬ್ಬರು ಗಂಡು ಮಕ್ಕಳು ಮತ್ತು ಇಬ್ಬರು ಹೆಣ್ಣು ಮಕ್ಕಳು. ಕಡೆಯವರೇ ವೀಣೆ ಶೇಷಣ್ಣನವರು. ವೀಣೆ ವೆಂಕಟ ಸುಬ್ಬಯ್ಯನವರ ಅಕ್ಕನವರೇ ವೀಣೆ ಶೇಷಣ್ಣನವರ ಅಜ್ಜಿ

೪

ಶೇಷಣ್ಣ ಮತ್ತು ಸುಬ್ಬಣ್ಣನವರ ವಂಶಗಳು ಹೇಗೆ ಒಂದೇ ವೃಕ್ಷದ ಎರಡು ಶಾಖೆಗಳಂತೆ ಬೆಳೆದು ಬಂದವೋ ಗುರು ಶಿಷ್ಯ ಪರಂಪರೆಯೂ ಕೂಡ ಹಾಗೆಯೇ ರೂಪುಗೊಂಡಿತ್ತು. ವೆಂಕಟಸುಬ್ಬಯ್ಯನವರಿಂದ ಚಿಕ್ಕ ಶೇಷಣ್ಣನವರ ತಂದೆ ಚಿಕ್ಕರಾಮಪ್ಪನವರಿಗೆ ಪಾಠ. ಚಿಕ್ಕರಾಮಪ್ಪನವ ರಿಗೆ ಸುಬ್ಬಣ್ಣನವರ ತಂದೆ ದೊಡ್ಡ ಶೇಷಣ್ಣನವರಲ್ಲಿ ಶಿಕ್ಷಣ. ದೊಡ್ಡ ಶೇಷಣ್ಣನವರ ಶಿಷ್ಯರು ಚಿಕ್ಕ ಶೇಷಣ್ಣನವರು. ಚಿಕ್ಕಶೇಷಣ್ಣನವರ ಶಿಷ್ಯರು ವೀಣೆ ಸುಬ್ಬಣ್ಣನವರು. ವೀಣೆ ಸುಬ್ಬಣ್ಣನವರೇ ಶೇಷಣ್ಣನವರ ಮೊಮ್ಮ ಕ್ಕಳು ವೆಂಕಟನಾರಾಯಣರಾಯರ ಗುರುಗಳು. ಹೀಗೆ ಎರಡು ವೈಣಿಕ ವಂಶಗಳು ಶಾರದಾ ದೇವಾಲಯದ ಎರಡು ನಂದಾದೀವಿಗೆಗಳಂತೆ ಪ್ರಾಜ್ವಲ್ಯಮಾನವಾಗಿ ಬೆಳಗಿ ಬಂದಿವೆ.

ನಾನು ಚಿಕ್ಕಂದಿನಿಂದಲೂ ವೀಣೆ ಸುಬ್ಬಣ್ಣನವರ ಮನೆಯಲ್ಲೇ ಬೆಳೆದು ಬಂದೆನಾದ್ದರಿಂದ ಶೇಷಣ್ಣ, ಸುಬ್ಬಣ್ಣನವರ ಪರಿಚಯವಾಗಲು ಅವಕಾಶ ದೊರೆಯಿತು. ಮೊದಲು ಮಿತ್ರರಾಗಿ ದೊರೆತ ಶೇಷಣ್ಣನವರೇ ಕಾಲ ಕ್ರಮದಲ್ಲಿ ಗುರುಸ್ವರೂಪರಾಗಲು ಕಾರಣವಾಯಿತು.

ಶೇಷಣ್ಣನವರು ಜನಿಸಿದ್ದು 1852 ರಲ್ಲಿ. ತಂದೆ ಚಿಕ್ಕರಾಮಪ್ಪ ನವರಲ್ಲೇ ಶಿಕ್ಷಣ. ಬಾಲ್ಯದಿಂದಲೇ ಅಸಾಧಾರಣ ಸ್ವರ ಲಯ ಜ್ಞಾನ. ಬೆಳೆಯುವ ಪೈರು ಮೊಳಕೆಯಲ್ಲೇ ಗೊತ್ತಾಗಿತ್ತು. ಚಿಕ್ಕರಾಮಪ್ಪನವರು ಮಗುವಿನ ಆಶಾದಾಯಕ ಭವಿಷ್ಯವನ್ನು ಕಂಡು ಮನಸ್ಸಿನಲ್ಲಿಯೇ ಹಿಗ್ಗು

ತ್ತಿದ್ದರು. ಮಗುವಿಗೆ ಏಳನೇ ವರ್ಷ ನಡೆಯುತ್ತಿರುವಾಗ್ಗೆ, ಪ್ರಭು ದೃಷ್ಟಿಗೆ ಬರಲು ಅವಕಾಶ ಒಂದು ದೊರೆಯಿತು.

ಪ್ರತಿ ಶಿವರಾತ್ರಿ ಅರಮನೆಯಲ್ಲಿ ವಿಶೇಷ ಪೂಜಾ ಸಮಾರಂಭಗಳು ಜರುಗುವ ವಾಡಿಕೆಯಾಗಿತ್ತು. ಅಂದು ಮುಮ್ಮಡಿ ಕೃಷ್ಣರಾಜ ಒಡೆಯರು ಉಪವಾಸವ್ರತ ಕೈಗೊಂಡು, ರಾತ್ರಿ ಜಾಗರಣೆ ನಡೆಸುತ್ತಿದ್ದರು. ಮತ್ತು ಆ ದಿನ ಸಾಯಂಕಾಲ ಮೊದಲುಗೊಂಡು, ಬೆಳಗಿನ ಝಾವದವರೆಗೂ ಸಂಗೀತ ಕಛೇರಿಗಳನ್ನು ಆಲಿಸುತ್ತಿದ್ದರು. ಮತ್ತೊಂದು ವಿಶೇಷ ಸಂಗತಿ ಯೆಂದರೆ, ಆ ದಿನದ ಕಛೇರಿಗಳಿಗೆ ಎಲ್ಲ ವಿದ್ವಾಂಸರುಗಳಿಗೂ, ಸ್ಥಳ ಪರಸ್ಥಳವೆಂಬ ವ್ಯತ್ಯಾಸವಿಲ್ಲದೆ, ಉಚಿತ ಆಹ್ವಾನವಿರುತ್ತಿತ್ತು. ತಮಗೆ ಬೇಕಾದ ಪರಸ್ಥಳದ ವಿದ್ವಾಂಸರುಗಳನ್ನ ಸ್ಥಳದ ವಿದ್ವಾಂಸರುಗಳು ಜೊತೆ ಯಲ್ಲಿ ಕರೆದುಕೊಂಡು ಹೋಗಲು ಅನುಮತಿ ಇತ್ತು. ಅಂದಿನ ಕಛೇರಿಯ ವೈಶಿಷ್ಟ್ಯವೆಂದರೆ, ಒಬ್ಬ ವಿದ್ವಾಂಸ ಯಾವುದಾದರೊಂದು ಪಲ್ಲವಿಯನ್ನು ಹಾಡಿ, ಸಮ್ಮೇಳನವನ್ನು ಪ್ರಾರಂಭಿಸಬೇಕು. ನಂತರ ಉಳಿದ ವಿದ್ವಾಂಸರು ತಮ್ಮ ತಮ್ಮ ಸರದಿ ಬಂದಾಗ ಅದೇ ಪಲ್ಲವಿಯನ್ನು ಹಾಡಿಯೋ ನುಡಿ ಸಿಯೋ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸಬೇಕಾಗಿತ್ತು. ಆ ವರ್ಷದ ಶಿವರಾತ್ರಿಯ ಸಂಗೀತಸಮಾರಂಭಕ್ಕೆ ಚಿಕ್ಕರಾಮಪ್ಪನವರು ಮಗನನ್ನು ಸಂಗಡ ಕರೆದುಕೊಂಡು ಹೋಗಿದ್ದರು. ಪರಸ್ಥಳದ ವಿದ್ವಾಂಸರುಗಳ ಪರಿ ಚಯವನ್ನು ಸವಾರಿಗೆ ಮಾಡಿಕೊಡಲಾಯಿತು. ಕಛೇರಿಗಳು ಆರಂಭ ವಾಗಲು ಅಪ್ಪಣೆಯಾಯಿತು.

ಪರಸ್ಥಳದ ಹಿರಿಯ ವಿದ್ವಾಂಸರೊಬ್ಬರು ಪಲ್ಲವಿಯೊಂದನ್ನು ಹಾಡಿ ಕಛೇರಿಯನ್ನು ಉಪಕ್ರಮಿಸಿದರು. ಕ್ರಮ ಕ್ರಮವಾಗಿ ಆಸ್ಥಾನ ವಿದ್ವಾಂಸರು ಗಳ ಸರದಿಯೂ ಬಂತು. ಪರಿಸ್ಥಿತಿ ನಿರಾಶಾದಾಯಕವಾಗಿ ತೋರಹತ್ತಿತು. ಪಲ್ಲವಿಯನ್ನು ನುಡಿಸಲು ಒಬ್ಬಿಬ್ಬರು ಪ್ರಯತ್ನಪಟ್ಟು ವಿಫಲರಾದರು. ಈ ಮಧ್ಯೆ ಬಾಲಕ ಶೇಷಣ್ಣನಿಗೆ ಪಲ್ಲವಿಯನ್ನು ತಾನು ಹಾಡಬೇಕೆಂಬ ಕುತೂಹಲ ಕೆರಳಿತ್ತು. ಮೊಣಕೈಯಿಂದ ಪಕ್ಕದಲ್ಲಿ ಕೂತಿದ್ದ ತಂದೆ ಯನ್ನು ತಿವಿಯುತ್ತ ಕಿವಿಯಲ್ಲಿ ಪಿಸುಗುಟ್ಟಿದ, ತನ್ನ ಆಸೆಯನ್ನು. ಹುಷ್! ಸುಮ್ಮನೆ ಗಲಾಟೆ ಮಾಡದೇ ಕೂತುಕೋ, ಸವಾರಿ ಇದೆ" ಎಂದು

ಹುಡುಗನ ಬಾಯಿ ಮುಚ್ಚಿಸಿದ್ದರು, ಚಿಕ್ಕರಾಮಪ್ಪನವರು. ಉಳಿದವರು ಸುಮ್ಮನಾಗಿಬಿಟ್ಟರು. ಕೃಷ್ಣರಾಜ ಒಡೆಯರಿಗೆ ಮುಖ ಕಿರಿದಾಯಿತು.

" ಚಿಕ್ಕರಾಮು "

" ಪ್ರಭು "

" ಒಂದು ಮೊರದಲ್ಲಿ ಅರಿಶಿನ, ಕುಂಕವು, ಬಳೆ, ಬಿಚ್ಚೋಲೆ ತರಸಪ್ಪ ! ಇನ್ನೇನು ಲೆಕ್ಕ ಹಾಕ್ತಾ ಕೂತಿದ್ದೀಯ ? "

" ಪ್ರಭು........ "

" ಪ್ರಭುವೂ ಇಲ್ಲ ಗಿಭುವೂ ಇಲ್ಲ......ವಿನೋದಕ್ಕೆ ವಿನೋದವೂ ಆಗಲಿ, ಸ್ಪರ್ಧೆಗೆ ಸ್ಪರ್ಧೆಯೂ ನಡೆಯಲಿ ಎಂದು ಬಗೆದು ಮಾಡಿದ ಏರ್ಪಾಡು ನಮ್ಮ ಮಾನಗೌರವಕ್ಕೇ ಚ್ಯುತಿ ತಂದಿತು ಇವತ್ತು" ಎಂದು ನಿಟ್ಟುಸಿರುಬಿಟ್ಟು ಸುಮ್ಮನಾದರು ಮಹಾರಾಜರು.

ಚಿಕ್ಕರಾಮಪ್ಪನವರ ಮುಖ ಕೆಂಪೇರಿತು.

" ಮಹಾಸ್ವಾಮಿ, ಮಹಾಸ್ವಾಮಿಯವರ ಉಪ್ಪು ತಿಂದು ಸಂಸ್ಥಾನದ ಸ್ಥಾನಮಾನಗಳನ್ನು ಉಳಿಸುವ ಯೋಗ್ಯತೆ ಇಲ್ಲದೇ ಇದ್ದರೆ, ನಾವುಗಳು ಇದ್ದರೇನು ? ಹೋದರೇನು ? ಬಳೆ ಬಿಚ್ಚೋಲೆ ತೊಟ್ಟುಕೊಳ್ಳುವಂಥ ಗಂಡಸರು ನಮ್ಮಲ್ಲಾರೂ ಇಲ್ಲ...ಇದು ಯಾವ ಮಹಾಪಲ್ಲವಿ ಎಂದು ವಿದ್ವಾಂಸರುಗಳು ಪ್ರಯತ್ನಿಸಬೇಕು ? ಒಂದು ಮಗು ಹಾಡಬಲ್ಲದು. ಇದನ್ನ ಕೇಳೋಣವಾಗಲಿ. ಲಾ...ಶೇಷಣ್ಣ-ಬಾರೋ ಇಲ್ಲಿ, ಪ್ರಭುಗಳಿಗೆ ಮುಜರೇ ಮಾಡೋ – ಹಾಡೋ ಆ ಪಲ್ಲವಿಯನ್ನ...... " ಎಂದರು.

" ಚಿಕ್ಕರಾಮು·····ಯಾರೋ ಈ ಮಗು ? "

" ಮೊದಲು ಅವನು ಹಾಡುವುದನ್ನ ಸವಾರಿ ಕೇಳೋಣವಾಗಲಿ, ನಂತರ ವಿಜ್ಞಾಪಿಸಿಕೊಳ್ಳುತ್ತೇನೆ ''.

ಶೇಷಣ್ಣ ಪಲ್ಲವಿಯನ್ನ ಅದ್ಭುತವಾಗಿ ಹಾಡಿ ವಿದ್ವಾಂಸರುಗಳೆಲ್ಲ ಮೂಗಿನಮೇಲೆ ಬೆರಳಿಟ್ಟುಕೊಳ್ಳುವಂತೆ ಮಾಡಿದ. ಪ್ರಭುಗಳ ಆನಂದಕ್ಕೆ ಮಿತಿಯೇ ಇಲ್ಲ. ಬಾಚಿ ತಬ್ಬಿಕೊಂಡು ಮಗುವನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡರು. ಬೆಳಗಿನ ಝಾವದ ಗುಂಡು ಹಾರುವ ಸಮಯ ವಾಗಿತ್ತು. ಸಭೆ ಮುಕ್ತಾಯವಾಯಿತು. ಬಂದಿದ್ದ ವಿದ್ವಾಂಸರುಗಳೆಲ್ಲ ಫಲ ತಾಂಬೂಲಗಳನ್ನು ಸ್ವೀಕರಿಸಿ ತೆರಳಿದರು. ಮಗು ಶೇಷಣ್ಣ ಮತ್ತು ಚಿಕ್ಕರಾಮಪ್ಪ ಮಾತ್ರ ಅಲ್ಲೇ ಉಳಿದರು ಪ್ರಭುಗಳ ಇಚ್ಛೆಯಂತೆ.

" ಚಿಕ್ಕರಾಮು.... "

" ಮಹಾಸ್ವಾಮಿ.... "

" ಯಾರು ಈ ಮಗು ?

" ಪ್ರಭು ನನ್ನ ಹುಡುಗ ''

" ಇಷ್ಟೇನೇ ನಿನ್ನ ಬುದ್ಧಿ, ಚಿಕ್ಕರಾಮು ? "

" ಅರ್ಥವಾಗಲಿಲ್ಲ ಪ್ರಭುಗಳ ಚಿತ್ತ ! ''

" ಇವತ್ತೇನೋ ನಮ್ಮ ಸಂಸ್ಥಾನದ ಗೌರವವನ್ನ ಉಳಿಸಿತು ಮಗು. ಆದರೆ, ನಾಳೆ ಈ ವಿದ್ವಾಂಸರುಗಳೆಲ್ಲ ಸೇರಿ ಅದರ ಜೀವಕ್ಕೇ ಸಂಚುಕಾರ ತಂದರೆ ಗತಿಯೇನೋ ? "

" ಬಿಡಿ ಮಹಾಸ್ವಾಮಿ ! ಸನ್ನಿಧಾನದ ಕೀರ್ತಿ ಗೌರವಗಳಿಗಿಂತ ಹೆಚ್ಚೆ ನಮ್ಮ ಪ್ರಾಣ ? ಅರಮನೆಯ ಉಪ್ಪುತಿಂದಮೇಲೆ ಈ ದೇಹವೇ ಅರಸರಿಗಾಗಿ ಮೀಸಲು.

" ಬಹಳ ಸಂತೋಷ ಚಿಕ್ಕರಾಮುಪ್ಪ ! ರತ್ನವನ್ನ ಜೋಪಾನವಾಗಿ ನೋಡಿಕೋ. ಮುಂದೆ ನಮ್ಮ ಸಂಸ್ಥಾನಕ್ಕೆ ಆಚಂದ್ರಾರ್ಕವಾದ ಕೀರ್ತಿ ತರುತ್ತಾನೆ ನಿನ್ನ ಮಗ ! ನೀನು ರತ್ನದ ಮುಸುಕನ್ನು ತೆಗೆದು ಬಹಿರಂಗ ಪಡಿಸಿದ್ದು ಬಹು ತಪ್ಪು ! ಜೋಕೆ, ಬಲು ಜೋಕೆ '' ಎಂದು ಅಪ್ಪಣೆ ಕೊಡಿಸಿ ಮಗುವಿಗೆ ಮೂರುಕಾಯಿ ಇಡುಗಾಯಿ ಹಾಕಿಸಿ, ರಕ್ಷೆಹಾಕಿಸಿದ ರಂತೆ, ಪ್ರಭುಗಳು. ಮಾರನೆಯ ದಿನ ವಿದ್ವಜ್ಜನ ಸಭೆಯಲ್ಲಿ ಮಗು ಶೇಷಣ್ಣ ನಿಗೆ ಶಾಲುಜೋಡಿ, ಮುತ್ತಿನ ಕಂಠಿಯನ್ನು ಸಂಭಾವನೆಮಾಡಿ ಮುಕ್ತ ಕಂಠದಿಂದ ಹೊಗಳಿದರಂತೆ. ಬಾಲ್ಯದಲ್ಲೇ ದೊರೆತ ಈ ಅಪೂರ್ವ ರಾಜ ಸನ್ಮಾನ ಶೇಷಣ್ಣನಿಗೆ ತನ್ನ ವ್ಯಾಸಂಗದಲ್ಲಿ ಇನ್ನೂ ತೀವ್ರ ಆಸಕ್ತಿಯ ನ್ನುಂಟುಮಾಡಿ, ಪ್ರಗತಿ ಸಾಧನವಾಯಿತು.

ಶೇಷಣ್ಣನಿಗೆ ಹನ್ನೆರಡನೇ ವರ್ಷ ಪ್ರಾಪ್ತವಾದ ತರುಣದಲ್ಲೇ ತಂದೆ ಮರಣಹೊಂದಿದರು. ಶೇಷಣ್ಣನ ಲಾಲನೆ ಪಾಲನೆಗಳು ಅಕ್ಕ ವೆಂಕಮ್ಮ ನವರ ಪಾಲಿಗೆ ಬಿತ್ತು. ವೆಂಕಮ್ಮನವರಿಗೆ ಸಂಗೀತದಲ್ಲಿ ಅಸಾಧಾರಣ ವಾದ ಜ್ಞಾನ ಮತ್ತು ಅಪಾರ ಅನುಭವ. ಶೇಷಣ್ಣನವರಿಗಿಂತಲೂ ಹೆಚ್ಚಿನ ಜ್ಞಾನವಿತ್ತೆಂದರೆ ಅತಿಶಯೋಕ್ತಿಯಲ್ಲ. ವೆಂಕಮ್ಮನವರಿಗೆ ನನ್ನ ತೀರ್ಥರೂಪುರವರಲ್ಲಿ ಗುರುಭಾವನೆ. ಅವರ ಪುರಾಣಶ್ರವಣವೆಂದರೆ

ವೆಂಕಮ್ಮನವರಿಗೆ ಬಲು ಆಸಕ್ತಿ. ನನ್ನನ್ನು ಕಂಡರೆ ಅತಿ ಪ್ರೀತಿ, ವಿಶ್ವಾಸ. ಶೇಷಣ್ಣನವರು ವೀಣೆ ನುಡಿಸುತ್ತಿದ್ದರೆ, "ಶ್ರುತಿ ಹೋಯ್ತಲ್ಲೋ ಶೇಷಣ್ಣ! ತಾಳವೇ ನಿಲ್ಲಲ್ವಲ್ಲೋ ಶೇಷಣ್ಣ?" ಎಂದು ಟೀಕಿಸುತ್ತಿದ್ದುದು ನನಗಿನ್ನೂ ಚೆನ್ನಾಗಿ ಜ್ಞಾಪಕದಲ್ಲಿದೆ. ಯಾವ ಸಂಗೀತವನ್ನೂ ಸುಲಭವಾಗಿ ಒಪ್ಪಿದ್ದೇ ಇಲ್ಲ ಆಕೆ. ಒಮ್ಮೆ, ಶೇಷಣ್ಣನವರು ಪ್ರವರ್ಧಮಾನಕ್ಕೆ ಬಂದು ಲಬ್ಧ ಪ್ರತಿಷ್ಠರಾದ ಮೇಲೆ ನಡೆದ ಸಂಗತಿಯೊಂದು ನನಗಿನ್ನೂ ನೆನಪಿದೆ. ನಾನೂ ಕೂಡ ನನ್ನ ಪೂಜ್ಯ ಗುರುಗಳಾದ ಸುಬ್ರಹ್ಮಣ್ಯಯ್ಯರ್ ಅವರಲ್ಲಿ ಶಿಕ್ಷಣ ಪಡೆದು ಆಗತಾನೆ ಮೈಸೂರಿಗೆ ಹಿಂತಿರುಗಿ ಬಂದಿದ್ದೆ. ಶೇಷಣ್ಣನವರೂ, ಸುಬ್ಬಣ್ಣನವರೂ ನಾನೂ ಪ್ರಖ್ಯಾತ ವಿದ್ವಾಂಸರೊಬ್ಬರ 'ಸಂಗೀತ ಕಛೇರಿಗೆ ಹೋಗಿದ್ದೆವು. ಕಛೇರಿಯಾದನಂತರ ಶೇಷಣ್ಣನವರ ಮನೆಯಲ್ಲೇ ಭೋಜನಕ್ಕೆ ಸೇರಿದೆವು. ಊಟಮಾಡುತ್ತಿದ್ದ ಹಾಗೆಯೇ ಕಛೇರಿ ವಿಷಯ ಪ್ರಸ್ತಾಪಕ್ಕೆ ಬಂದಿತು. "ಅಮೋಘವಾಗಿ ಹಾಡಿದ..........." ಅಂದರು ಶೇಷಣ್ಣನವರು. "ಅಡ್ಡಿಯಿಲ್ಲದೆ" ಅಂತ ನಾನೂ ಸುಬ್ಬಣ್ಣನವರೂ ಅನುಮೋದಿಸಿದೆವು. ನಮ್ಮ ಸಂಭಾಷಣೆಯನ್ನು ಕೇಳುತ್ತಿದ್ದ ವೆಂಕಮ್ಮನವರು ಸರಕ್ಕನೆ ಊಟದ ಮನೆಗೆ ಬಂದರು. ಏನು ಶೇಷಣ್ಣ, ಜನ ಮರುಳೋ ಜಾತ್ರೆ ಮರುಳೋ ಅಂದ ಹಾಗೆ, ಜನ ಹೊಗಳ್ತಾರೆಅಂತ ನೀನೂ ಪ್ರಾರಂಭಿಸಿಬಿಟ್ಟೆಯಾ?........ಗೆ ಶಾರೀರ ಇದೆ, ತಾಳಜ್ಞಾನ ಇದೆ ನಿಜ! ಆದರೆ ಸಂಗೀತದ ಗಂಧವೇ ಇಲ್ಲವಲ್ಲೋ? ಭಾವಭರಿತವಲ್ಲದ ಹಾಡುಗಾರಿಕೆ ಸಂಗೀತವೆಂತ ನೀವೂ ಕುಣೀತಿದ್ದೀರಲ್ಲ" ಎಂದು ಗುಡುಗಿದರು. ಮಾತು ಅಲ್ಲಿಗೇ ನಿಂತಿತು. ಅಂಥ ಜ್ಞಾನ ಸಂಗೀತದಲ್ಲಿ, ಅಷ್ಟು ಅನುಭವ ವೆಂಕಮ್ಮನಿಗೆ. "ನೋಡೋ, ಶೇಷಣ್ಣ, ನಮ್ಮ ವಾಸು ಹಾಡಿದರೆ ಅಯ್ಯರ್‌ವಾಳ್ ಹಾಡಿದ ಹಾಗೆಯೇ ಇರುತ್ತಲ್ಲೋ" ಅಂತ ಪ್ರೋತ್ಸಾಹಕರವಾದ ಮಾತುಗಳನ್ನಾಡಿ ಅನೇಕ ವೇಳೆ ನನ್ನನ್ನು ಹುರಿದುಂಬಿಸುತ್ತಿದ್ದರು.

ವೆಂಕಮ್ಮನವರ ಮೇಲ್ವಿಚಾರಣೆಯಲ್ಲಿ ಶೇಷಣ್ಣನವರ ವಿದ್ಯಾವ್ಯಾಸಂಗ ಯಾವ ಅಡ್ಡಿ ಆತಂಕಗಳೂ ಇಲ್ಲದೇ ಸಾಗಿತ್ತು. ಬೆಳಗಿನ ಝಾವ ಗುಂಡು ಹಾರುವ ಮುನ್ನವೇ ಶೇಷಣ್ಣ ಎದ್ದು ಸಾಧಕ ಪ್ರಾರಂಭಿಸಬೇಕು, 8 ಘಂಟೆಯವರೆಗೂ ಸಾಧಕಮಾಡಿ, ನಂತರ ಸ್ನಾನ ಆಹ್ನಿಕ

ಗಳನ್ನು ಮುಗಿಸಿಕೊಂಡು ಸುಬ್ಬಣ್ಣನವರ ಮನೆಗೆ ಬಂದು ದೊಡ್ಡ ಶೇಷಣ್ಣನವರಲ್ಲಿ ಪಾಠ ಹೇಳಿಸಿಕೊಳ್ಳುವುದು, ನಂತರ ಮನೆಗೆ ವಾಪಸ್ಸು ಬಂದು ಪುನಃ ಊಟದ ಸಮಯದವರೆಗೂ ಗುರುಗಳಿಂದ ಕಲಿತ ಪಾಠಗಳ ಅಭ್ಯಾಸ; ಮಧ್ಯಾಹ್ನ ಮೈಸೂರು ಸದಾಶಿವರಾಯರಲ್ಲಿ ಹಾಡುಗಾರಿಕೆಯ ಪಾಠ, ಸಂಜೆ ಮನೆಯಲ್ಲಿ ಅದರ ಪುನರಧ್ಯಯನ, ರಾತ್ರಿ ಹಳೆಯ ಪಾಠಗಳ ಪುನಶ್ಚರಣೆ – ಹೀಗೆ ಸುಮಾರು ಹದಿನೈದು ಹದಿನಾರು ವರ್ಷಗಳ ಪರ್ಯಂತ ಮುಂದುವರೆಯುತ್ತ ಬಂದಿತು. ಶೇಷಣ್ಣನ ಅಧ್ಯಯನ ನಡೆಯುತ್ತಿರುವಾಗಲೆಲ್ಲ ವೆಂಕಮ್ಮನವರ ಗಮನವೆಲ್ಲ ಅಲ್ಲೇ ಇರುತ್ತಿತ್ತು. ಅಭ್ಯಾಸಕ್ರಮದಲ್ಲಿ ಯಾವ ಲೋಪದೋಷಗಳು ತಲೆದೋರುವುದಕ್ಕೂ ಎಡೆಯೇ ಇರುತ್ತಿರಲಿಲ್ಲ. ಶೇಷಣ್ಣ, ಸುಬ್ಬಣ್ಣನವರು ಅನುಸರಿಸಬೇಕಾಗಿದ್ದ ಸಾಧಕದ ಕಾರ್ಯಕ್ರಮಪಟ್ಟಿಗೆ ಕನ್ನಡಿ ಚೌಕಟ್ಟನ್ನು ಹಾಕಿಸಿ ಸುಬ್ಬಣ್ಣನವರ ಮನೆಯಲ್ಲಿ ಗೋಡೆಗೆ ತಗುಲಿಹಾಕಿದ್ದುದು ಮೊನ್ನೆ ಮೊನ್ನೆಯವರೆಗೂ ಇತ್ತು. ಬೆಳಗ್ಗೆ, ಮಧ್ಯಾಹ್ನ, ಸಂಜೆ, ರಾತ್ರಿ ಈ ನಾಲ್ಕು ವೇಳೆ ಆಯಾ ವಾರಗಳಲ್ಲಿ ಸಾಧಕ ಮಾಡಬೇಕಾಗಿದ್ದ ಕೀರ್ತನೆ, ವರ್ಣ ಇತ್ಯಾದಿಗಳನ್ನು ನಿಗದಿಯಾಗಿ ಗೊತ್ತುಮಾಡಲಾಗಿತ್ತು. ಇದರ ಪ್ರಕಾರ, ಒಂದು ದಿವಸದಲ್ಲಿ ಆರು ವರ್ಣ ಇಪ್ಪತ್ತೈದು ಕೀರ್ತನೆ ಮತ್ತು ಘನರಾಗಗಳು, ಎರಡು ಪಲ್ಲವಿಗಳ ಸಾಧಕಮಾಡಬೇಕಾಗಿತ್ತು.

ಶೇಷಣ್ಣನವರು ಮಹಾ ಹಠಸಾಧಕರು. ಗುರುಗಳು ಹೇಳಿದ ಪಾಠವನ್ನು ಕರತಲಾಮಲಕವನ್ನಾಗಿ ಮಾಡಿಕೊಂಡು ಅವರ ಮೆಚ್ಚುಗೆಯನ್ನು ಪಡೆಯುವ ತನಕ ಅವರಿಗೆ ಸಮಾಧಾನವಿಲ್ಲ. ಆದರೆ ಗುರುಗಳು ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸುವುದೇ ವಿರಳವಾಗಿತ್ತು. ಈ ಗುರು ಶಿಷ್ಯರ ಪೈಪೋಟಿಯಲ್ಲಿ ಸಾಧಕ ತಾನೇ ತಾನಾಗಿ ನಡೆದು ವೀಣೆಯ ತಂತಿಗಳನ್ನು ಮಿಡಿಯುವುದೇ ತಡ, ಶಾರದೆಯೇ ಪ್ರತ್ಯಕ್ಷವಾಗಿ ಮಾತನಾಡುವಂತೆ ಭಾಸವಾಗುತ್ತಿತ್ತು. ಹೀಗೆ ಪಾಠಪ್ರವಚನ ನಡೆಯುತ್ತಿರುವಾಗ್ಗೆ ಜರುಗಿದ ಪ್ರಸಂಗವೊಂದು ಈಗಲೂ ನನ್ನ ಸ್ಮೃತಿಪಥದಲ್ಲಿ ಗಾಳಿಯ ಏಟಿಗೆ ನಿಲುಕದ ದೀಪದ ಉರಿಯಂತೆ ಅಲುಗದೆ ನಿಂತಿದೆ.

ಬೇಗಡೆರಾಗದಲ್ಲಿ ತಾನ ನುಡಿಸುವುದನ್ನು ಪಾಠ ಹೇಳಿದ್ದರು. ಶೇಷಣ್ಣನವರು ತಮ್ಮ ಮನಸಾರ ಸಾಧಕಮಾಡಿ ಗುರುಗಳ ಮುಂದೆ ನುಡಿಸಿ ಅವರ ಮೆಚ್ಚುಗೆಯನ್ನು ಎದುರುನೋಡುತ್ತ ಕುಳಿತರು. ಗುರುಗಳು

ಒಂದು ಬಾರಿಯಾದರೂ ತಲೆದೂಗಲಿಲ್ಲ. ಸಮಾಧಾನ ಭಾವವನ್ನು ಹೊರಸೂಸಲಿಲ್ಲ. "ಸಾಲದು ಸಾಧಕ" ಅಂತ ಅಂದು ಮೇಲೆದ್ದರು. ಕಿಡಿಕಿಡಿಯಾದರು ಶೇಷಣ್ಣನವರು. ಆದರೆ ಯತ್ನವಿಲ್ಲ, ಗುರುಗಳಿಗೆ ಪ್ರತಿ ಹೇಳುವಂತಿಲ್ಲ. ಮನೆಗೆ ವಾಪಸ್ಸು ತೆರಳಿ ಮತ್ತೆ ಪ್ರಾರಂಭಮಾಡಿದರು, ತಾನ ಸಾಧನೆಯನ್ನು. "ಈ ದಿನ ಖಂಡಿತ ಗುರುಗಳಿಂದ ಶಾಬಾಸ್‌ಗಿರಿಯನ್ನು ಪಡೆದೇ ಪಡೆಯುತ್ತೇನೆ" ಎಂಬ ದೃಢಭರವಸೆಯಿಂದ ಗುರುಗಳ ಮನೆಗೆ ನಡೆದರು. ಪಾಠ ಪ್ರಾರಂಭವಾಯಿತು. ಇಂದೂ ಗುರುಗಳು ತಮ್ಮ ಅಸಂತೃಪ್ತಿಯನ್ನು ವ್ಯಕ್ತಪಡಿಸಿದರು. ಹೀಗೆಯೇ ಮರುದಿನಗಳೆರಡೂ ನಡೆಯಿತು. ಕೊನೆಗೆ ಶೇಷಣ್ಣನವರಿಗೆ ಬೇಸರವಾಯಿತು. ಇನ್ನೆಷ್ಟು ಸಾಧಕ ಮಾಡಬೇಕೋ ನಾ ಬೇರೇ ಕಾಣೆ" ಎಂದು ಮನಸ್ಸಿನಲ್ಲೇ ಅಂದುಕೊಂಡರು. ಗುರುಗಳ ಕಿವಿ ಮುಟ್ಟದೇ ಇರಲಿಲ್ಲ, ಇವರು ಹೃದಯಾಂತರಾಳದಲ್ಲಿ ಎಣಿಸಿದ ಭಾವನೆ. "ಲೋ! ಯಾರಲ್ಲಿ! ಆ ಮೂಲೆಯಲ್ಲಿರೋ ವೀಣೇ ತಾ ಇಲ್ಲಿ" ಅಂತಂದು, "ಶೇಷಣ್ಣ— ಕೂತುಕೋ ಇಲ್ಲಿ–ಸಾಧಕ ಅಂದರೆ ಏನು ತಿಳಿದೆ? ಅದೇ ತಾನಗಳನ್ನು ನುಡಿಸುತ್ತೇನೆ ಕೇಳು. ನಿನ್ನ ಸಾಧಕ ಸಾಕೋ ಸಾಲದೋ ನಿನಗೇ ಅರ್ಥವಾಗುತ್ತೆ" ಅಂತ ಹೇಳಿ ತಾನಗಳನ್ನು ನುಡಿಸಿ ತೋರಿಕೊಟ್ಟರು- ಶಿಷ್ಯನಿಗೆ ಕಣ್ಣೀರು ಪ್ರವಹಿಸಿತು. ಎದ್ದುನಿಂತು ಸೊಂಟಕಟ್ಟಿ ಸಾಷ್ಟಾಂಗ ವೆರಗಿದರು ಗುರುಗಳಿಗೆ.

"ನನ್ನಷ್ಟು ಹಠ ಸಾಧಕರು ವಿರಳ ಎಂಬ ಅಹಂಭಾವ ನನ್ನಲ್ಲಿ ಮೂಡಿತ್ತು. ನನ್ನ ಅಪರಾಧವನ್ನು ಮನ್ನಿಸಿ ಅನುಗ್ರಹಿಸಬೇಕು" ಅಂತ ಗುರುಗಳಲ್ಲಿ ಬೇಡಿಕೊಂಡರು. "ಅಪ್ಪಾ! ಶೇಷಣ್ಣ!! ನಿನ್ನ ಪುರೋಭಿವೃದ್ಧಿಯನ್ನೇ ಧ್ಯೇಯವಾಗಿಟ್ಟುಕೊಂಡು ನಾನು ಆ ರೀತಿ ನುಡಿದೆನೇ ಹೊರತು ನಿನ್ನ ಮನಸ್ಸನ್ನು ನೋಯಿಸಬೇಕೆಂಬ ಉದ್ದಿಶ್ಯ ಸರ್ವಥಾ ನನಗಿಲ್ಲ. ನಾನು ಸಾಧಕಮಾಡಿದ ವಿಧಾನ ಹೇಳ್ತೀನಿ ಕೇಳು. ಪಕ್ಕದಲ್ಲಿ ಎಣಿಕೆಗಾಗಿ ಹುಣಸೇಬೀಜದ ಗುಡ್ಡೆ ಒಂದನ್ನು ಇಟ್ಟುಕೊಂಡು, ಒಂದೊಂದು ತಾನವನ್ನು ನೂರು ನೂರು ಆವೃತ್ತಿ ನುಡಿಸಿ ಅಭ್ಯಾಸ ಮಾಡಿದೆ, ಶೇಷಣ್ಣ. ಸಾಧಕರ ಸ್ವತ್ತು ಸಂಗೀತ ವಿದ್ಯೆ". ಅಂದರು ಗುರುಗಳು. ಗುರುಗಳ ವಿದ್ಯಾರ್ಜನೆಯ ಗುಟ್ಟಿನ ಅರಿವು ಶಿಷ್ಯ ಶೇಷಣ್ಣ

ನವರಿಗೆ ಅಂದುಂಟಾಯಿತು. ಗುರುಗಳಂತೆ ತಾವೂ ತಮ್ಮ ಇಡೀ ಜೀವಮಾನವನ್ನೇ ವೀಣೆಗಾಗಿ ಮುಡುಪಿಟ್ಟರು, ಲೋಕವಿಖ್ಯಾತರಾದರು.

ಹುಣ್ಣಿಮೆಯ ಚಂದಿರನಂತೆ ದಿನೇ ದಿನೇ ಅಭಿವೃದ್ಧಿ ಹೊಂದುತ್ತಿದ್ದ ಶೇಷಣ್ಣನನ್ನು ಕಂಡು ಗುರುಗಳ ಹೃದಯ ಆನಂದದಿಂದ ಪ್ರಫುಲ್ಲ ವಾಯಿತು. ಮನಸ್ಸಿನಲ್ಲೇ ಆತನನ್ನು ಹರಸಿದರು. ಹೀಗಿರುವಲ್ಲಿ ಅವರ ಆರೋಗ್ಯಸ್ಥಿತಿ ಹದಗೆಟ್ಟಿತು. ತಮ್ಮ ಅಂತ್ಯಕಾಲ ಬಲುದೂರವಿಲ್ಲವೆಂಬ ಸಂಗತಿಯು ಅರಿವಾಯಿತು. ವಿದ್ವನ್ಮಣಿಗಳ ಸಭೆಯೊಂದನ್ನು ಸೇರಿಸಿ ಶಿಷ್ಯನಿಗೆ ವಿಶೇಷ ಮರ್ಯಾದೆಮಾಡಿದರು, ಆಶೀರ್ವದಿಸಿದರು. ಸಭೆಯೆಲ್ಲ ಚದುರಿದಮೇಲೆ ಶಿಷ್ಯನನ್ನು ತಮ್ಮ ಕೊಠಡಿಯೊಳಗೆ ಗೋಪ್ಯವಾಗಿ ಬರಮಾಡಿಕೊಂಡರು.

"ಶೇಷಣ್ಣ !"

"ಗುರುಗಳೇ"

"ನಾನಿನ್ನು ಬಹುಕಾಲ ಜೀವಿಸುವಂತಿಲ್ಲ, ಶೇಷಣ್ಣ"

"ಹಾಗನ್ನಬಾರದು ಗುರುಗಳೇ"

"ಶೇಷಣ್ಣ, ಎಷ್ಟುದಿನವಿದ್ದರೂ ಒಂದು ದಿನ ಹೋಗಲೇ ಬೇಕು. ಅದಕ್ಕೆ ನಾನು ಸ್ವಲ್ಪವೂ ಯೋಚಿಸುವುದಿಲ್ಲ, ಅಂಜುವುದೂ ಇಲ್ಲ. ಆದರೆ ನನಗೆ ಒಂದೇ ಒಂದು ಆತಂಕವಿದೆ ಮನಸ್ಸಿನಲ್ಲಿ. ಅದನ್ನು ನಿವಾರಿಸುತ್ತೇನೆಂದು ಅಭಯವಿತ್ತರೆ ನಿರಾತಂಕವಾಗಿ ಪ್ರಾಣಬಿಟ್ಟೇನು ಶೇಷಣ್ಣ!"

"ಗುರುಗಳೇ, ಏನಿದು ಹೀಗೆ ನುಡಿಯುತ್ತಿದ್ದೀರಿ? ತಮ್ಮ ಮಾತಿಗೆ ಎಂದಾದರೂ ಬದಲು ಆಡಿದ್ದೇನೆಯೇ? ವಿಷಯವೇನು ಅಪ್ಪಣೆಯಾಗಲಿ"

"ನಡೆಸಿಕೊಡುವೆನೆಂದು ಮೊದಲು ಮಾತುಕೊಡು"

"ಖಂಡಿತವಾಗಿಯೂ, ಶಿರಸಾವಹಿಸಿ, ನಡೆಸಿಕೊಡುತ್ತೇನೆ ಗುರುಗಳೇ"

"ಹಾಗಲ್ಲ ಶೇಷಣ್ಣ, ನನ್ನ ಕೈಮೇಲೆ ನಿನ್ನ ಕೈಹಾಕಿ ಮಾತು ಕೊಡು"

"ಅಪ್ಪಣೆ ಗುರುವರ್ಯ.... ಈಗ ಹೇಳಿ, ವಿಷಯವೇನೆಂಬುದನ್ನು"

"ಶೇಷಣ್ಣ, ನನ್ನ ಸುಬ್ಬೂದೇ ನನಗೆ ಸದಾ ಯೋಚನೆಯಾಗಿದೆ. ಅವನಿಗೆ ವಿದ್ಯೆಯಲ್ಲಿರುವ ಶ್ರದ್ಧಾಸಕ್ತಿ ಸಾಲದು. ಮೊದಲಿಂದಲೂ ಸುಖ ಭೋಗಗಳಲ್ಲಿ ಬೆಳೆದು ಬಂದಿದ್ದಾನೆ. ಲೋಕಾನುಭವ ಸಾಲದು.

ಯಾವತ್ತೂ, ಅವನಿಗೆ ಯಾವ ವಿಪತ್ತೂ ಬರದಂತೆ ನೋಡಿಕೋ. ಅವನನ್ನು ಮಾತ್ರ ಕೈಬಿಡಬೇಡ. ನಮ್ಮೀರ್ವರ ವಂಶಕ್ಕೂ ನೀನು ನೇತ್ರಪ್ರಾಯನಾಗಿದ್ದೀಯೆ. ಎರಡು ವಂಶಗಳ ಕೀರ್ತಿಪತಾಕೆಗಳನ್ನೇರಿಸುವುದೂ ನಿನಗೇ ಸೇರಿದ್ದು.

ಗುರು ಶಿಷ್ಯರಿಬ್ಬರ ಕಣ್ಣುಗಳಲ್ಲೂ ಹನಿಗೂಡಿದವು. ದೊಡ್ಡಶೇಷಣ್ಣನವರ ಇಹಲೋಕವ್ಯಾಪಾರ ಕೊನೆಗೊಂಡಿತು.

ಶೇಷಣ್ಣನವರ ಇಪ್ಪತ್ತೈದು ಇಪ್ಪತ್ತಾರನೇ ವಯಸ್ಸಿನಲ್ಲಿ ಅವರ ದೇಶ ವಿದೇಶಗಳ ಸಂಚಾರ ಪ್ರಾರಂಭವಾದದ್ದು. ಮೊಟ್ಟಮೊದಲನೆಯ ಕಛೇರಿ ಕೊಯಮುತ್ತೂರಿನಲ್ಲಿ. ಆಗಲೇ ಇವರಿಗೆ ತಂಜಾವೂರಿನ ಮೃದಂಗ ವಿದ್ವಾಂಸರಾಗಿದ್ದ ನಾರಾಯಣಸಾಮುಪ್ಪನವರ ಪರಿಚಯವಾದದ್ದು. ಆಗರ್ಭ ಶ್ರೀಮಂತ ನಾರಾಯಣಸಾಮುಪ್ಪ. ಸಾನಾಸಾಮುರಾವ್ ಎಂದಿದ್ದ ಆತನ ಹೆಸರು ಬರಬರುತ್ತಾ ನಾರಾಯಣಸಾಮುಪ್ಪ ಎಂದು ರೂಪಾಂತರ ಹೊಂದಿತ್ತು. ಆತ ಮಹಾರಾಷ್ಟ್ರರು. ಸುಂದರ ಆಕೃತಿ. ಕೇವಲ ಕಲೆಯಲ್ಲಿದ್ದ ಅಭಿರುಚಿಗೋಸ್ಕರವೇ ಮೃದಂಗ ನುಡಿಸುವುದನ್ನು ಅಭ್ಯಾಸಮಾಡಿದ್ದರು. ಕಛೇರಿಗೆ ಪಕ್ಕವಾದ್ಯ ನುಡಿಸಲು ಹೋದಾಗ್ಯೂ ಕೂಡ ರಾಜ ಠೀವಿಯಿಂದಲೇ ಹೋಗುತ್ತಿದ್ದರು. ಕೂಡುವುದಕ್ಕೆ ಕಿನ್‌ಕಾಪಿನ ಮೆತ್ತೆ, ಒರಗಿಕೊಳ್ಳುವುದಕ್ಕೆ ಹಿಂದೆ ಲೋಡು; ಎಂದೂ ನಡುಕಟ್ಟಿದವರೇ ಅಲ್ಲ. ಸಾಧಾರಣವಾಗಿ ಶೇಷಣ್ಣನವರ ಕಛೇರಿಗಳಲ್ಲಿ ನಾರಾಯಣಸಾಮುಪ್ಪನೇ ಮೃದಂಗ ಪಕ್ಕವಾದ್ಯ ನುಡಿಸುತ್ತಿದ್ದವರು.

ಕಛೇರಿ ಪ್ರಾರಂಭವಾಗುವ ಮುನ್ನ "ಮೈಸೂರು ಪಾರ್ಟ್" ಎಂಬ ಅನಾದರಣೆಯ ಮನೋವೃತ್ತಿ ಶ್ರೋತೃಗಳಲ್ಲಿ ಮೂಡಿತ್ತಂತೆ. ಆದರೆ ಯಾವಾಗ ಶೇಷಣ್ಣನವರು ಘನರಾಗಗಳನ್ನು ನುಡಿಸಿ ಪಲ್ಲವಿ ಪ್ರಾರಂಭಿಸಿದರೋ ಸಭೆಯ ವಾತಾವರಣವೇ ಪರಿವರ್ತನೆ ಹೊಂದಿತು. ನಾದಸುಧೆಯ ವಾಹಿನಿಯಲ್ಲಿ ಎಲ್ಲರೂ ತಲ್ಲೀನರಾದರು. ಶೇಷಣ್ಣನವರ ಪಾಂಡಿತ್ಯ ಪ್ರಭೆಗೆ ಬೆರಗಾಯಿತು ಸಭೆ. ಮುಕ್ತಕಂಠದಿಂದ ಹೊಗಳಿದರು ವೈಣಿಕ ಶಿಖಾಮಣಿಯನ್ನು. ಎರಡು ತಿಂಗಳುಕಾಲ ಅಲ್ಲಿಯೇ ಉಳಿಸಿಕೊಂಡು ಹತ್ತಾರು ಕಛೇರಿಗಳನ್ನೇರ್ಪಡಿಸಿ, ಜನ ಶೇಷಣ್ಣನವರಲ್ಲಿ ತಮಗಿದ್ದ ಭಕ್ತಿಗೌರವ ಭಾವಗಳನ್ನು ವ್ಯಕ್ತಪಡಿಸಿದರು. ಅಲ್ಲಿಂದಾಚೆಗೆ ಶೇಷಣ್ಣನವರು ಕೊಯ

ಮುತ್ತೂರಿಗೆ ಕಛೇರಿಗಳ ನಿಮಿತ್ತ ಪ್ರಯಾಣಮಾಡುವುದು ಸರ್ವೇ ಸಾಧಾರಣವಾಯಿತು. ಸಂಚಾರ ಹೊರಟ ಅನೇಕ ಸಂದರ್ಭಗಳಲ್ಲಿ ಸಂಗಡ ಬಿಡಾರ ಕೃಷ್ಣಪ್ಪನವರನ್ನೂ, ಒಂದೊಂದು ಬಾರಿ ನನ್ನನ್ನೂ ಕರೆದುಕೊಂಡು ಹೋಗುತ್ತಿದ್ದರು. ಬಿಡಾರಂ ಕೃಷ್ಣಪ್ಪನವರು ಪರಸ್ಥಳಗಳಲ್ಲಿ ಯಶೋವಂತರಾಗಿ ಪ್ರಖ್ಯಾತಿ ಪಡೆಯಲು ಶೇಷಣ್ಣನವರೇ ಮೂಲಕಾರಣರು. ಹೋದೆಡೆಗಳಲ್ಲೆಲ್ಲ ಪರಸ್ಥಳದ ವಿದ್ವಾಂಸರುಗಳ ಪರಿಚಯಲಾಭ ಮಾಡಿಸಿ ಕೊಡುತ್ತಿದ್ದರು. ಹಾಗೂ ಮೈಸೂರು ಸಂಗೀತದ ಹಿರಿಮೆಯನ್ನೂ ವೈಭವವನ್ನೂ ಅಲ್ಲಿಯ ಜನತೆಗೆ ತಿಳಿಯಪಡಿಸುತ್ತಿದ್ದರು.

ಒಮ್ಮೆ ಶೇಷಣ್ಣನವರ ವೀಣೆಯ ಕಛೇರಿ ಕೊಯಮುತ್ತೂರಿನ ಧನಿಕರ ಮನೆಯೊಂದರಲ್ಲಿ ಏರ್ಪಾಡಾಗಿತ್ತು. ಸಂಗಡ ಹೋಗಲು ಆ ಬಾರಿ ನನಗನುಮತಿಯಿತ್ತರು. ಊಟ ವಸತಿಗಳ ಮತ್ತು ಪ್ರಯಾಣದ ಖರ್ಚನ್ನು ತಾವೇ ವಹಿಸಿಕೊಳ್ಳುವುದಾಗಿ ತಿಳಿಸಿದರು. ನನ್ನ ಆನಂದಕ್ಕೆ ಮೇರೆ ಮಿತಿ ಇಲ್ಲದಂತಾಯಿತು.

ಅಮೋಘವಾಗಿ ನಾಲ್ಕಾರು ಘಂಟೆ ಕಛೇರಿ ಮಾಡಿದರು. ತುಂಬಿದ ಸಭೆಯಮೇಲೆ ಸಮ್ಮೋಹನಾಸ್ತ್ರ ಬೀರಿದ್ದಂತೆ ಭಾಸವಾಗುತ್ತಿತ್ತು. ಗಾನ ಪ್ರತಿಭೆಗೆ ಮನಸೋತ ಆ ಧನಿಕ ಯಜಮಾನ ಮಾತನಾಡಿದ್ದ ಮೊಬಲಿಗಿಂತ ದ್ವಿಗುಣವಾಗಿ ಸಂಭಾವನೆ ಮಾಡಿದ. ಅನಂತರ ಶೇಷಣ್ಣನವರು ನನ್ನಕಡೆ ಬೆರಳುಮಾಡಿ ಸಭಿಕರಿಗೆ ಹೇಳಿದರು—ಈತ ಬಾಯಿ ಹಾಡುಗಾರಿಕೆಯಲ್ಲಿ ಘನವಿದ್ವಾಂಸರು; ಅಮೋಘವಾಗಿ ಹಾಡುತ್ತಾರೆ ಎಂದು. ಹಾಡುವಂತೆ ಒತ್ತಾಯಪಡಿಸಿದರು, ಜನ, ನನ್ನನ್ನು. ಶೇಷಣ್ಣನವರ ಪ್ರಶಂಸೆಯ ಹಿಂದಡಗಿದ್ದ ವಿನೋದಭಾವದ ಅರಿವೇ ಆಗಲಿಲ್ಲ ನನಗೆ. ನಿಜಕ್ಕೂ ನುಡಿದಿರಬಹುದೆಂದು ನಂಬಿ ಪಾಠಶಾಲೆಯಲ್ಲಿ ಕಲಿತ ಹರಿಕಾಂಬೋಧಿ ರಾಗದ 'ಒಕ್ಕಮಾಟ ಒಕ್ಕಬಾಣಮು' ಎಂಬ ಕೃತಿಯನ್ನು ನನ್ನದೇ ಅದ ಒಂದು ಶೈಲಿ ಮತ್ತು ಮನೋಧರ್ಮದಲ್ಲಿ ಹಾಡಲುಪಕ್ರಮಿಸಿದೆ. ಬಾಯಿಬಿಡುವುದೇ ತಡ ಸಭೆಯಲ್ಲಿ ಕರತಾಡನ, ಕಿಲಕಿಲ ನಗು, ಕುಚೋದ್ಯ ಎಲ್ಲವೂ ಒಮ್ಮೆಲೇ ಪ್ರಾರಂಭವಾಯಿತು. ಪಕ್ಕದಲ್ಲೇ ಕೂತಿದ್ದ ಮಹನೀಯರೊಬ್ಬರು ತಮಿಳಿನಲ್ಲೇನೇನೋ ಒದರುತ್ತ, ಭುಜದ ಮೇಲೆ ಒಂದೇಟು ಹಾಕಿ

ಕುಚೋದ್ಯದ ದೃಷ್ಟಿ ಬೀರಿ ಸಂಗೀತವನ್ನು ಸಾಕುಮಾಡುವಂತೆ ಅಪ್ಪಣೆ ಯಿತ್ತರು. ಅವಮಾನದ ಭಾರದಿಂದ ತಲೆ ತಗ್ಗಿತು. ಶೇಷಣ್ಣನವರ ಕಡೆ ನೋಡಿದೆ. ಮುಖಕ್ಕೆ ಚೌಕವನ್ನು ಮುಚ್ಚಿಕೊಂಡು ಗಹಗಹಿಸಿ ನಗುತ್ತಿದ್ದರು. ಮೈ ಬೆಂಕಿಯಾಯಿತು. ಆ ಕೂಡಲೇ ಸಂಗೀತವನ್ನು ಬಿಟ್ಟು, ಸಾಹಿತ್ಯದಲ್ಲಾದರೂ ವಿದ್ವಾಂಸನೆಂದು ತೋರಿಕೊಡಬೇಕೆಂದು ನಿಶ್ಚಯಿಸಿ, ಆಶುಕವಿತ್ವ ಒಂದನ್ನು ಮಾಡಿ ಹೇಳಿದೆ. ಸಭೆಯಲ್ಲಿ ಎದ್ದಿದ್ದ ಗೊಂದಲ, ಉದ್ರೇಕ ಕೊಂಚ ಕಡಮೆಯಾದಂತೆ ತೋರಿಬಂತು. ಅಲ್ಲಿ ಸೇರಿದ್ದ ಕೆಲವು ಸಂಸ್ಕೃತ ಪಂಡಿತರು ಪ್ರೋತ್ಸಾಹಪೂರ್ವಕವಾದ ಮಾತು ಗಳನ್ನಾಡಿದರು. ಹೃದಯದ ಭಾರ ಕೊಂಚ ಹಗುರವಾಯಿತು. ಮನೆಯ ಯಜಮಾನ ಆ ಕೂಡಲೇ ಒಳಗೆ ಹೋಗಿ ಒಂದು ತಟ್ಟೆಯಲ್ಲಿ ಹಣ್ಣು ಹಂಪಲುಗಳನ್ನೂ, 25 ರೂಪಾಯಿಯನ್ನೂ ಒಂದು ಪತ್ತಾರು ವಸ್ತ್ರವನ್ನೂ ತಂದು ಸನ್ಮಾನಿಸಿದರು. ಶೇಷಣ್ಣನವರು ಬೆದರಿದ ಕಣ್ಣು ಗಳಿಂದ ಒಮ್ಮೆ ಪರಿಶೀಲಿಸಿದರು ನನ್ನನ್ನು.

ಮೈಸೂರಿಗೆ ವಾಪಸ್ಸು ತೆರಳುವ ಸಮಯ. "ಆಚಾರ್ಯರೆ – ಇಲ್ಲಿ ನೋಡಿ, ನಿಮ್ಮ ಖರ್ಚು ನಿಮ್ಮದು ನನ್ನ ಖರ್ಚು ನನ್ನದು" ಅಂದರು ಶೇಷಣ್ಣನವರು. "ಅದು ಸಾಧ್ಯವಿಲ್ಲ. ಆಡಿದ ಮಾತಿನಂತೆ ನನ್ನ ಖರ್ಚೆಲ್ಲವನ್ನೂ ನೀವೇ ವಹಿಸಿಕೊಳ್ಳಬೇಕು" ಅಂದೆ ನಾನು. ಮಾತಿಗೆ ಮಾತು ಬೆಳದು ಒಬ್ಬರಿಗೆ ಇನ್ನೊಬ್ಬರು ಸೋಲುವಂತೆ ತೋರಲಿಲ್ಲ. ಮಾರ್ಗದಲ್ಲಿದ್ದ ಅಶ್ವತ್ಥವೃಕ್ಷದ ನೆರಳಿನಲ್ಲಿ ಕಟ್ಟೆಯ ಮೇಲೆ ಕೂತು ವಾದ ವಿವಾದಗಳಾರಂಭವಾಯಿತು. ಕೊಂಚ ಹೊತ್ತಿನೊಳಗಾಗಿ ಮಾರ್ಗಸ್ಥರ ಒಂದು ಸಣ್ಣ ತಂಡವೇ ಸೇರಿತ್ತು. ಗುಂಪಿನಲ್ಲಿದ್ದ ಹಿರಿಯರೊಬ್ಬರು ಮುಂದೆ ಬಂದು, ಸಮಸ್ಯೆಯ ವಿವರಗಳನ್ನೆಲ್ಲ ಕೇಳಿ ತಿಳಿದುಕೊಂಡು ಪ್ರಯಾಣದ ಒಂದು ಖರ್ಚನ್ನು ಶೇಷಣ್ಣನವರೂ ಇನ್ನೊಂದು ಖರ್ಚನ್ನು ನಾನೂ ವಹಿಸಿಕೊಳ್ಳತಕ್ಕದ್ದೆಂದು ತೀರ್ಮಾನವಿತ್ತು ವ್ಯಾಜ್ಯ ಬಗೆಹರಿಸಿದರು.

ಪ್ರಯಾಣ ಬೆಳೆಯಿತು. ಶೇಷಣ್ಣನವರು ಎರಡನೆಯ ತರಗತಿ ಗಾಡಿಯಲ್ಲಿ, ನಾನು ಮೂರನೇ ತರಗತಿಯ ಗಾಡಿಯಲ್ಲಿ ಪ್ರಯಾಣ ಮಾಡಲು ನಿಶ್ಚಯಿಸಿಕೊಂಡೆವು. ಸಂಗೀತದಲ್ಲಿ ನನಗಾದ ಅವಮಾನದ ಕಾವು ಇನ್ನೂ ಆರಿರಲಿಲ್ಲ. ಶೇಷಣ್ಣನವರೇ ಅಷ್ಟು ಅನರ್ಥಕ್ಕೂ ಮೂಲ

ಕಾರಣವೆಂಬ ಖಾರ ಅವರ ಮೇಲೆ ಇದ್ದೇ ಇತ್ತು ನನಗೆ. ಏನಾದರೂ ಮಾಡಿ ಚೆನ್ನಾಗಿ ಸಂಗೀತಾಭ್ಯಾಸಮಾಡಿ, ಶೇಷಣ್ಣನವರಿಂದಲೇ ಭೇಷ್ ಅನ್ನಿಸಿಕೊಳ್ಳಬೇಕೆಂಬ ಛಲ ಮೂಡಿತು ಮನಸ್ಸಿನಲ್ಲಿ. ಶೇಷಣ್ಣನವರನ್ನ "ನೀವೇ ನನಗೆ ಸಂಗೀತದ ಗುರುಗಳಾಗಬೇಕು" ಎಂದು ಪ್ರಾರ್ಥಿಸಿಕೊಂಡೆ. "ನಿಮಗೂ ಸಂಗೀತಕ್ಕೂ ಬಲು ದೂರ ಆಚಾರ್ಯರೇ. ನೀವೆಷ್ಟಾದರೂ ಭೋಜನಪ್ರಿಯರು. ರಸಕವಳ ಉಂಡು ತೃಪ್ತರಾಗಿರಿ. ಸಂಗೀತದ ಗೋಜೇಕೆ ನಿಮಗೆ" ಎಂದರು ಶೇಷಣ್ಣನವರು. ಉರಿಯುವ ಬೆಂಕಿಗೆ ತುಪ್ಪ ಸುರಿದಂತಾಯಿತು ನನಗೆ. ಸ್ವಲ್ಪ ಬಿರುಸಿನಿಂದಲೇ ಹೇಳಿದೆ. "ಅದೆಲ್ಲ ಹಾಗಿರಲಿ, ನೀವು ಸಂಗೀತ ಹೇಳಿಕೊಡಲೇಬೇಕು" ಅಂದೆ.

"ನಿಮಗೆ ಖಂಡಿತ ಸಂಗೀತ ಬರೊಲ್ಲ ಆಚಾರ್ರೇ".

"ಬಂದರೋ ?"

"ಬರದೇ ಹೋದರೋ ?"

ಬರದೇ ಹೋದರೆ .... ಇಲ್ಲಿ ನೋಡಿ .... ಬ್ರಾಹ್ಮಣನಿಗೆ ಮುಖ್ಯವಾದದ್ದು ಈ ಜನಿವಾರ, ಇದನ್ನ ಕಿತ್ತು ಆಚೆಗೆ ಎಸೆಯುತ್ತೇನೆ"

"ಹಾಗಾದರೆ ನೋಡಿ — ಪಾಠ ಈಗಲೇ ಪ್ರಾರಂಭಮಾಡ್ತೀನಿ. ನಾನು ಒಂದು ಬಾರಿ ಹೇಳಿದ್ದನ್ನ ಮತ್ತೊಂದು ಬಾರಿ ಹೇಳೊಲ್ಲ. ಯಾವಾಗ ಕಲಿತು ಒಪ್ಪಿಸ್ತೀರಿ ?"

"ಬೆಂಗಳೂರು ಕಂಟೋನ್ಮೆಂಟ್ ಸ್ಟೇಷನ್ ಬರುವ ಹೊತ್ತಿಗೆ ಕಲಿತ ಪಾಠ ಒಪ್ಪಿಸುತ್ತೇನೆ"

"ಇದೇ ಮಾತೋ ?"

"ನಾಲಿಗೆ ಒಂದೋ ಎರಡೋ"

ಪಾಠ ಪ್ರಾರಂಭವಾಯಿತು. ಶಂಕರಾಭರಣರಾಗದ ಅಟ್ಟತಾಳದ ವರ್ಣ. 'ಚಲಮೇಲರ'. ಪ್ರತಿ ಸ್ಟೇಷನ್ನಲ್ಲಿಯೂ ನನ್ನ ಗಾಡಿಯಿಂದ ಇಳಿದು ಶೇಷಣ್ಣನವರ ಗಾಡಿಗೆ ಹೋಗಿ ಒಂದೊಂದಾವರ್ತಿ ಹೇಳಿಸಿಕೊಂಡು ನನ್ನ ಗಾಡಿಗೆ ಬಂದು ಗಟ್ಟಿಮಾಡಿಕೊಳ್ಳೋದು. ಹೀಗೆ ಮಾಡಿ ಬೆಂಗಳೂರು ಕಂಟೋನ್ಮೆಂಟು ಸ್ಟೇಷನ್ನಲ್ಲಿ ಮೊದಲಿನಿಂದ ಕೊನೆಯವರೆಗೂ ತಪ್ಪದಂತೆ ವರ್ಣವನ್ನ ಹಾಡಿದೆ. ಶೇಷಣ್ಣನವರ ಕಣ್ಣಂಚಿನಲ್ಲಿ

ಹನಿಗೂಡಿತು. "ಆಚಾರ್ಯರೇ, ಅಪರಾಧವಾಯಿತು ನನ್ನದು. ನೀವು ನನಗಿಂತ ವಯಸ್ಸಿನಲ್ಲಿ ಚಿಕ್ಕವರು. ನಾನು ನಮಸ್ಕಾರ ಮಾಡಿದ್ದೇ ಆದರೆ ನಿಮಗೆ ಅಶ್ರೇಯಸ್ಸು. ಆದ್ದರಿಂದ ಕ್ಷಮಿಸಿ ಅಂತ ಮಾತ್ರ ಕೇಳಿಕೊಳ್ಳುತ್ತೇನೆ. ನಾನು ಆಡಿದ ಮಾತುಗಳನ್ನ ಮನ್ನಿಸಿ. ಒಂದು ದಿನದಲ್ಲಿ ಒಂದು ವರ್ಣವನ್ನು ಜಯಿಸಬಲ್ಲೆ ಎಂಬ ಅಹಂ ನನಗಿತ್ತು. ಇವತ್ತು ಅದನ್ನ ಮೀರಿಸಿದ್ದೀರಿ ನೀವು. ಆಚಾರ್ಯರೇ, ನನ್ನ ಅನಂತರ ನನ್ನ ಸ್ಥಾನ ತಮ್ಮದ್ದು, ಇದು ಸತ್ಯವಾದ ಮಾತು" ಅಂತ ಹೇಳಿ ನನ್ನನ್ನ ಬಾಚಿ ತಬ್ಬಿಕೊಂಡು ಆನಂದಬಾಷ್ಪ ಸುರಿಸಿದರು. ನನ್ನ ಮನಸ್ಸಿನಲ್ಲಿ ಅವರಿಗೆ ಗುರುಸ್ಥಾನ ಸ್ಥಿರವಾಗಿ ನೆಲೆಗೊಂಡಿತು. ಅಂದಿನಿಂದ ನನ್ನ ಮೇಲೆ ಅವರ ವಿಶ್ವಾಸ ಅನುಗ್ರಹಬುದ್ಧಿ ಬೆಳೆಯುತೊಡಗಿತು. ಅವರು ಸಾಧಕಮಾಡುವ ವೇಳೆಯಲ್ಲೆಲ್ಲ ಕೇಳಲು ಅನುಮತಿ ದೊರೆಯಿತು. ಅವರ ವೀಣೆಯ ಬೆಡಗು ನನ್ನ ಮನಸ್ಸಿನಮೇಲೆ ಅಚ್ಚಳಿಯದ ಮುದ್ರೆಯನ್ನೊತ್ತಿತು. ಮಧ್ಯಮಕಾಲ, ನೆರವಲುಗಳಲ್ಲಿ ಶೇಷಣ್ಣನವರದೇ ಒಂದು ವೈಖರಿ ನನಗೆ ಬಲು ಒಪ್ಪಿತು. ಪ್ಯೆ ಎಲ್ಲ ಕಿವಿಯನ್ನಾಗಿ ಮಾಡಿಕೊಂಡು ಅವರ ಸಂಗೀತವನ್ನ ಕೇಳಿ ಅವರ ಶೈಲಿಯನ್ನ ಮನದಟ್ಟುಮಾಡಿಕೊಂಡು ನನ್ನ ಸಾಧಕವನ್ನು ಅದೇ ಹಾದಿಯಲ್ಲಿ ಮುಂದುವರಿಸಿದೆ. ಸುಬ್ಬಣ್ಣನವರಿಗೂ ಶೇಷಣ್ಣನವರಿಗೂ ಸರಸ ವಿರಸಗಳು ಶುಕ್ಲಪಕ್ಷ ಕೃಷ್ಣಪಕ್ಷದಂತೆ ಜೋಡಿಯಲ್ಲೇ ಉದ್ಭವಿಸುತ್ತಿದ್ದವು. ಇಬ್ಬರು ಹೆಂಡಿರನ್ನು ಮಾಡಿಕೊಂಡ ಗಂಡನಂತಾಗುತ್ತಿತ್ತು ನನ್ನ ಪರಿಸ್ಥಿತಿ. ಅನ್ನದಾತರಾದ ಸುಬ್ಬಣ್ಣನವರಲ್ಲೂ ನಾನು ನಿಷ್ಠುರವನ್ನು ಕಟ್ಟಿಕೊಳ್ಳುವ ಹಾಗಿರಲಿಲ್ಲ. ಅಮೃತಧಾರೆಯನ್ನೆರೆಯುತ್ತಿದ್ದ ಶೇಷಣ್ಣನವರನ್ನೂ ಅಗಲಿರಲು ಮನಬರುತ್ತಿರಲಿಲ್ಲ. ಇದಲ್ಲದೆ, ಆಗ್ಗೆ, ಮೈಸೂರಿನ ವೈಣಿಕರಲ್ಲಿ ಎರಡು ಪ್ರಬಲವಾದ ಪಂಗಡಗಳಿದ್ದವು. ಒಂದು ಕೋಟೆ ಗುಂಪು. ಸುಬ್ಬಣ್ಣ, ಶೇಷಣ್ಣ ಇವರೇ ಈ ಗುಂಪಿನ ಮುಖಂಡರು. ಇನ್ನೊಂದು ಅಗ್ರಹಾರದ ಗುಂಪು. ವೀಣೆ ಶಾಮಣ್ಣನವರೇ ಮೊದಲಾದವರು ಈ ಪಂಗಡದ ನಾಯಕರು. "ಕೋಟೆ ಗುಂಪಿನ ವಿದ್ವಾಂಸರಿಗೆ ತಾಳಜ್ಞಾನವೇ ಶೂನ್ಯ" ಅಂತ ಅಗ್ರಹಾರದ ಗುಂಪಿನವರು ಕೋಟೆಯ ಗುಂಪನ್ನು ಮೂದಲಿಸುತ್ತಿದ್ದರು. "ತಧಿಗಿಣತೋಂ ಗುಂಪು ಅಗ್ರಹಾರದ್ದು; ರಾಗವಿಲ್ಲ, ಭಾವವಿಲ್ಲ" ಅಂತ ಅಗ್ರ

ಹಾರದ ಗುಂಪಿನವರನ್ನು ಜರಿಯುತ್ತಿದ್ದರು ಕೋಟಿ ಪಂಗಡದವರು. ಆದರೆ ಈ ಭಿನ್ನಾಭಿಪ್ರಾಯಗಳು ಹೇಗೆ ಮೂಡುತ್ತಿದ್ದವೋ ಹಾಗೆಯೇ ಮಾಯವೂ ಆಗುತ್ತಿದ್ದವು. ಎರಡೂ ಪಂಗಡಗಳಲ್ಲೂ ಹಿರಿಯ ವಿದ್ವಾಂಸರಿದ್ದರು. ಉಭಯ ತಂಡಗಳಲ್ಲೂ ಸ್ನೇಹಸೌಹಾರ್ದಗಳನ್ನುಳಿಸಿಕೊಂಡು ಎರಡು ಪಕ್ಷಗಳ ವಿದ್ವಾಂಸರುಗಳ ವಿದ್ವತ್ತಿನ ಪರಿಚಯ ಪ್ರಯೋಜನ ಪಡೆಯುವುದು ಬಲು ಚಾಲೂಕಿನ ಹಾಗೂ ನಾಜೂಕಿನ ಕೆಲಸವಾಗಿತ್ತು. ಅಂತೂ ಉಪಾಯದಿಂದ ನನ್ನ ಆಶಯವನ್ನು ಕರಗತಮಾಡಿಕೊಳ್ಳಲು ಪ್ರಯತ್ನಿಸುತ್ತಲೇ ಬಂದೆ.

ಶೇಷಣ್ಣನವರ ದೇಶಪರ್ಯಟನದಲ್ಲಿ ನಡೆದ ಮುಖ್ಯ ಘಟನೆಗಳಲ್ಲೊಂದೆಂದರೆ ತಂಜಾವೂರು ನಾರಾಯಣಸ್ವಾಮಿನಾಯಕರ ಮನೆಯಲ್ಲಿ ನಡೆದ ಸಂಗೀತ ಸಮ್ಮೇಳನದಲ್ಲಿ ಅಮೂಲ್ಯ ಪಾರಿತೋಷಕವೊಂದನ್ನು ಜಯಿಸಿದ್ದು. ತಿರುವೆಯ್ಯಾರಿಗೆ ಹೋಗಿ ಶ್ರೀ ತ್ಯಾಗರಾಜರ ಸೇವೆಮಾಡಿ, ಹಿಂತಿರುಗುವಾಗ ತಂಜಾವೂರಿಗೆ ಬಂದು ನಾಯಕರ ಮನೆಯಲ್ಲಿ ಒಂದೆರಡು ದಿನ ತಂಗಿದ್ದು ಮೈಸೂರಿಗೆ ತೆರಳುವುದು ವಾಡಿಕೆಯಾಗಿತ್ತು. ನಾಯಕರು ಸ್ವಯಂ ವಿದ್ವಾಂಸರು. ಪ್ರಖ್ಯಾತ ಕಲಾಪೋಷಕರು. ವರ್ಷದಲ್ಲೆಲ್ಲ ಕಾಲವೂ ಒಬ್ಬರಲ್ಲದಿದ್ದರೆ ಮತ್ತೊಬ್ಬ ವಿದ್ವಾಂಸರು ಅವರ ಮನೆಯಲ್ಲಿ ಬಿಡಾರಮಾಡುತ್ತಿದ್ದರು. ವರ್ಷಕ್ಕೊಂದು ಬಾರಿಯಾದರೂ ತಮಗೆ ಭೇಟಿ ಕೊಡಲೇಬೇಕೆಂದು ನಾಯಕರು ಶೇಷಣ್ಣನವರನ್ನು ಒತ್ತಾಯಮಾಡಿದ್ದರಂತೆ. ಅವರು ತಂಜಾವೂರಿಗೆ ಹೋಗಲೀ ಬಿಡಲಿ, ವರ್ಷ ಒಂದಕ್ಕೆ ಐನೂರು ರೂಪಾಯಿಗಳನ್ನು ನಾಯಕರು ಶೇಷಣ್ಣನವರಿಗೆ ಕಳುಹಿಸುತ್ತಿದ್ದರಂತೆ. ಆ ವರ್ಷ ತಿರುವೆಯ್ಯಾರ್‌ನಿಂದ ವಾಪಸ್ಸು ಬಂದು ನಾಯಕರ ಭೇಟಿಪಡೆಯಲು ಶೇಷಣ್ಣನವರು ತಂಜಾವೂರಿಗೆ ಬಂದಿದ್ದರು. ಅದೇ ಸಮಯದಲ್ಲಿ ತಿರುಕ್ಕೋಡಿಕಾವಲ್ ಕೃಷ್ಣಯ್ಯರ್, ಘನಂ ರಾಘವಯ್ಯನವರು, ಶರಭಶಾಸ್ತ್ರಿಗಳು, ಶ್ರೀವಲ್ಲಿ ಪತ್ತೂರು ಮುತ್ತಯ್ಯಭಾಗವತರು, ಮಹಾವೈದ್ಯನಾಥಯ್ಯರ್ ಮೊದಲಾದ ಕಲಾಕೇಸರಿಗಳು ನಾಯಕರ ಮನೆಯಲ್ಲಿ ಬಿಡಾರಮಾಡಿದ್ದರು. ಇವರಷ್ಟು ಜನರ ಕಲಾವೈಖರಿಯನ್ನು ಒಮ್ಮೆಲೇ ಕೇಳಿ ಸವಿಯಬೇಕೆಂಬ ಹೆಬ್ಬಯಕೆ ನಾಯಕರಿಗುಂಟಾಯಿತು. ಒಂದು ಸಂಜೆ ವಿಶೇಷ ಸಭೆಯೊಂದು ಏರ್ಪಾಡಾಯಿತು. ಸಭೆಯ ಮಧ್ಯೆ

ತೊಲೆಯಿಂದ ತೂಗು ಹಾಕಲ್ಪಟ್ಟಿದ್ದ ಅಮೂಲ್ಯವಾದ ಸೀಮೆಯ ಕಮಲದ ಉಂಗುರವೊಂದು ಎಲ್ಲರ ಕಣ್ಣುಗಳನ್ನೂ ಕೋರೈಸುತ್ತಿತ್ತು. ನಾಯಕರು ನಾಲ್ಕು ಮಾತುಗಳನ್ನಾಡಲು ಎದ್ದರು. "ಇಷ್ಟು ಜನ ಮಹಾಪಂಡಿತ ರುಗಳು ಇಂದು ಸಂಜೆ ಒಟ್ಟಿಗೆ ನನ್ನ ಮನೆಯಲ್ಲಿ ಸೇರಿರುವುದು ಯಾವ ಜನ್ಮದ ಸುಕೃತವೋ ಹೇಳಲಾರೆ. ಅವರು ನೀಡುವ ಅಮೃತಧಾರೆಯನ್ನು ಆಸ್ವಾದಿಸಲು ಮನ ಹಾತೊರೆಯುತ್ತಿದೆ. ಅದರ ಜೊತೆಗೆ ಮತ್ತೊಂದು ಅಪೇಕ್ಷೆಯೂ ಇದೆ. ದಯಮಾಡಿ ಯಾರೂ ಅದಕ್ಕೆ ಅಪಾರ್ಥ ಕಲ್ಪಿಸ ಬಾರದು. ಇವತ್ತಿನ ಸಂಗೀತದ ರಸದೌತಣದಲ್ಲಿ ನಳಪಾಕ ಯಾರಿಂದ ಪ್ರಾಪ್ತವಾಗುತ್ತದೆಯೋ ಅವರಿಗೆ ಅಲ್ಪನ ಕಾಣಿಕೆಯ ಕುಸುಮ ಈ ರತ್ನ ದುಂಗುರ" ಎಂದು ವಿನಯಪೂರ್ವಕವಾಗಿ ತಮ್ಮ ಮನೋರಥವನ್ನು ವ್ಯಕ್ತ ಪಡಿಸಿ ನಾಯಕರು ಕುಳಿತರು.

ಯಾರು ಕಛೇರಿಯನ್ನು ಪ್ರಾರಂಭಿಸಬೇಕು ? ಪಾರಿತೋಷಕ ಇಂಥವರಿಗೇ ಸಲ್ಲಬೇಕೆಂದು ನಿರ್ಧರಿಸುವರಾರು ? ಎಂಬ ತೊಡಕುಗಳು ಎಲ್ಲರ ಮನಸ್ಸನ್ನೂ ಆವರಿಸಿದವು. ಕೊಂಚ ಚರ್ಚೆಯಾದನಂತರ ಮಹಾ ವೈದ್ಯನಾಥಯ್ಯರ್ ಅವರಿಂದ ಕಛೇರಿ ಪ್ರಾರಂಭವಾಯಿತು. ಎರಡು ಕೃತಿಗಳನ್ನು ಹಾಡಿ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸಿದರು. ಅನಂತರ ಉಳಿದ ವಿದ್ವಾಂಸರುಗಳೂ ಸಹ ತಮ್ಮ ತಮ್ಮ ಶಕ್ತ್ಯಾನುಸಾರ ಹಾಡಿ, ನುಡಿಸಿ, ಸಭಿಕರಿಗೆ ಕರ್ಣಾನಂದ ನೀಡಿದರು. ಆದರೆ, ಉಂಗುರ ಯಾರಿಗೆ ಸೇರಬೇಕು ? ಪ್ರತಿಯೊಬ್ಬರ ಮನಸ್ಸಿನಲ್ಲೂ ಉಂಗುರ ತಮಗೆ ಬರಬೇಕಾ ದದ್ದೇ ನ್ಯಾಯಸಮ್ಮತವೆಂಬ ಭಾವನೆ. ಆದರೆ ಉಂಗುರಕ್ಕೆ ತಾವೇ ಕೈ ಹಾಕುವುದು ಅನುಚಿತ. ಮತ್ತೊಬ್ಬರ ಹೆಸರು ಸೂಚಿಸಿದ್ದೇ ಆದರೆ ತಮ್ಮ ಸ್ಥಾನಮಾನಗಳ ಗತಿ ಏನು ? ಈ ಹಲವಾರು ಸಂಧಿಗ್ಧಗಳಿಗೊಳಗಾಗಿ ಯಾವ ವಿದ್ವಾಂಸನೂ ಮುಂದೆ ಬರಲಿಲ್ಲ. ಸಭಿಕರಲ್ಲಿ ಕೂತೂಹಲ ಕೆರಳಿತ್ತು. ನಾಯಕರು ಮತ್ತೆ ಪ್ರಾರ್ಥನೆಮಾಡಿಕೊಂಡರು. ಬಲು ಹೊತ್ತಿನಮೇಲೆ ಶೀವಲ್ಲಿ ಪತ್ತೂರು ಮುತ್ತಯ್ಯಭಾಗವತರು ಮೇಲೆದ್ದರು. ನಾಯಕರಲ್ಲಿ ನನ್ನ ವಿಜ್ಞಾಪನೆ ಇಷ್ಟು. ಇಲ್ಲಿ ಸೇರಿರುವ ಪ್ರತಿಯೊಬ್ಬ ವಿದ್ವಾಂಸರೂ ಗಾನಾಂಬುಧಿಯಲ್ಲಿ ದೊರೆತ ಒಂದೊಂದು ಆಣಿಮುತ್ತುಗಳೇ ಸರಿ. ಯಾರು ಹೆಚ್ಚು ? ಯಾರು ಕಮ್ಮಿ ? ಎಂದು ನಿರ್ಧರಿಸುವುದು ಅತಿ

ಸಾಹಸದ ಕೆಲಸ. ಪ್ರತಿಯೊಬ್ಬರೂ ಅಸಾಧಾರಣ ವಿದ್ವಾಂಸರು. ಆದರೂ ನನ್ನ ಮನಸ್ಸಿನಲ್ಲಿ ಪ್ರೇರಿತವಾದ ಅಂಶವನ್ನ ತಮ್ಮಲ್ಲಿ ನಿವೇದಿಸಿಕೊಳ್ಳು ತ್ತೇನೆ. ಯಾವ ವಿದ್ವಾಂಸರೂ ಮನಸ್ಸಿಗೆ ಬೇಸರ ತಂದುಕೊಳ್ಳಬಾರ ದೆಂದು ಬೇಡಿಕೊಳ್ಳುತ್ತೇನೆ. ಇಂದಿನ ನಾಯಕಮಣಿ ಎಂದರೆ ಮೈಸೂರಿನ ಶೇಷಣ್ಣನವರೇ ಸರಿ. ಅವರಿಗೇ ಸಲ್ಲಬೇಕು ಈ ಮರ್ಯಾದೆ ಎಂದು ನನ್ನ ಅಭಿಮತ" ಎಂದರು. ಆ ಕೂಡಲೇ ಮಹಾವೈದ್ಯನಾಥಯ್ಯರ್ ಅವರು ಭಾಗವತರ ಅಭಿಪ್ರಾಯವನ್ನು ಸಮರ್ಥಿಸಿದರು. ನಾಯಕರ ಸಂತೋಷಕ್ಕೆ ಎಣೆಯೇ ಇಲ್ಲ. ಸಭಿಕರ ಕರತಾಡನದ ನಡುವೆ ಶೇಷಣ್ಣ ನವರನ್ನು ಸನ್ಮಾನಿಸಿದರು. ವಿನಯಸಂಪನ್ನರಾದ ಶೇಷಣ್ಣನವರು ತಗ್ಗಿಸಿದ ತಲೆಯನ್ನು ಮೇಲೆತ್ತಲಿಲ್ಲ. 'ಹಿರಿಯರ ಆಶೀರ್ವಾದ ಚಿನ್ಹೆಯಾಗಿ ಇದನ್ನು ತೆಗೆದುಕೊಳ್ಳುತ್ತಿದ್ದೇನೆ' ಎಂದು ನುಡಿದರು.

ಶೇಷಣ್ಣನವರಿಗೂ ನಾಯಕರಿಗೂ ಪ್ರೀತಿ ವಿಶ್ವಾಸಗಳು ಬೆಳೆಯು ತ್ತಿರುವಾಗ್ಗೆ ಕಹಿ ಪ್ರಸಂಗ ಒಂದು ನಡೆಯಿತಂತೆ. ತಬಲವಾದನ ವಿದ್ವಾಂಸರಾಗಿದ್ದ ತುಕಾರಾಂ ಅವರು ನಾಯಕರೊಡನೆ ಮಾತನಾಡುವ ಒಂದು ಸಂದರ್ಭದಲ್ಲಿ ಶೇಷಣ್ಣನವರ ವಿಷಯವಾಗಿ ಕೆಲವು ತಿರಸ್ಕಾರ ಪೂರ್ವಕವಾದ ಮಾತುಗಳನ್ನಾಡಿದರಂತೆ. ತತ್ಪರಿಣಾಮವಾಗಿ ನಾಯಕರಿಗೆ ಶೇಷಣ್ಣನವರ ಬಗ್ಗೆ ಕೊಂಚ ತಾತ್ಸಾರಭಾವನೆ ಅಂಕುರಿಸಿತಂತೆ. ಈ ಸುದ್ದಿ ಶೇಷಣ್ಣನವರ ಕಿವಿಯನ್ನು ಮುಟ್ಟಲು ವಿಳಂಬವೇನೂ ಆಗಲಿಲ್ಲ. ಸೂಕ್ತ ಸಮಯಕ್ಕಾಗಿ ನಿರೀಕ್ಷಿಸುತ್ತಿದ್ದರು. ಈ ಬಾರಿ ನಾಯಕರ ಮನೆಯಲ್ಲಿ ಇಳಿದುಕೊಳ್ಳದೆ ಶೇಷಣ್ಣನವರು ಬೇರೆ ಎಲ್ಲೋ ಬಿಡಾರಮಾಡಿದರು. ಅವರು ಬಂದ ಸುದ್ದಿ ನಾಯಕರಿಗೆ ಮುಟ್ಟಿದರೂ ಎಂದಿನಂತೆ ಅವರನ್ನು ಸ್ವಾಗತಿಸಲು ನಾಯಕರು ಬರಲಿಲ್ಲವಂತೆ. ಅಂದು ಶುಕ್ರವಾರ, ಪದ್ಧತಿ ಯಂತೆ ನಾಯಕರ ಮನೆಯಲ್ಲಿ ಸಂಜೆ ಭಜನೆ ನಡೆಯಬೇಕು. ತುಕಾರಾಂ ಅವರದೇ ತಬಲ ಪಕ್ಕವಾದ್ಯ. ಇದೆಲ್ಲವನ್ನೂ ತಿಳಿದೇ ಶೇಷಣ್ಣನವರು ಆ ಸಮಯಕ್ಕೆಸರಿಯಾಗಿ ತಂಜಾವೂರಿನಲ್ಲಿ ಹಾಜರಾಗಿದ್ದುದು. ಮಧ್ಯಾಹ್ನ ಸುಮಾರು ನಾಲ್ಕು ಘಂಟೆ ಸಮಯ. ಶೇಷಣ್ಣನವರೇ ನಾಯಕರ ಮನೆಗೆ ನಡೆದರು. ಪದ್ಧತಿಯಂತೆ ನಾಯಕರು ಬೀದಿಯ ಜಗುಲಿಯಮೇಲೆ ಹಾಸು ಗಂಬಳಿಯಮೇಲೆ ದಿಂಬನ್ನೊರಗಿಕೊಂಡು ಪಕ್ಕದಲ್ಲಿ ವೀಳೇವೆಲೆ ಅಡಿಕೆಯ

ಪೆಟ್ಟಿಗೆಯನ್ನಿಟ್ಟುಕೊಂಡು, ಲೋಕಾಭಿರಾಮವಾಗಿ ಮಾತುಕತೆಗಳನ್ನಾಡುತ್ತಾ ಕೂತಿದ್ದರಂತೆ. ಶೇಷಣ್ಣನವರನ್ನು ಕಂಡ ತಕ್ಷಣವೇ ಕೂತ ಸ್ಥಳದಿಂದ ಎದ್ದು ಮರ್ಯಾದೆಯಿಂದ ಸ್ವಾಗತಿಸಿದರು ನಾಯಕರು. ನಾಯಕರ ಯೋಗಕ್ಷೇಮವನ್ನು ವಿಚಾರಿಸಿದ ನಂತರ ಶೇಷಣ್ಣನವರು "ನಾಯಕರೇ ಇದ್ದಕ್ಕಿದ್ದ ಹಾಗೆಯೇ ತಿರುಚಿನಾಪಳ್ಳಿಗೆ ಹೋಗಬೇಕಾದ ಪ್ರಮೇಯ ಬಂದಿತು. ಇಷ್ಟು ದೂರ ಬಂದ ಮೇಲೆ ತಮ್ಮ ದರ್ಶನಲಾಭವನ್ನು ಪಡೆದು ಹೋಗೋಣವೆಂಬ ಅಭಿಲಾಷೆಯಾಯಿತು. ಹೇಗಿದ್ದರೂ ಇವತ್ತು ಶುಕ್ರವಾರ; ಸಂಜೆ ಭಜನೆಯಲ್ಲಿ ನಾನೇ ನುಡಿಸಿಬಿಡುತ್ತೇನೆ. ನಮ್ಮ ತುಕಾರಾಂ ಅವರು ಮಾಮೂಲಿನಂತೆ ಬಂದೇ ಬರುತ್ತಾರಲ್ಲ, ಅವರದೇ ಆಗಲಿ ಇವತ್ತು ಪಕ್ಕವಾದ್ಯ ವಿನಿಕೆ. ಆಗಬಹುದಷ್ಟೇ ?" ಎಂದರು. 'ಅಗತ್ಯವಾಗಿ, ನನ್ನ ಪುಣ್ಯಕ್ಕೆ ಎಣೆಯೇ ಇಲ್ಲ' ಅಂದರು ನಾಯಕರು.

ಸಂಜೆ ಭಜನೆ ಸುಮಾರು ಏಳು ಘಂಟೆಯ ಹೊತ್ತಿಗೆ ಪ್ರಾರಂಭವಾಯಿತು. ತುಕಾರಾಂ ಅವರು ಎಷ್ಟು ಹೊತ್ತಾದರೂ ಕಾಣಲೇ ಇಲ್ಲ. ಅವರು ಬರುವವರೆಗೂ ಶೇಷಣ್ಣನವರೂ ಮನಸ್ಸಿಲ್ಲದ ಮನಸ್ಸಿನಿಂದ ಅದೂ ಇದೂ ನುಡಿಸಿ ಕಾಲತಳ್ಳುತ್ತಿದ್ದರು. ಅಲ್ಲೇ ಇದ್ದ ವಿದ್ಯಾರ್ಥಿಯೊಬ್ಬ ತಬಲ ಟೇಕಾ ಹಾಕುತ್ತಿದ್ದನಂತೆ. ಸುಮಾರು ರಾತ್ರಿ ಹತ್ತು ಘಂಟೆ ಹೊತ್ತಿಗೆ ತುಕಾರಾಂ ಅವರು ಬಂದರು. ಅವರು ಎಣಿಸಿದ್ದಂತೆ ಕಛೇರಿ ಮುಕ್ತಾಯವಾಗಿರಲಿಲ್ಲ. ನುಡಿಸಲೇಬೇಕಾಗಿ ಬಂತು.

ಶೇಷಣ್ಣನವರಿಗೆ ನಮಸ್ಕರಿಸಿದ. 'ಯಾರೂ ?' ಅಂದರು ಶೇಷಣ್ಣ. ಈ ವೇಳೆಗೆ ಅವರಿಗೆ ಪರೆ ಬೆಳೆದು ಕಣ್ಣು ಸರಿಯಾಗಿ ಕಾಣಿಸುತ್ತಿರಲಿಲ್ಲ. "ನಾನು ತುಕಾರಾಂ" ಎಂದ. ಸರಿ, ಆವೇಶಪೂರಿತರಾದರು ಶೇಷಣ್ಣ. ಅಮೋಘವಾಗಿ, ಅವ್ಯಾಹತವಾಗಿ ಪ್ರವಹಿಸತೊಡಗಿತು ಮನೋಧರ್ಮ. ಕೊಂಚ ಹೊತ್ತು ನುಡಿಸಿ, ತುಕಾರಾಂ ಅವರು, ಪಕ್ಕದಲ್ಲಿದ್ದ ವಿದ್ಯಾರ್ಥಿಯನ್ನೇ ಪುನಃ ಪಕ್ಕವಾದ್ಯ ಮುಂದುವರಿಸುವಂತೆ ಸೂಚಿಸಿ ಸಭೆಯಿಂದ ಹೊರಬಿದ್ದರಂತೆ ! ಕಛೇರಿ ಮುಗಿಯುವ ವೇಳೆ ರಾತ್ರಿ ಒಂದು ಘಂಟೆಯಾಗಿತ್ತು. ಆಯಾಸ ಹೊಂದಿದ್ದ ಶೇಷಣ್ಣನವರು ವೀಣೆಯನ್ನು ಕೆಳಗಿರಿಸಿ ಗೋಡೆಯನ್ನೊರಗಿ ಕೂತು, "ತುಕಾರಾಂ" ಅಂದರು. ಎಲ್ಲಿಂದ ಬರ

ಬೇಕು ತುಕಾರಾಂ ! ನಾಯಕರು ಸಾಷ್ಟಾಂಗ ನಮಸ್ಕಾರಮಾಡಿ, ಕ್ಷಮಾಪಣೆ ಬೇಡಿ, ನಡೆದಿದ್ದ ವೃತ್ತಾಂತವನ್ನೆಲ್ಲಾ ಸಭಿಕರಲ್ಲಿ ವಿವರಿಸಿದರಂತೆ !

ನಾನು ತಿರುವೈಯ್ಯಾರಿನಲ್ಲಿ ನಮ್ಮ ಗುರುಗಳ ಮನೆಯಲ್ಲಿದ್ದಾಗ್ಗೆ ಶೇಷಣ್ಣನವರು ಒಂದಾವರ್ತಿ ಅಲ್ಲಿಗೆ ದಯಮಾಡಿಸಿದ್ದರು. ನಮ್ಮ ಗುರುಗಳನ್ನು ಭೇಟಿಮಾಡಿ ಅವರ ಅನುಮತಿಯನ್ನು ಪಡೆದು ಶ್ರೀರಂಗಕ್ಕೆ ನನ್ನನ್ನು ಕರೆದುಕೊಂಡು ಹೋದರು. ಅಲ್ಲಿಯ ಪ್ರಸಿದ್ಧ ಜಹಗೀರುದಾರರಾಗಿದ್ದ ಕವಡೇಲ್ ವಾಸುದೇವಯ್ಯಂಗಾರ್ಯರ ಮನೆಯಲ್ಲಿ ಅವರ ಕಛೇರಿ ಏರ್ಪಾಡಾಗಿದ್ದಿತು. ಅಯ್ಯಂಗಾರ್ಯರಿಗೆ ನನ್ನ ಪರಿಚಯಮಾಡಿಕೊಟ್ಟರು. ತಮ್ಮ ಕಛೇರಿಯಾದಮೇಲೆ ನನ್ನನ್ನು ಸ್ವಲ್ಪ ಹಾಡುವಂತೆ ಹೇಳಿದರು. ಕೊಯಮುತ್ತೂರಿನ ಪ್ರಸಂಗವನ್ನು ಶೇಷಣ್ಣನವರಿಗೆ ಜ್ಞಾಪಿಸಿದೆ ನಾನು. "ಬಾಲಕಾಂಡದ ಪ್ರಸ್ತಾಪ ಮತ್ತೆ ಏಕೆ?" ಅಂದರು ಶೇಷಣ್ಣ. ಬಹಳ ಒತ್ತಾಯಮಾಡಿದ ಮೇಲೆ ಗುರುಗಳಿಂದ ಕಲಿತ ಪಾಠವನ್ನು ಕೊಂಚ ಹಾಡಿದೆ. "ನಮ್ಮ ಮೈಸೂರಿನ ಹುಲಿಮರಿ" ಎಂದು ಅಯ್ಯಂಗಾರ್ಯರನ್ನು ಕುರಿತು ಹೇಳಿದರು. ತಿರುವೈಯ್ಯಾರಿಗೆ ಹಿಂತಿರುಗಿದ ಮೇಲೆ ನಮ್ಮ ಗುರುಗಳಿಗೆ "ಗುರುವಿಗೆ ತಕ್ಕ ಶಿಷ್ಯ, ತಮ್ಮ ವರದಹಸ್ತ ಈತನಮೇಲೆ ಸತತವಾಗಿರಬೇಕು" ಎಂದರು.

ನಾಯಕರ ಮನೆಯಲ್ಲಿ ನಡೆದ ಸ್ಪರ್ಧೆಯಂತೆಯೇ ತಿರುವಾಂಕೂರು ಸಂಸ್ಥಾನದಲ್ಲಿ ಒಂದು ಬಾರಿ ನಡೆಯಿತಂತೆ. ವೀಣೆ ಕಲ್ಯಾಣಕೃಷ್ಣ ಭಾಗವತರು ತಿರುವಾಂಕೂರು ಸಂಸ್ಥಾನದ ಹಿರಿಯ ವಿದ್ವಾಂಸರು. ಅವರ ವೀಣಾವಾದನವನ್ನೂ, ಮೈಸೂರು ಶೇಷಣ್ಣನವರ ವೀಣಾವಾದನವನ್ನೂ ಜೊತೆಯಲ್ಲಿ ಕೇಳಿ ಆನಂದಿಸಬೇಕೆಂಬ ಅಭಿಲಾಷೆಯಾಯಿತಂತೆ, ದೊರೆಗಳಿಗೆ. ವಿಶೇಷ ಆಹ್ವಾನದಮೇಲೆ ಶೇಷಣ್ಣನವರು ತಿರುವಾಂಕೂರಿಗೆ ತೆರಳಿದರು. ಊರಿಗೆ ಕಾಲಿಟ್ಟೊಡನೆಯೇ ಅಲ್ಲಿದ್ದ ಇವರ ಕೆಲವು ಹಿತೈಷಿಗಳು ಆಹ್ವಾನದ ಗೂಢಾರ್ಥವನ್ನು ತಿಳಿಸಿದರಂತೆ. "ಬಹಳ ಸಂತೋಷ, ದೇವರಿದ್ದಾನೆ" ಎಂದು ಸುಮ್ಮನಾದರು ಶೇಷಣ್ಣನವರು.

ಅಂದು ರಾತ್ರಿ ರಾಜಸಮ್ಮುಖದಲ್ಲಿ ಎರಡು ಹುಲಿಗಳೂ ಸೇರಿದವು. ಕೃಷ್ಣಭಾಗವತರೇ ಮೊದಲು ಆರಂಭಿಸಿ ಸುಮಾರು ಎರಡು ಘಂಟೆಗಳಕಾಲ ಅಮೋಘವಾಗಿ ನುಡಿಸಿದರಂತೆ. ನಂತರ ಶೇಷಣ್ಣನವರ ಸಂಗೀತ

ಪ್ರಾರಂಭವಾಯಿತು. ದೊರೆಯ ಅಭೀಷ್ಟ ನೆರವೇರಿತು. ತನ್ನ ಮನಸ್ಸಿನಲ್ಲಿಯೇ ಎರಡನ್ನೂ ತೂಗಿ ತೀರ್ಮಾನಿಸಿಕೊಂಡ, ಆದರೆ ಯಾವ ಭಾವನೆಯನ್ನೂ ಬಹಿರಂಗವಾಗಿ ವ್ಯಕ್ತಪಡಿಸಲಿಲ್ಲ. ಇಬ್ಬರು ವಿದ್ವಾಂಸರುಗಳಿಗೂ ಒಂದೇ ವಿಧವಾದ ಮರ್ಯಾದೆ ಮಾಡಿದ. ಆದರೆ ಕೃಷ್ಣಭಾಗವತರು ಪ್ರಭುಗಳಿಗೆ ನಮಸ್ಕರಿಸಿ "ಮಹಾಪ್ರಭು! ಈ ಎರಡು ವೀಣಾವಾದನಗಳನ್ನೂ ತಾವೇ ಕೇಳಿದ್ದೀರಿ. ನನಗೆ ತೋರುವುದೇನೆಂದರೆ, ಅಮೃತ ಭಾಗವನ್ನೆಲ್ಲ ಶಾರದೆ ಶೇಷಣ್ಣನವರಿಗೆ ಅನುಗ್ರಹಿಸಿ, ವಿಷಭಾಗ ಮಾತ್ರ ನನ್ನ ಪಾಲಿಗೆ ಬಿಟ್ಟಂತೆ ತೋರುತ್ತೆ ಪ್ರಭು. ಈ ವೀಣಾ ವೈಖರಿಯನ್ನ ನಾನು ಹಿಂದೆ ಕೇಳಿರಲಿಲ್ಲ, ಮುಂದೆ ಕೇಳುವ ಭರವಸೆ ಇಲ್ಲ" ಎಂದರಂತೆ.

ರಾಮನಾಥಪುರದ ಭಾಸ್ಕರ್ ಸೇತೂಪತಿ ಮಹಾರಾಜ ಮಹಾ ಭೋಗಿ ಹಾಗೂ ತ್ಯಾಗಿ. ಶೇಷಣ್ಣನವರ ವೀಣಾವಾದನವನ್ನು ಕೇಳಿ ಆನಂದಿಸಬೇಕೆಂಬ ಬಯಕೆಯಾಯಿತು ಅವನಿಗೆ. ವಿಶೇಷ ಆಹ್ವಾನ ಕಳುಹಿಸಿದ. ಆಗ ಮೈಸೂರಿನಲ್ಲಿ ದಸರಾ ಸನ್ನಿವೇಶ. ರೀಜೆಂಟರ ದವಲತ್ತು. ಮಹಾರಾಣಿಯುವರ ಅನುಮತಿ ಪಡೆದು ಶೇಷಣ್ಣನವರು ರಾಮನಾಡಿಗೆ ತೆರಳಿದರು. ಅಖಂಡವಾಗಿ ಏಳು ದಿನ ಕಛೇರಿಯಾಯಿತಂತೆ. ಪ್ರತಿ ದಿನ ತಾನು ಸಭೆಗೆ ಬರುವಾಗ ಧರಿಸಿದ್ದ ಜವಾಹಿರಿಯನ್ನೂ ಮಹಾರಾಜ ಸಭೆ ಮುಕ್ತಾಯವಾದ ಮೇಲೆ ಶೇಷಣ್ಣನವರಿಗೆ ಸಮರ್ಪಿಸುತ್ತಿದ್ದನಂತೆ. ಇಷ್ಟಾದರೂ 'ಶೇಷಣ್ಣನವರೇ, ನಿಮ್ಮ ಯೋಗ್ಯತೆಗೆ ಏನು ಕೊಟ್ಟರೆ ತಾನೇ ಸರಿ ತೂಗಬಲ್ಲದು.? ನಾನು ಬಡವ, ಏನೂ ಕೊಡಲಾರೆ. ನಿಮ್ಮ ಮಹಾರಾಣಿಯವರಿಗೆ ಇವೆಲ್ಲವನ್ನೂ ಏನೆಂದು ತೋರಿಸುತ್ತೀರಿ"? ಎಂದು ಸಂತೋಷಪಟ್ಟನಂತೆ.

1911 ರಲ್ಲಿ ಬರೋಡ ಸಂಸ್ಥಾನದ ಸಯ್ಯಾಜಿರಾವ್ ಗಾಯಕವಾಡ್ ಅವರು ಶೇಷಣ್ಣನವರನ್ನು ಅರಮನೆಗೆ ಕರೆಯಿಸಿಕೊಂಡು, ನಾಲ್ಕಾರು ಕಛೇರಿಗಳನ್ನು ಕೇಳಿ ಆನಂದಿಸಿ, ಸುಂದರವಾದ ಮೇನಾ ಒಂದರಲ್ಲಿ ಶೇಷಣ್ಣನವರನ್ನು ಕುಳ್ಳಿರಿಸಿ ವೈಭವದಿಂದ ಊರಲ್ಲೆಲ್ಲ ಮೆರವಣಿಗೆ ಮಾಡಿಸಿದರಂತೆ.

ಹೀಗೆ ತಮ್ಮ ದಿಗ್ವಿಜಯದಿಂದ ಮೈಸೂರಿನ ಕೀರ್ತಿಯನ್ನು ದಿಕ್ಕು ದಿಕ್ಕುಗಳಲ್ಲೂ ಪಸರಿಸಿದ ಶಾರದಾಂಬೆಯ ಈ ವರಪುತ್ರರಿಗೆ ನಾಲ್ವಡಿ

ಕೃಷ್ಣರಾಜ ಒಡೆಯರು ತಾವು ದವಲತ್ತನ್ನು ವಹಿಸಿದ ವಾರನೆಯ ದಿನವೇ ವಿಶೇಷ ದರ್ಬಾರಿನಲ್ಲಿ ಎರಡು ಕೈಗಳಿಗೂ ಎರಡು ಘಂಟೆ ತೋಡಗಳನ್ನು ದಯಪಾಲಿಸಿ ವೈಣಿಕ ಶಿಖಾಮಣಿಯೆಂಬ ಅನ್ವರ್ಥವಾದ ಪ್ರಶಸ್ತಿಯನ್ನು ನೀಡಿದರು. ಪ್ರಾಪ್ತವಯಸ್ಕರಾದಮೇಲೆ ತಾವೂ ಕೂಡ ಶೇಷಣ್ಣನವರಲ್ಲಿ ಶಿಷ್ಯವೃತ್ತಿಯನ್ನವಲಂಭಿಸಿದರು.

ಹೆಸರು ವೀಣೆ ಶೇಷಣ್ಣನವರೆಂದು ಬಳಕೆಗೆ ಬಂದಿತೇ ವಿನಾ ಅವರು ನುಡಿಸದೇ ಇದ್ದ ವಾದ್ಯವೇ ಇಲ್ಲ. ಚಾಮರಾಜ ಒಡೆಯರ ಕಾಲದಲ್ಲಿ ಮೌಲಾನಾಭಕ್ಷ್ ಎಂಬ ವಿದ್ವಾಂಸನೊಬ್ಬ ಮೊಟ್ಟ ಮೊದಲು ಜಲತರಂಗ್ ವಾದ್ಯವನ್ನು ಮೈಸೂರಿಗೆ ಪರಿಚಯಮಾಡಿಕೊಟ್ಟ. ಚಾಮರಾಜ ಒಡೆಯರ ಸಮ್ಮುಖದಲ್ಲಿ ಆತನ ಕಛೇರಿಯಾಯಿತು. ವಾದ್ಯದ ಕಿಣಿಕಿಣಿ ನಾದ ಪ್ರಭುಗಳಿಗೆ ಬಲು ಒಪ್ಪಿಗೆಯಾಯಿತು.

"ನೋಡಿದೆಯಾ ಶೇಷಣ್ಣ–ಹೇಗಿದೆ ಈ ವಾದ್ಯ?" ಅಂದರಂತೆ ದೊರೆಗಳು.

"ಅಪ್ಪಣೆಯಾದರೆ ಈ ಸಂಜೆ ನಾನು ನುಡಿಸುತ್ತೇನೆ" ಅಂದರು ಶೇಷಣ್ಣ.

ದೊರೆಗಳಿಗೆ ಪರಮಾಶ್ಚರ್ಯವಾಯಿತಂತೆ. ಆ ವಾದ್ಯವನ್ನು ಅರಮನೆಯಲ್ಲೇ ಬಿಟ್ಟುಹೋಗುವಂತೆ ಮೌಲಾನಾಭಕ್ಷ್‌ಗೆ ಹೇಳಿಕಳುಹಿಸಿದರು. ಸಾಯಂಕಾಲ ಪ್ರಭುಗಳೆದುರಿನಲ್ಲಿ ನುಡಿಸಿಯೇ ನುಡಿಸಿದರು ಶೇಷಣ್ಣ. ಇದಲ್ಲದೆ, ಪಿಟೀಲು, ಪಿಯಾನೋ, ಸ್ವರಬತ್ತು — ಈ ಹಲವಾರು ವಾದ್ಯಗಳಲ್ಲೂ ಪರಿಶ್ರಮ ಪಡೆದಿದ್ದರು.

ನನ್ನ ಗುರುಗಳ ಆಶೀರ್ವಾದ ಪಡೆದು ಮೈಸೂರಿಗೆ ವಾಪಸ್ಸುಬಂದೆ. ಬಂದೊಡನೆಯೇ ಪ್ರಭುಗಳಾದ ಚಾಮರಾಜ ಒಡೆಯರಿಗೆ ನನ್ನ ಹೃತ್ಪೂರ್ವಕವಾದ ಅಭಿನಂದನೆಗಳನ್ನು ಅರ್ಪಿಸಿ, ಶೇಷಣ್ಣನವರ ಮನೆಗೆ ನೇರವಾಗಿ ನಡೆದೆ. ಬಾಚಿ ತಬ್ಬಿಕೊಂಡರು ನನ್ನನ್ನು ಶೇಷಣ್ಣನವರು. ಗುರುಗಳಿಂದ ಕಲಿತದ್ದನ್ನ ಹಾಡಿ ಶೇಷಣ್ಣನವರ ಅನುಗ್ರಹ ವಿಶ್ವಾಸಗಳನ್ನು ಸಂಪಾದಿಸಬೇಕೆಂಬ ಬಯಕೆ ನನಗೆ. ಕೊಂಚ ಹಾಡಿದೆ. ಶೇಷಣ್ಣನವರ ಆನಂದಕ್ಕೆ ಪರಿಮಿತಿಯೇ ಇರಲಿಲ್ಲ. ಅಕ್ಕ ವೆಂಕಮ್ಮನವರನ್ನೂ ಬರಮಾಡಿಕೊಂಡರು. ಇಬ್ಬರೂ ಬಲು ಹೊತ್ತು ನನ್ನ ಹಾಡುಗಾರಿಕೆ

ಯನ್ನು ಕೇಳಿ ಆಶೀರ್ವದಿಸಿದರು. ಮೈಸೂರು ಸದ್‌ವಿದ್ಯಾ ಪಾಠಶಾಲೆಯಲ್ಲಿ ನಡೆದ ಸಾರ್ವಜನಿಕ ಸಮಾರಂಭದಲ್ಲಿ ಮೊಟ್ಟಮೊದಲನೆಯ ಸನ್ಮಾನ ಶೇಷಣ್ಣನವರಿಂದಲೇ ನಡೆದದ್ದು ನನ್ನ ಪುಣ್ಯವಿಶೇಷವೆಂದು ಬಗೆದೆ. ತಮಗೆ ಬಹುಮಾನವಾಗಿ ಬಂದಿದ್ದ ತೋಡೆವನ್ನೇ ನನಗೆ ದಯಪಾಲಿಸಿ ಅನುಗ್ರಹಿಸಿದರು.

ಮೈಸೂರಿನಲ್ಲಿ ಕೃಷ್ಣೋತ್ಸವವನ್ನು ಪ್ರಾರಂಭಿಸಿದವರೇ ಶೇಷಣ್ಣ. ಮೈಸೂರಿನ ರಾಮೋತ್ಸವ, ಕೃಷ್ಣೋತ್ಸವ, ಬೆಂಗಳೂರಿನ ವಾಮನ ಜಯಂತಿಗಳೆಂದರೆ ಗಾನಪ್ರೇಮಿಗಳಿಗೆ ರಸಕವಳದಂತೆ. ಪ್ರತಿವರ್ಷವೂ ಕೃಷ್ಣೋತ್ಸವದಲ್ಲಿ ನಾನು ಹಾಡುವಂತೆ ಆಜ್ಞೆ ಇತ್ತಿದ್ದರು. ಆಗಿನ ದಿನಗಳಲ್ಲಿ ಪಿಟೀಲು ಮೃದಂಗ ಪಕ್ಕವಾದ್ಯಗಳನ್ನು ನುಡಿಸುವ ವಿದ್ವಾಂಸರುಗಳೇ ಮೈಸೂರಿನಲ್ಲಿ ಅಪರೂಪ. ಬಹುತರವಾಗಿ ತಂಬೂರಿಯ ಶ್ರುತಿಯಮೇಲೆ ಹಾಡುವುದೇ ವಾಡಿಕೆಯಾಗಿತ್ತು. ನಾನು ಹಾಡುವಾಗ್ಗೆ ತಾವೇ ಒಳಗೆ ಹೋಗಿ ಪಿಟೀಲನ್ನು ತಂದು ಪಕ್ಕವಾದ್ಯ ನುಡಿಸುತ್ತಿದ್ದರು ಶೇಷಣ್ಣನವರು. ಅಂತಹ ವಿಶಾಲ, ನಿರ್ಮಲ ಹೃದಯ. ಸಂಗಿತವಾದನಂತರ ಕೃಷ್ಣದೇವರ ಮೇಲೆ ಹೊದಿಸಿದ್ದ ಪೀತಾಂಬರವನ್ನೇ ತಂದು ನನಗೆ ಆಶೀರ್ವಾದ ಪೂರ್ವಕವಾಗಿ ಕೊಟ್ಟ ಸಂದರ್ಭಗಳೆಷ್ಟೋ! ಒಂದು ಬಾರಿ, ನನ್ನ ಸಂಗೀತವಾಯಿತು. ಕಛೇರಿಯಾದನಂತರ ಬಂದ ಸಭಿಕರೆಲ್ಲ ವಾಪಸ್ಸು ತೆರಳಿದರು. ' ಇನ್ನೂ ಕೊಂಚ ಹಾಡಿ ' ಅಂದರು, ನನಗೆ. ಯಾವುದೋ ಒಂದು ರಾಗವನ್ನು ಹಾಡಿ, ಕೊಂಚ ಮಹಿಮಕಾಲ ಹಾಡಿ, ಎರಡಾವರ್ತ ಪಲ್ಲವಿ ಹಾಡಿದೆ. " ಸಾಕು ಆಚಾರ್ಯರೇ, ಈ ನಾದಸುಧೆ ನನ್ನ ಕಿವಿಯಲ್ಲೇ ಚಿರವಾಗಿ ನಿಲ್ಲಲಿ " ಎಂದು ಭೋಜನಮಾಡದೆಯೇ ದೇವರಸನ್ನಿಧಿಯಲ್ಲಿ ಮಲಗಿದ್ದರು. ವಿದ್ಯಾರ್ಜನೆ ಮಾಡಿದ್ದು ಇದೀಗ ಸಾರ್ಥಕವಾಯಿತೆಂದು ಬಗೆದು ನನ್ನ ವಿದ್ಯಾಗುರುಗಳೆಲ್ಲರನ್ನೂ ಕೃತಜ್ಞತೆಯಿಂದ ಸ್ಮರಿಸಿಕೊಂಡೆ!

'ವೀಣೆ ನುಡಿಸಿದರೆ ಹೇಗಿರಬೇಕೂಂತೀರಿ ಆಚಾರ್ಯರೇ? ' ಎಂದು ಒಂದು ಬಾರಿ ನನ್ನನ್ನು ಕೇಳಿದರು. 'ಹೇಗಿರಬೇಕು?' ಅಂದೆ. "ಮಧುರಂ ವೀಣಾರಣಿತಂ ಪಂಚಮ ಸುಭಗಶ್ಚ ಕೋಕಿಲಾಲಾಪಃ" ಅಂತಾರಲ್ಲ ಹಾಗೆ, ನಾದ ಮೃದು ಮಧುರವಾಗಿರಬೇಕು. ಕಟುವಾಗಿರಬಾರದು. ಮರದ ಕಟಪಟ ಶಬ್ದ, ತಂತಿಯ ಶಬ್ದ ಒಂದೂ ಕೇಳಿಸಬಾರದು. ತಂತಿಯಿಂದ

ಹೊರಹೊಮ್ಮುವ ಶುದ್ಧ ನಾದಬಿಂದು ಮಾತ್ರ ಕಿವಿಗೆ ಬೀಳುವಂತೆ ನುಡಿಸಬೇಕು ಅಂತ ಹೇಳುತ್ತಿದ್ದರು. ಅವರು ನುಡಿಸಿದರೆ ಹಾಗೆಯೇ ಇರುತ್ತಿತ್ತು. ಶಂಕರಾಭರಣ, ಕಲ್ಯಾಣಿ, ಕಮಾಚ್, ಬೇಗಡೆ, ಕೇತಾರಗೌಳ ಇವು ಅವರ ಮೆಚ್ಚಿನ ರಾಗಗಳೆನ್ನಬಹುದು. ಬಹು ನಿಷ್ಕರ್ಷೆಯ ಲಯಜ್ಞಾನ. ದಾಟು ಸ್ವರ ಸಂಯೋಜನೆಯಲ್ಲಿ ಹೆಚ್ಚು ಪ್ರೀತಿ. ನೀವು ಅರವತ್ತು ಆವರ್ತ, ನೂರು ಆವರ್ತ, ನೂರಿಪ್ಪತ್ತು ಆವರ್ತ ನುಡಿಸಿ ಅಂತ ಹೇಳಿದರೆ, ತಾಳ ಹಾಕಿಕೊಳ್ಳದೆಯೇ ಅಷ್ಟೇ ಆವರ್ತಗಳನ್ನು ನುಡಿಸಿ ನಿಲ್ಲಿಸುತ್ತಿದ್ದರು. ಅಂಥ ಖಚಿತವಾದ ಸಾಧಕ ಮತ್ತು ಜ್ಞಾನಸಂಪತ್ತು !

ಬಹು ಶಾಂತಮೂರ್ತಿ ಶೇಷಣ್ಣನವರು. ಆಚಾರಶೀಲರು. " ನನ್ನ ಎಂಟನೆಯ ವಯಸ್ಸಿನಲ್ಲಿ ಶನಿಸ್ತೋತ್ರ ಪಾರಾಯಣವನ್ನು ಪ್ರಾರಂಭಿಸಿದೆ. ಇಂದಿನವರೆಗೂ ನನ್ನ ತಲೆಕಾಯುತ್ತಿರುವುದೇ ಅದು '' ಎಂದು ಹೇಳುತ್ತಿದ್ದರು. ಊಟ ಉಡಿಗೆಗಳಲ್ಲಿ ಸುಖಿಯಲ್ಲವೆನ್ನಬಹುದು. ಈ ವಿಷಯದಲ್ಲಿ ಇವರಿಗೂ ನಮ್ಮ ಸುಬ್ಬಣ್ಣನವರಿಗೂ ಅಜಗಜಾಂತರ. ಇಪ್ಪತ್ತು ನಾಲ್ಕು ಘಂಟೆಯೂ ಅವರಿಗೆ ಒಂದೇ ಯೋಚನೆ—ಅದೇ ವೀಣೆ. " ವೀಣೆಯ ಶಕ್ತಿಗೆ ತಕ್ಕಂತೆ ನುಡಿಸಬಲ್ಲ ಪುಣ್ಯಾತ್ಮನೂ ಉಂಟೇ " ಅನ್ನುತ್ತಿದ್ದರು. ಅವರಿಗಾಗಿಯೇ ವೀಣೆ, ವೀಣೆಗಾಗಿಯೇ ಅವರು ಅನ್ನುವಷ್ಟು ನಾದೋಪಾಸನಾಮೂರ್ತಿಗಳಾಗಿದ್ದರು ಶೇಷಣ್ಣ.

1926 ರಲ್ಲಿ ಈ ಕಲಾಯೋಗಿಯ ಇಹಲೋಕವ್ಯಾಪಾರ ಕೊನೆಗೊಂಡಿತು. ಕಲಾಕ್ಷೇತ್ರದಲ್ಲಿ ಅವರ ಸ್ಥಾನ ಅಮರವಾದುದು.

# ಸುಬ್ಬಣ್ಣ

ತನ್ನ ಆಸ್ಥಾನಕ್ಕೆ ಬಂದ ಕವಿಪುಂಗವರಿಗೆ ಅಕ್ಷರಕ್ಕೆ ಲಕ್ಷ ಕೊಡುತ್ತಿದ್ದನಂತೆ ಭೋಜಮಹಾರಾಜ. ಅವನ ಉದಾರತೆಗೆ ಮೇರೆ ಮಿತಿಯೇ ಇರಲಿಲ್ಲ. ಅರಮನೆಯ ಐಶ್ವರ್ಯವೆಲ್ಲ ಹೀಗೆ ಸೂರೆಯಾಗುತ್ತ ಬಂದರೆ ಮುಂದೆ ಗತಿಯೇನು ಎಂಬ ಕಳವಳವುಂಟಾಯಿತಂತೆ ಅವನ ಮಂತ್ರಿ ಬುದ್ಧಿಸಾಗರನಿಗೆ. ದೊರೆಗೆ ವಿವೇಕ ಹೇಳಲು ಆತ ಒಂದು ಉಪಾಯ ಹೂಡಿದ. ದೊರೆ ಆಸ್ಥಾನಕ್ಕೆ ಹೋಗುವಾಗ ಅವನ ಕಣ್ಣಿಗೆ ಗೋಚರವಾಗುವಂತೆ ಗೋಡೆಯಮೇಲೆ "ಆಪದರ್ಥಂ ಧನಂ ರಕ್ಷೇತ್" ಎಂದು ಬರೆದು ಬಂದ. ದೊರೆ ಇದನ್ನು ನೋಡಿದೊಡನೆಯೆ ಇದು ಮಂತ್ರಿಯ ಕೆಲಸವೇ ಇರಬೇಕೆಂದು ತೀರ್ಮಾನಿಸಿಕೊಂಡ. ಸ್ನಾನಮಾಡಿಕೊಂಡು ಹಿಂತಿರುಗುವಾಗ ಮಂತ್ರಿ ಬರೆದು ಹೋಗಿದ್ದ ಪಂಕ್ತಿಯ ಕೆಳಗೆ ದೊರೆ "ಶ್ರೀಮತಾಂ ಆಪದಃ ಕುತಃ?" ಎಂದು ಬರೆದು ಬಂದ. ತಾನು ಬರೆದಿದ್ದ ಮಾತುಗಳು ದೊರೆಯಮೇಲೆ ಯಾವ ಪರಿಣಾಮವನ್ನುಂಟು ಮಾಡಿದೆಯೋ ನೋಡಬೇಕೆನ್ನುವ ಕುತೂಹಲದಿಂದ ಬುದ್ಧಿಸಾಗರ ಹೋಗಿ ನೋಡಿದ. ದೊರೆಯ ಪ್ರಶ್ನೆಯ ಅಭಿಪ್ರಾಯವಾಯಿತು. ಮತ್ತೆ ಬರೆದ ಅದರ ಕೆಳಗೆ "ಸಾಚೇಪಪಗತಾ ಲಕ್ಷ್ಮೀಃ" ಎಂದು. ಮಾರನೆಯ ದಿನ ದೊರೆ ಯಥಾಪ್ರಕಾರ ಸ್ನಾನಕ್ಕೆ ಹೋಗುವಾಗ ಮೂರನೆಯ ಪಂಕ್ತಿ ಕಣ್ಣಿಗೆ ಬಿತ್ತು. "ಸರಿ" ಅಂತ ಮನಸ್ಸಿನಲ್ಲಂದುಕೊಂಡು ಸ್ನಾನ ಮುಗಿಸಿ ಹಿಂತಿರುಗುವಾಗ "ಸಂಚಿತಾರ್ಥಂ ವಿನಶ್ಯತಿ" ಎಂದು ಮಂತ್ರಿಯ ಸಮಸ್ಯೆಯನ್ನು ಬಗೆಹರಿಸಿದನಂತೆ!

ಅಂದು ಸಂಜೆ ಸುಬ್ಬಣ್ಣನವರ ಮನೆಯಲ್ಲಿ ಬೆಂಗಳೂರು ನಾಗರತ್ನಮ್ಮನವರ ಕಛೇರಿ ನಡೆದ ದಿನ, ಈ ಕಥೆ ಜ್ಞಾಪಕಕ್ಕೆಬಂದಿತು, ನನಗೆ. ಸುಬ್ಬಣ್ಣನವರ ಮನೆಯಲ್ಲಿ ಸಂಗೀತವಾಗಬೇಕಾದರಾಗಲೀ ಸಂತರ್ಪಣೆ ನಡೆಯಬೇಕಾದರಾಗಲೀ ವಿಶೇಷ ಸಂದರ್ಭ ಸನ್ನಿವೇಶಗಳ ಅಗತ್ಯವಿರಲಿಲ್ಲ. ನಿತ್ಯೋತ್ಸವ ಅವರ ಮನೆಯಲ್ಲಿ. ಪ್ರತಿದಿನವೂ ರಸಕವಳ, ಪ್ರತಿ ದಿನವೂ ಸಂಗೀತ ಕಛೇರಿ. ಅಂದು, ಕಛೇರಿಯೆಲ್ಲ ಮುಗಿದಮೇಲೆ ನಾಗರತ್ನಮ್ಮ

ನವರಿಗೆ ವಿಶೇಷವಾದ ವಸ್ತ್ರಾಭರಣಗಳನ್ನು ಕೊಟ್ಟು ಸುಬ್ಬಣ್ಣನವರು ಸನ್ಮಾನಿಸಿದರು. ಬಂದಿದ್ದ ಸಭಿಕರಿಗೆಲ್ಲ ಊಟ ಉಪಚಾರಗಳು ಅಲ್ಲೇ ಜರುಗಿದವು. ಎಲ್ಲರೂ ತೆರಳಿದಮೇಲೆ, ನಾಗರತ್ನಮ್ಮನವರೂ ಸುಬ್ಬಣ್ಣ ನವರನ್ನು ವಂದಿಸಿ ಹೊರಡಲನುವಾದರು. ಹೊರಡುವಾಗ್ಗೆ ಎದುರಿಗೆ ಗೋಡೆಯ ಬೀರುವಿನಲ್ಲಿದ್ದ ಅತ್ತರು ಸೀಸೆಗಳು ನಾಗರತ್ನಮ್ಮನ ದೃಷ್ಟಿಗೆ ಬಿದ್ದವು. "ಭಕ್ಷಿಯವರಾ! ನನಗೊಂದು ಅತ್ತರು ಸೀಸೆ ಅಪ್ಪಣೆಯಾಗ ಬೇಕು'' ಅಂದರು ಆಕೆ. ತೊಲ ಒಂದಕ್ಕೆ ಎಂಭತ್ತು ರೂಪಾಯಿನಂತೆ ಹತ್ತು ತೊಲಗಳನ್ನು ಸುಬ್ಬಣ್ಣನವರು ಅಂದೇ ಕೊಂಡಿದ್ದರು. "ಒಂದಿಲ್ಲ ದಿದ್ದರೆ ಹತ್ತನ್ನೂ ತೆಗೆದುಕೊಂಡು ಹೋಗಿ, ಇದು ಯಾವ ಮಹಾ ವಿಷಯ?" ಅಂತಂದು ಸುಬ್ಬಣ್ಣನವರು ಹತ್ತು ಸೀಸೆಗಳನ್ನೂ ತೆಗೆದು ಆಕೆಗೆ ಕೊಟ್ಟು ಕಳುಹಿಸಿದರು.

"ಸುಬ್ಬಣ್ಣ" ಅಂದರು ಜೊತೆಯಲ್ಲಿದ್ದ ಅರಮನೆ ಪುಟ್ಟಣ್ಣಯ್ಯ ನವರು. ಪುಟ್ಟಣ್ಣಯ್ಯನವರು ಅಂದರೆ ಶೇಷಣ್ಣ ಸುಬ್ಬಣ್ಣ–ಉಭಯತ್ರ ರಿಗೂ ಬಹು ಮೆಚ್ಚಿನ, ನೆಚ್ಚಿನ, ಸಲಿಗೆಯ ವ್ಯಕ್ತಿ. ಎರಡು ಮನೆಯವ ರಿಗೂ ಆಪ್ತರು, ಹಿತೈಷಿಗಳು. ಸುಬ್ಬಣ್ಣ ಶೇಷಣ್ಣನವರ ನಡುವೆ ವೈಮನಸ್ಯ ತಲೆದೋರಿದಾಗ ಪುಟ್ಟಣ್ಣನವರ ಸಂಧಾನಬಲದಿಂದ ಒಡೆದ ಮುತ್ತು ಮತ್ತೆ ಒಂದುಗೂಡುತ್ತಿತ್ತು.

"ಏನು ಪುಟ್ಟಣ್ಣನವರೇ" ಅಂದರು ಸುಬ್ಬಣ್ಣ.

"ನಿನ್ನ ಕೊಡುಗೈ ಶ್ಲಾಘ್ಯವಾದದ್ದೇ ಸರಿ, ಸುಬ್ಬಣ್ಣ. ಆದರೆ ಯಾವುದಕ್ಕೂ ಒಂದು ಮಿತಿಯಿದ್ದರೆ ಒಳ್ಳೆಯದು"

"ಈಗ ಆದದ್ದಾದರೂ ಏನು ಪುಟ್ಟಣ್ಣ?''

"ಅಲ್ಲ. ಇವತ್ತು ಬೆಳಿಗ್ಗೆ ತಾನೇ ಎಂಟುನೂರು ರೂಪಾಯಿ ಸುರಿದು ಅತ್ತರನ್ನು ತಂದಿ. ಆಗಲೇ ಹೇಳಿದೆ ನಾನು, ಇದಕ್ಕೆಲ್ಲ ಯಾಕೆ ದುಡ್ಡು ವ್ಯಯಮಾಡುತ್ತಿ ಎಂದು. ಹೋಗಲೀ, ನೀನಾದರೂ ಉಪಯೋಗಿಸಿದೆಯಾ ಅಂದರೆ ಅದೂ ಇಲ್ಲ. ಹುಣಿಸೇಬೀಜದ ಹಾಗೆ ದುಡ್ಡು ಹೀಗೆ ಖರ್ಚಾಗು ತ್ತಿದ್ದರೆ ಮುಂದಿನ ಗತಿಯ ಕಡೆ ಗಮನವೇ ಬೇಡವೇ ಸುಬ್ಬಣ್ಣ?''

ಬುದ್ಧಿಸಾಗರನಿಗೆ ಭೋಜರಾಜ ಕೊಟ್ಟ ಉತ್ತರವೇ ಸುಬ್ಬಣ್ಣ ನವರಿಂದ ಪುಟ್ಟಣ್ಣಯ್ಯನವರಿಗೆ ದೊರೆಯಿತು.

"Born with a silver spoon in the month" ಎಂಬ ಇಂಗ್ಲೀಷಿನಲ್ಲಿ ಲಕ್ಷ್ಮೀಪುತ್ರರ ಬಗ್ಗೆ ಹೇಳುವ ವಾಡಿಕೆ. ಸುಬ್ಬಣ್ಣನವರು ಜನಿಸಿದೊಡನೆಯೇ ಸುವರ್ಣಪರಾತದಲ್ಲಿ ಮಲಗಿದ್ದರು. ಸುವರ್ಣದ ಸರಪಳಿಗಳಿಂದ ತೂಗುಬಿಟ್ಟಿದ್ದ ಮನಮೋಹಕವಾದ ತೊಟ್ಟಿಲಿನಲ್ಲಿ ತಮ್ಮ ಬಾಲಲೀಲೆಗಳನ್ನಾಡಿದರು. ಜೀವನದ ಬಹು ಭಾಗವನ್ನು ಲಕ್ಷ್ಮೀ ದೇವಿಯ ಮಡಿಲಿನಲ್ಲೇ ಕಳೆದರು. ಕೋಟೆಯಲ್ಲಿದ್ದ ಅವರ ಮನೆಯನ್ನು ಒಡೆಯುವ ಕಾಲದಲ್ಲಿ ಅಗ್ರಹಾರದ ಮನೆಗೆ ಸಾಮಾನು ಸರಂಜಾಮುಗಳನ್ನು ಸಾಗಿಸುವಾಗ ಎಂಭತ್ತು ಜೋಡೆತ್ತಿನ ಗಾಡಿಗಳ ತುಂಬ ಧಾತ್ರಿ ಹವನದ ಅಡುಗೆಗಾಗಿ ಬಳಸುತ್ತಿದ್ದ ಹಿತ್ತಾಳೆಯ ಪಾತ್ರೆಗಳನ್ನೇ ಸಾಗಿಸಿದರು—ಅಂದರೆ, ಅವರ ಮನೆಯ ಐಶ್ವರ್ಯದ ಆಳದ ಅರಿವು ಅದರಿಂದ ಕೊಂಚಮಟ್ಟಿಗಾದರೂ ಪರಿಚಯವಾಗಬಹುದು!

ಸುಬ್ಬಣ್ಣ ಗಂಧರ್ವಾಂಶಸಂಭೂತರೆಂದರೆ ಖಂಡಿತ ಉತ್ಪ್ರೇಕ್ಷೆಯಾಗಲಾರದು. ರಸಿಕಶಿಖಾಮಣಿ, ಸದಾ ಹಸನ್ಮುಖಿ, ಮಿತ ಹಾಗೂ ಕ್ಲುಪ್ತಕಾಲದಲ್ಲಿ ಭೋಜನ; ಪಂಚಭಕ್ಷ್ಯಪರಮಾನ್ನಗಳ ಅಡುಗೆ ಪ್ರತಿದಿನ ಮನೆಯಲ್ಲಾಗುತ್ತಿದ್ದರೂ, ಅವೆಲ್ಲ ಅತಿಥಿಗಳಿಗೆ ಮಾತ್ರ. ಉಡುಗೆತೊಡಿಗೆಗಳಲ್ಲಿ ಬಹು ಅಚ್ಚುಕಟ್ಟು, ಗಂಧ ಹೂಗಳೆಂದರೆ ಪಂಚಪ್ರಾಣ. ಮಲ್ಲಿಗೆಯ ಹೂವಿನ ಹಾರದ ತುಂಡೊಂದು ಅಂಗಿಯ ಜೇಬಿನಲ್ಲಿ ಸರ್ವದಾ ಇರಬೇಕು. ಹಾರ ಕಟ್ಟುವುದಕ್ಕೆ ಮುಂಚಿತವಾಗಿ ನಾರನ್ನು ಪನ್ನೀರಿನಲ್ಲದ್ದಿ ಅನಂತರ ಅದಕ್ಕೆ ಪುನುಗನ್ನು ಸವರಿ ಅದರಿಂದ ಮಲ್ಲಿಗೆಯ ಮೊಗ್ಗನ್ನು ಕಟ್ಟಬೇಕು. ಅಗಸರವನು ತಂದ ಮಡಿಬಟ್ಟೆಗಳನ್ನು ಉಪಯೋಗಿಸುವ ಮುಂಚೆ ಬೋರಲು ಹಾಕಿದ ಬುಟ್ಟಿಯ ಮೇಲಿಟ್ಟು ಸಾಂಬ್ರಾಣಿ ಹೊಗೆಯನ್ನು ಹಾಕಬೇಕು. ಮನೆಯಿಂದ ಸುಬ್ಬಣ್ಣನವರು ಹೊರಟರೆ ಸುಗಂಧದ್ರವ್ಯಗಳ ದಿವ್ಯಪರಿಮಳವನ್ನು ಹೊತ್ತ ಮಾರುತನಿಂದ ಅವರ ಬರುವಿಕೆಯನ್ನು ಒಂದು ಫರ್ಲಾಂಗು ದೂರದಿಂದಲೇ ತಿಳಿಯಬಹುದಾಗಿತ್ತು. ಅಷ್ಟು ರಸಿಕರು ಸುಬ್ಬಣ್ಣ.

ಹಾಸ್ಯಪ್ರಿಯರೂ ಹೌದು. ಒಂದು ಬಾರಿ ಒಂದು ವಿನೋದ ನಡೆಯಿತು. ದಿವಾನ್ ಶೇಷಾದ್ರಿಅಯ್ಯರ್ ಅವರ ಮನೆಯಲ್ಲಿ ಮದುವೆಯ ಊಟ. ಶೇಷಣ್ಣ, ಸುಬ್ಬಣ್ಣ, ನಾನು ಎಲ್ಲರೂ ಭೋಜನಕ್ಕೆಹೋಗಿದ್ದೆವು.

ಊಟಕ್ಕೆ ಕುಳಿತುಕೊಳ್ಳುವ ಮುನ್ನ "ಇಲ್ಲಿ ಬನ್ನಿ ಆಚಾರ್ಯರೆ" ಅಂತ ಸುಬ್ಬಣ್ಣ ನನ್ನನ್ನು ಕರೆದರು. "ಏನು ವಿಷಯ?" ಅಂದೆ. "ನೀವು ಸುಮ್ಮನೆ ಬನ್ನಿ ನನ್ನ ಸಂಗಡ. ವಿಷಯ ಏನೂ ಅಂತ ತಾನೇ ಅರ್ಥ ವಾಗುತ್ತೆ. ಇಷ್ಟೇಕೆ ಆತುರ?" ಅಂದರು. ಮೂಕನಂತೆ ಅವರನ್ನು ಹಿಂಬಾ ಲಿಸಿದೆ. ನೆಟ್ಟಗೆ ಅಡಿಗೆಯ ಮನೆಗೆ ಕರೆದುಕೊಂಡು ಹೋದರು.

"ಭಟ್ಟರೆ!"

"ಏನು ಯಜಮಾನರೇ?"

"ನೋಡಿ, ನೀವು ಬಡಿಸುವಾಗ ಒಂದು ಕೆಲಸ ಮಾಡಬೇಕು. ಇಲ್ಲಿ ನೋಡಿ (ನನ್ನ ಕಡೆ ತೋರಿಸಿ) ಇವರಿಗೂ ನನಗೂ ನಡುವೆ ನಮ್ಮ ಸ್ನೇಹಿತರೊಬ್ಬರು ಊಟಕ್ಕೆ ಕುಳಿತಿದ್ದಾರೆ, ಅವರಿಗೆ ಮೈಯಲ್ಲಿ ಸ್ವಸ್ಥವಿಲ್ಲ. ಆದರೆ ವಯೋಧರ್ಮ, ಬಹಳ ಚಪಲ. ಅನ್ನ ಸಾರು ಎರಡು ಹೊರತು ಬೇರೆ ಯಾವುದನ್ನೂ ಅವರ ಎಲೆಗೆ ಬಡಿಸಬೇಡಿ"

"ಹಾಗೆಯೇ ಆಗಲಿ ರಾಯರೆ" ಅಂದರು ಭಟ್ಟರು.

ಕಷ್ಟಪಟ್ಟು ನಗುವನ್ನು ತಡೆದುಕೊಂಡೆ. ಶೇಷಣ್ಣನವರ ಅಕ್ಕಪಕ್ಕ ಗಳಲ್ಲಿ ಅವರ ಯೋಗಕ್ಷೇಮದ ಜವಾಬ್ದಾರಿಯನ್ನು ವಹಿಸಿದ್ದ ಸುಬ್ಬಣ್ಣ ನವರೂ ನಾನೂ ಕುಳಿತೆವು. ಭಟ್ಟರು ಪರಿಚಾರಕರಿಗೆ ವಿಷಯ ತಿಳಿಸಿ ದ್ದರು. ಅದೇ ರೀತಿ, ವಿವಿಧ ಭಕ್ಷ್ಯಭೋಜ್ಯಗಳನ್ನು ನನ್ನೆಲೆಗೆ ಬಡಿಸಿ, ಮಧ್ಯದೆಲೆಯನ್ನು ಬಿಟ್ಟು, ಸುಬ್ಬಣ್ಣನವರ ಎಲೆಗೆ ಬಡಿಸುತ್ತಿದ್ದರು. ಶೇಷಣ್ಣನವರಿಗೆ ಇದರ ಕಾರಣ ತಿಳಿಯಲಿಲ್ಲ. ಪದಾರ್ಥಗಳ ವಾಸನೆ ಮೂಗಿಗಡರುತ್ತಿದೆ, ಬಾಯಲ್ಲಿ ನೀರೂರುತ್ತಿದೆ; ಆದರೆ ಬಾಯಿಬಿಟ್ಟು ಕೇಳಲು ಬಿಂಕ. ಕೊನೆಗೆ, ತಡೆಯಲಾರದೇ ಬಡಿಸುವವರನ್ನು ಕೇಳಲೆತ್ನಿ ಸಿದರು. ಆದರೆ, ಬಿಕ್ಕಲು, ಪಾಪ! ಇವರು ಪ್ರಶ್ನೆ ಕೇಳುವಷ್ಟರಲ್ಲಿ ಬಡಿಸು ವವನು ನಾಲ್ಕು ಎಲೆ ದಾಟಿ ಮುಂದಿರುತ್ತಿದ್ದ. ಏನೂ ತಿಳಿಯದವರಂತೆ ಸುಬ್ಬಣ್ಣನವರು ತಿಂದು ತೇಗುತ್ತಿದ್ದರು. ಅಯ್ಯೋ ಪಾಪ ಅಂತ ನನಗೆ ಅನ್ನಿಸಿದರೂ ಸುಬ್ಬಣ್ಣನವರ ಅಪ್ಪಣೆಯ ಮೇರೆಗೆ ಸುಮ್ಮನಿರಬೇಕಾ ಯಿತು. ಊಟ ಮುಗಿಯುವ ವೇಳೆಗೆ ದಿವಾನರವರು ಎಲ್ಲರ ಪಂಕ್ತಿಗೂ ಬಂದು ಉಪಚಾರದ ಮಾತುಗಳನ್ನಾಡುತ್ತಿದ್ದರು. ಶೇಷಣ್ಣನವರ ಎಲೆ ಖಾಲಿ ಇದ್ದುದನ್ನು ನೋಡಿ ಆಶ್ಚರ್ಯವಾಯಿತು ಅವರಿಗೆ. ಹಿಂದೆಯೇ

ಬರುತ್ತಿದ್ದ ಭಟ್ಟರು ಸುಬ್ಬಣ್ಣನವರು ಹೇಳಿದ್ದ ಸಮಾಚಾರವನ್ನು ತಿಳಿಯ ಪಡಿಸಿದರು. "ಏನು ಶೇಷಣ್ಣನವರೇ! ಪಾಪ, ಮೈಯಲ್ಲಿ ಸ್ವಸ್ಥವಿಲ್ಲ ವಂತೆ! ಎಷ್ಟು ದಿನದಿಂದ, ಏನಾಗಿದೆ?'' ಅಂತ ಪ್ರಶ್ನಿಸಿದರು, ದಿವಾನರು. ಶೇಷಣ್ಣ ಕೋಪದ ಕಿಡಿಗಳನ್ನು ಕಾರುತ್ತ, ಒಂದು ಬಾರಿ ನನ್ನ ಕಡೆಗೂ, ಇನ್ನೊಂದು ಬಾರಿ ಸುಬ್ಬಣ್ಣನವರ ಕಡೆಗೂ ನೋಡಿದರು. ಸುಬ್ಬಣ್ಣನವರ ನಗೆಗಡಲು ತಡೆಯಿಲ್ಲದೆಯೇ ಹೊರಹೊಮ್ಮಿತು. ಶೇಷಣ್ಣನವರ ಊಟ ಮೊದಲಿನಿಂದ ಪ್ರಾರಂಭವಾಯಿತು!

ಸುಬ್ಬಣ್ಣನವರ ಕೊಡುಗೈ ಲೋಕಪ್ರಸಿದ್ಧವಾದದ್ದು. ಅವರ ಕೊನೆಯ ದಿನಗಳನ್ನು ಬಿಟ್ಟರೆ, ಅರಮನೆಯ ಸಂಬಳವನ್ನು ಅವರು ಕಂಡ ದಿನವೇ ಇಲ್ಲವೆನ್ನಬಹುದು. ಅವರ ಉದಾರ ಹೃದಯವನ್ನು ತಿಳಿದಿದ್ದ ಜನ ತಿಂಗಳು ಕೊನೆಯಲ್ಲೇ ಸುಬ್ಬಣ್ಣನವರನ್ನು ಭೇಟಿಮಾಡಿ ತಮ್ಮ ಕಷ್ಟಕಾರ್ಪಣ್ಯಗಳ ಕಥೆಯನ್ನರುಹುತ್ತಿದ್ದರು. ಸರಿ, ದರ್ಬಾರು ಭಕ್ಷಿ ಯವರ ಕಛೇರಿಗೆ ಪತ್ರ ಬರೆದು ಸಂಬಳವನ್ನು ತರುವವರಿಗೆ ಕೊಡುವುದು ಎಂದು ಸುಬ್ಬಣ್ಣ ತಿಳಿಸಿಬಿಡುತ್ತಿದ್ದರು. ಹೀಗಾಗಿ ಅವರ ಸಂಬಳವೆಲ್ಲ ಅವರಿವರ ಪಾಲಾಗುತ್ತಿತ್ತು,

ಸುಬ್ಬಣ್ಣನವರು ದೇಶಾಟನೆಗೆ ಹೊರಡುತ್ತಿದ್ದುದೇ ಒಂದು ವೈಖರಿ. ಪಂಡಿತರೂ ವಿದ್ವಾಂಸರೂ ದೇಶಾಟನೆಮಾಡಿ, ರಾಜಮಹಾರಾಜರುಗಳ ಆಸ್ಥಾನಗಳಲ್ಲೂ ಮಠಾಧಿಪತಿಗಳ ಸನ್ಮುಖದಲ್ಲೂ ವಿದ್ವತ್ಪ್ರದರ್ಶನ ಮಾಡಿ, ರಾಜಬಹುಮಾನ, ಗುರುಸನ್ಮಾನಗಳನ್ನು ಪಡೆದು ಬರುವುದು ಲೋಕವಿದಿತವಾದ ವಾಡಿಕೆ. ಆದರೆ, ಸುಬ್ಬಣ್ಣೋರು ಹೊರಟರೆ ಸ್ವಯಂ ದೊರೆಗಳೇ ಹೊರಟಷ್ಟು ಸಂಭ್ರಮ, ಸಡಗರ. ಸಂಗಡ ಒಂದು ಪರಿವಾರವೇ ಹೊರಡುತ್ತಿತ್ತು. ರಾಜರ ಆಸ್ಥಾನಗಳಿಗೆ ಹೋಗುವಾಗ ಇವರೇ ಇಪ್ಪತ್ತು ಮೂವತ್ತು ಜನರ ಕೈಲಿ ಅಮೂಲ್ಯವಾದ ಖಿಲ್ಲತ್ತುಗಳನ್ನು ತೆಗೆಸಿಕೊಂಡು ಹೋಗಿ ಮುಜುರೆ ಮಾಡುತ್ತಿದ್ದರು. ಕಛೇರಿಗೆ ಬರುವ ವಿದ್ವಾಂಸನೇ ಇಷ್ಟಮೂಲ್ಯವಾದ ರಾಜಕಾಣಿಕೆಯನ್ನು ಒಪ್ಪಿಸಿದರೆ, ರಾಜರು ಕೊಡುವ ಸಂಭಾವನೆ ಹೇಗಿರಬೇಕು? ಸುಬ್ಬಣ್ಣ ತಮ್ಮ ದೇಶಸಂಚಾರ ಮುಗಿಸಿ ಕೊಂಡು ರಾಜಧಾನಿಗೆ ಹಿಂತಿರುಗುವ ವೇಳೆಗೆ ಲಕ್ಷಾಂತರ ರೂಪಾಯಿ ಯನ್ನು ವೆಚ್ಚಮಾಡಿರುತ್ತಿದ್ದರು. ಅತ್ಯಮೂಲ್ಯವಾದ ಪಾರಿತೋಷಕ ಗಳನ್ನೂ ಸಂಪಾದಿಸಿರುತ್ತಿದ್ದರು.

ಉರಿಬೇಸಿಗೆಯ ಬಿಸಿಲಿನಲ್ಲಿ ಬೆಂದವನಿಗೆ ಮಾತ್ರವೇ ತಂಪು ನೆರಳಿನ ಸುಖಾನುಭವವಾಗಲು ಸಾಧ್ಯ ಅನ್ನುವಹಾಗೆ ಜೀವನದ ಮೊದಲಲ್ಲೇ ಕಷ್ಟಕಾರ್ಪಣ್ಯಗಳ ಕಹಿಬಿಸಿಗಳ ಅನುಭವವಾಗಿದ್ದು ಅಂತ್ಯದಲ್ಲಿ ಸುಖ ಶಾಂತಿಗಳು ಪ್ರಾಪ್ತವಾಗುವುದೇ ಒಳಿತು. ಹಾದಿಯ ಉದ್ದಕ್ಕೂ ಮೃದುವಾದ ಗುಲಾಬಿ ರೇಖುಗಳ ಮೇಲೆ ನಡೆದು ಹಟಾತ್ತಾಗಿ ಮುಳ್ಳುಹಾದಿಯಲ್ಲಿ ನಡೆಯಬೇಕಾಗುವಂಥ ಬಾಳು ಅತಿ ಕಷ್ಟದ ಬಾಳು. ಗತವೈಭವವನ್ನು ಸಂಪೂರ್ಣವಾಗಿ ಮರೆತು, ಒದಗಿ ಬಂದ ಸಮಯಸನ್ನಿವೇಶಗಳನ್ನನುಸರಿಸಿ, ಬೆಳಕಿನಲ್ಲಿ ನಡೆದಂತೆಯೇ ಎದೆಗುಂದದೆ ಕತ್ತಲಲ್ಲೂ ನುಗ್ಗುವ ಧೈರ್ಯಸ್ಥೈರ್ಯಗಳು ಎಲ್ಲರ ಪಾಲಿಗೂ ಬಂದುವಲ್ಲ. ಸುಬ್ಬಣ್ಣನವರು ಲಕ್ಷಾಂತರ ರೂಪಾಯಿಗಳ ವಹಿವಾಟು ನಡೆಸುತ್ತಿದ್ದಾಗ ಎಷ್ಟು ಶಾಂತರಾಗಿ, ಹಸನ್ಮುಖಿಗಳಾಗಿ, ಉದಾರ ಬುದ್ಧಿಯುಳ್ಳವರಾಗಿದ್ದರೋ, ಆಸ್ತಿಪಾಸ್ತಿಗಳೆಲ್ಲ ಮಾಯವಾಗಿ ಜೀವನಪಥ ತೊಡಕಾದಾಗಲು ಕೂಡ ಅಷ್ಟೇ ಪ್ರಶಾಂತರಾಗಿ, ಅಷ್ಟೇ ವಿಶಾಲಹೃದಯದವರಾಗಿದ್ದರು. ನಾನು ಹೇಳುವ ಈ ಪ್ರಸಂಗ ನಡೆಯುವ ವೇಳೆಗಾಗಲೇ ಸುಬ್ಬಣ್ಣನವರ ಖಜಾನೆ ಬರಿದಾಗುತ್ತ ಬಂದಿತ್ತು. ಅವರ ಆಶ್ರಿತರೊಬ್ಬರು ಮಗನ ಮದುವೆಗೆಂದು ಸಹಾಯ ಬೇಡಿದ್ದರು; ಆಗಲೆಂದು ಸುಬ್ಬಣ್ಣ ಭರವಸೆ ನೀಡಿದ್ದರು. ಲಗ್ನ ಸಮೀಪಿಸುತ್ತ ಬಂದಿತು. ಸುಬ್ಬಣ್ಣನವರ ಹತ್ತಿರ ಹಣವಿರಲಿಲ್ಲ. ಸಹಾಯ ಕೋರಿದ್ದ ವ್ಯಕ್ತಿಯ ಮುಖ ಬಾಡಿತು. "ಭಯಪಡಬೇಡಿ" ಅಂದರು ಸುಬ್ಬಣ್ಣ. ಹೆಂಡತಿಯನ್ನು ಬರಹೇಳಿ ಸೊಂಟದಲ್ಲಿದ್ದ ಭಂಗಾರದ ಡಾಬನ್ನು ತೆಗೆದುಕೊಡು ಅಂದರು. ನಾಮಗಿರಿಯಮ್ಮ ಮರುಮಾತಾಡದೆ ತೆಗೆದುಕೊಟ್ಟರು. ಯಾಚಕ ವ್ಯಕ್ತಿಯ ಕೈಯ್ಯಲ್ಲಿ ಆ ಡಾಬನ್ನಿಟ್ಟು ಒಂದೇ ಮನಸ್ಸಿನಿಂದ "ಕೃಷ್ಣಾರ್ಪಣ" ಎಂದರು ಸುಬ್ಬಣ್ಣ.

ಸುಬ್ಬಣ್ಣ ಆಗರ್ಭಶ್ರೀಮಂತರಾಗಿದ್ದ ಕಾರಣ ಶೇಷಣ್ಣನವರಂತೆ ಕಛೇರಿಗಳನ್ನು ಮಾಡಿ ದ್ರವ್ಯಾರ್ಜನೆಮಾಡುವ ಆವಶ್ಯಕತೆಯಿರಲಿಲ್ಲ. ತಮಗೆ ತೋರಿದಾಗ, ತೋಚಿಬಂದದ್ದನ್ನು ಹಾಡಿಯೋ ನುಡಿಸಿಯೋ ತಮ್ಮಷ್ಟಕ್ಕೆ ತಾವೇ ಆನಂದಿಸುತ್ತಿದ್ದರು. ಹೀಗಾಗಿ ಅವರ ಪಾಂಡಿತ್ಯದ ಪರಿಚಯ ಜನಸಾಮಾನ್ಯಕ್ಕುಂಟಾಗಲು ಅಧಿಕ ಅವಕಾಶಗಳಿರಲಿಲ್ಲ.

ಅವರದು ಗಂಧರ್ವ ಶಾರೀರ. ವೀಣೆಯ ಮಿದುವಾದ ನಾದದಲ್ಲಿ ಶಾರೀರದ ಸೊಂಪು, ಮಾಧುರ್ಯ ಐಕ್ಯಗೊಂಡು ಶ್ರೋತೃಗಳನ್ನು ಮುಗ್ಧಗೊಳಿಸುತ್ತಿತ್ತು. ಸದಾಶಿವರಾಯರಲ್ಲಿ ಹಾಡುಗಾರಿಕೆಯ ಶಿಕ್ಷಣ. ತಂದೆಯವರಲ್ಲಿ ವೀಣೆಯ ಪಾಠ. ಶೇಷಣ್ಣನವರೂ ಹಾಡುಗಾರಿಕೆಯನ್ನು ಅಭ್ಯಾಸ ಮಾಡಿದ್ದರು. ಆದರೆ, ಅವರ ಶಾರೀರದಲ್ಲಿ ಮಾಧುರ್ಯವಿರಲಿಲ್ಲ. ಜೊತೆಗೆ ಬಿಕ್ಕಲು ಬೇರೆ ಇದ್ದುದರಿಂದ ಹಾಡಲು ತೊಡಕಾಗುತ್ತಿತ್ತು. ಆದದ್ದರಿಂದಲೇ ಅವರ ದೃಷ್ಟಿಯೆಲ್ಲ ವೀಣೆಯಲ್ಲಿ ಕೇಂದ್ರೀಕೃತವಾಯಿತು. ಸುಬ್ಬಣ್ಣನವರ ಶಾರೀರ ಎಲ್ಲಿಯವರೆಗೆ ಬೇಕಾದರೂ ಹೆಚ್ಚುತ್ತಿತ್ತು, ಎಷ್ಟು ಬೇಕಾದರೂ ನುಡಿಯುತ್ತಿತ್ತು. ಈ ಶಾರೀರ ಸೌಕರ್ಯ ಸುಬ್ಬಣ್ಣನವರ ಮನಸ್ಸನ್ನು ಹಾಡುಗಾರಿಕೆಯ ಕಡೆ ಸೆಳೆಯಿತು. ಶೇಷಣ್ಣ ಸುಬ್ಬಣ್ಣನವರ ದ್ವಂದ್ವ ವೀಣೆ, ಜೊತೆಯಲ್ಲಿ ಸುಬ್ಬಣ್ಣನವರ ಹಾಡುಗಾರಿಕೆ—ಈ ಗಾನಾಮೃತದ ಸವಿ ಅನುಭವವೇದ್ಯವೇ ಹೊರತು ವರ್ಣಿಸಲಸದಳ.

ಆಗತಾನೇ ಮೋಹನರಾಗದಲ್ಲಿ ನನ್ನ 'ರಾರಾ ರಾಜೀವಲೋಚನ' ಎಂಬ ಕೀರ್ತನೆ ರೂಪಗೊಂಡಿತ್ತು. ಅಂದು ಸಂಜೆ, ಸುಬ್ಬಣ್ಣ ನಮ್ಮ ಮನೆಗೆ ಆಕಸ್ಮಾತ್ ಬಂದಿದ್ದರು. ಅನ್ನದಾತರಾದ ಸುಬ್ಬಣ್ಣನವರಲ್ಲಿ ಆ ಕೀರ್ತನೆಯನ್ನು ಸಮರ್ಪಿಸಿ ಕೃತಾರ್ಥನಾಗಬೇಕೆಂದು ಅಭಿಲಾಷೆಯಾಯಿತು. ಸುಬ್ಬಣ್ಣನವರು ಕೀರ್ತನೆಯನ್ನು ಕೇಳಿ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. "ಎಲ್ಲವೂ ತಮ್ಮ ಅನ್ನಪ್ರಭಾವ" ಎಂದೆ. 'ಆಚಾರ್ಯರೆ! ಈ ಕೀರ್ತನೆಯನ್ನು ಕೇಳುವ ವೇಳೆಗೆ ನನ್ನ ಕೈ ಬರಿದಾಗಿರುವುದು ನನ್ನ ದೌರ್ಭಾಗ್ಯ. ಚಿಂತೆಯಿಲ್ಲ, ಹಾಗಾದದ್ದೂ ಒಂದು ವಿಧದಲ್ಲಿ ಒಳಿತೇ ಆಯಿತೆನ್ನಬೇಕು. ಸುಂದರ ಕಲಾಕುಸುಮವೊಂದು ವಿಕಾಸವಾಗಬೇಕಾದರೆ, ಅದು ಪ್ರಫುಲ್ಲವಾಗಬೇಕಾದರೆ, ಕಲಾವಿದನ ಹಸಿವಿನ ಕೂಗು ಮಂಕಾಗಬಾರದು' ಎಂದರು.

ಇದೇ ನನ್ನ ಅವರ ಕಡೆಯ ಸಂಭಾಷಣೆಯಾಯಿತು. ಇದಾದ ಕೆಲವೇ ದಿನಗಳಲ್ಲಿ ಅವರ ಇಹಲೋಕವ್ಯಾಪಾರ ಕೊನೆಗೊಂಡಿತು.

---

# ಬಿಡಾರಂ ಕೃಷ್ಣಪ್ಪನವರು

1926-31 ಈ ಪಾಂಚವಾರ್ಷಿಕ ಅವಧಿಯಲ್ಲಿ ಕರ್ಣಾಟಕ ಕಲಾಕ್ಷೇತ್ರಕ್ಕೇ ಒಂದು ಗ್ರಹಣ ಬಡಿದಿತ್ತು. ವೈಣಿಕ ಶಿಖಾಮಣಿಗಳಾಗಿ ಮೆರೆದಿದ್ದ ಶೇಷಣ್ಣನವರೂ ನಟಸಾರ್ವಭೌಮರೆಂದು ವಿಖ್ಯಾತರಾಗಿದ್ದ ಹುಟ್ಟುಕಲಾವಿದ ವರದಾಚಾರ್ಯರೂ ಕಣ್ಮರೆಯಾದದ್ದು ಈ ಸಮಯದಲ್ಲೇ. ಕರ್ಣಾಟಕ ಕಲಾದೇವಿಯ ದೇಗುಲದ ಈ ಎರಡು ಸುವರ್ಣ ಕಲಶಗಳು ಕಳಚಿಬಿದ್ದ ತರುಣದಲ್ಲೇ ಮೂರನೆಯದಕ್ಕೂ ವಿಧಿಯ ಬರಸಿಡಿಲು ಎರಗಿ ಗಾನವಿಶಾರದ ಬಿಡಾರಂ ಕೃಷ್ಣಪ್ಪನವರನ್ನೂ ಕಳೆದುಕೊಳ್ಳುವ ದೌರ್ಭಾಗ್ಯ ನಮಗೊದಗಿ ಬಂತು.

ಕೃಷ್ಣಪ್ಪನವರು ಕೊಂಕಣ ದೇಶಸ್ಥ ಬ್ರಾಹ್ಮಣರು. ಅವರ ಹಿರಿಯರ ಸ್ಥಳ ಉಡುಪಿಯ ಬಳಿ ನಂದಳಿಕೆ ಗ್ರಾಮವೆಂಬುದು. ತಂದೆಯವರ ನಾಮಧೇಯ ವಿಶ್ವನಾಥಯ್ಯನವರೆಂದು. ಧರ್ಮಸ್ಥಳದ ದಶಾವತಾರದ ಮಂಡಲಿಯೊಂದರಲ್ಲಿ ವಿಶ್ವನಾಥಯ್ಯನವರು ಸ್ತ್ರೀ ಪಾತ್ರಗಳನ್ನು ವಹಿಸುತ್ತಿದ್ದರು. ಸೀತಾದೇವಿಯ ಪಾತ್ರಕ್ಕೆ ವಿಶ್ವನಾಥಯ್ಯನವರದು ಎತ್ತಿದ ಕೈ. ಒಮ್ಮೆ ಮುಮ್ಮಡಿ ಕೃಷ್ಣರಾಜ ಒಡೆಯರು ಸುಬ್ರಹ್ಮಣ್ಯ ಯಾತ್ರೆಯನ್ನು ಮುಗಿಸಿಕೊಂಡು ಧರ್ಮಸ್ಥಳಕ್ಕೆ ಭೇಟಿಯಿತ್ತಿದ್ದರು. ಪ್ರಭುಗಳ ಆಗಮನದ ಗೌರವಾರ್ಥವಾಗಿ ಹೆಗ್ಗಡೆಯವರು ದಶಾವತಾರದ ಆಟಗಳನ್ನು ಏರ್ಪಡಿಸಿದ್ದರು. ಅಭಿನಯದಿಂದ ದೊರೆಗಳಿಗೆ ಬಲು ಆನಂದವಾಯಿತು. ವಿಶ್ವನಾಥಯ್ಯನವರ ಪಾತ್ರಕುಶಲತೆ ಬಲು ಮೆಚ್ಚುಗೆಯಾಯಿತು. ಮೈಸೂರಿಗೆ ಹಿಂತಿರುಗಿದ ಮೇಲೆ ಮಂಡಲಿಯ ಮುಖಂಡರಾಗಿದ್ದ ಶೇಷಪ್ಪನವರಿಗೆ ಪತ್ರಬರೆಯಿಸಿ ದಶಾವತಾರ ಮಂಡಲಿಯನ್ನು ಮೈಸೂರಿಗೆ ಕರೆತರಬೇಕೆಂದು ಆಹ್ವಾನಿಸಿದರು. ಮಂಡಲಿಯ ಜೊತೆಯಲ್ಲಿ ಆಗ ಮೈಸೂರಿಗೆ ಬಂದ ವಿಶ್ವನಾಥಯ್ಯ ಇಲ್ಲೇ ನಿಂತರು. ಪರಸ್ಥಳದಿಂದ ಬಂದು ಇಲ್ಲಿ ಬಿಡಾರ ಮಾಡಿದ ಮಂಡಲಿಯ ನಟರೆಲ್ಲರಿಗೂ "ಬಿಡಾರದವರು" ಎಂಬ ಅಡ್ಡ ಹೆಸರು ಬಂದಿತು.

ಈ ವೇಳೆಗಾಗಲೇ ವಿಶ್ವನಾಥಯ್ಯನವರಿಗೆ ಇಳಿ ವಯಸ್ಸು. ಅಭಿನಯ ಮಾಡಲು ಶಕ್ತಿಕುಂದಿತ್ತು. ಸಂಸಾರ ನಿರ್ವಹಣೆ ಕಷ್ಟಸಾಧ್ಯವಾಯಿತು



ಗಾನವಿಶಾರದ ಬಿಡಾರಂ ಕೃಷ್ಣಪ್ಪನವರು

ಆಗಿದ್ದ ನಾಲ್ಕಾರು ಮಕ್ಕಳು ಕಾಲವಾಗಿ ಸುಬ್ಬರಾಯರು ಕೃಷ್ಣಪ್ಪನವರೆಂಬ ಇಬ್ಬರು ಮಕ್ಕಳು ಮಾತ್ರ ಉಳಿದಿದ್ದರು. ತಂದೆಯವರ ಪರಿಸ್ಥಿತಿಯನ್ನು ಮನಗಂಡು ಅಣ್ಣತಮ್ಮಂದಿರು ಸಂಪಾದನೆಯ ಮಾರ್ಗವನ್ನು ಹುಡುಕತೊಡಗಿದರು. ಅಣ್ಣ ಸುಬ್ಬರಾಯರಿಗೆ ಭವ್ಯವಾದ ಶಾರೀರ ಸಂಪತ್ತಿನ ಸೌಲಭ್ಯವಿತ್ತು. ತಂಬೂರಿಯನ್ನು ಬಗಲಿಗೆ ಹಾಕಿಕೊಂಡು ಭಿಕ್ಷಾಟನೆ ಮಾಡುತ್ತ ಬೀದಿ ಬೀದಿಯಲ್ಲಿ ಸಂಚರಿಸಲಾರಂಭಿಸಿದರು. ಕೃಷ್ಣಪ್ಪನವರೂ ಅಣ್ಣನನ್ನು ಹಿಂಬಾಲಿಸಿದರು. ಅಣ್ಣತಮ್ಮಂದಿರು ತಮ್ಮ ದೈವದತ್ತವಾದ ಶಾರೀರದಲ್ಲಿ ದೇವರನಾಮಗಳನ್ನು ಭಕ್ತಿಪರವಶರಾಗಿ ಬೀದಿಯಲ್ಲಿ ಹಾಡುತ್ತ ಹೊರಟಾಗ ಇವರ ಹಿಂದೆ ಶ್ರೋತೃಗಳ ತಂಡವೇ ಸೇರುತ್ತಿತ್ತು. ತಮ್ಮ ಮನೆಗಳಿಗೆ ಬರಮಾಡಿಕೊಂಡು ಜನ ಯಥೋಚಿತ ಸಂಭಾವನೆ ಮಾಡುತ್ತಿದ್ದರು.

ಸುಬ್ಬರಾಯದಾಸರು ಪ್ರತಿ ಶುಕ್ರವಾರ ತಮ್ಮ ಮನೆಯಲ್ಲಿ ಭಜನೆಯನ್ನೇರ್ಪಡಿಸುತ್ತಿದ್ದರು. ಊರಿನ ಸುಪ್ರಸಿದ್ಧ ಸಂಗೀತಗಾರರೆಲ್ಲ ದಾಸರ ಮನೆಗೆ ಬಂದು ಭಜನೆಮಾಡಿ, ಗಾನಮಾಡಿ, ದೇವರಿಗೆ ಸೇವೆ ಸಲ್ಲಿಸುತ್ತಿದ್ದರು. ಕರೂರು ರಾಮಸ್ವಾಮಿ ಎಂಬುವರು ಆಗಿನ ವಿದ್ವಾಂಸರುಗಳಲ್ಲಿ ಹೆಸರುವಾಸಿಯಾಗಿದ್ದರು. ಒಂದು ಶುಕ್ರವಾರ ದಾಸರ ಮನೆಯಲ್ಲಿ ರಾಮಸ್ವಾಮಿಯವರ ಕಛೇರಿ. ಕಛೇರಿ ಅಮೋಘವಾಗಿ ನಡೆಯಿತು. ಕೃಷ್ಣಪ್ಪನವರ ತಾಯಿ ಸರಸ್ವತೀಬಾಯಿಯವರಿಗೆ ಹೇಗಾದರೂ ಮಾಡಿ ಕಿರಿಯ ಮಗನಿಗೆ ರಾಮಸ್ವಾಮಿಯವರಿಂದ ಶಿಕ್ಷಣ ಕೊಡಿಸಬೇಕೆಂಬ ಅಭಿಲಾಷೆಯಾಯಿತು. ಸಭೆ ಚದುರಿದ ಮೇಲೆ ಸರಸ್ವತೀ ಬಾಯಿಯವರು ತಮ್ಮ ವಿಜ್ಞಾಪನೆಯನ್ನು ರಾಮಸ್ವಾಮಿಯವರ ಮುಂದಿಟ್ಟು "ತಮ್ಮ ಆಕ್ಷೇಪಣೆಯೇನೂ ಇಲ್ಲದಿದ್ದರೆ ನಮ್ಮಲ್ಲೇ ಭೋಜನ ಮಾಡಿಕೊಂಡಿದ್ದು, ನನ್ನ ಮಗನಿಗೆ ತಮ್ಮ ಗಾನವಿದ್ಯೆಯನ್ನು ದಾನಮಾಡಿ ಅವನ ಬಾಳನ್ನು ಬೆಳಗಬೇಕು" ಎಂದು ಬೇಡಿಕೊಂಡರು. ರಾಮಸ್ವಾಮಿಯವರಿಗೆ ಎಪ್ಪತ್ತು ವರ್ಷ ಮೀರಿತ್ತು. ವೃದ್ಧಾಪ್ಯದಲ್ಲಿ ಸೇವೆಮಾಡಲು ಮಡದಿ ಮಕ್ಕಳಾರೂ ಇರಲಿಲ್ಲ. "ಆಗಲಿ, ನೋಡೋಣ, ದೇವರಿದ್ದಾನೆ" ಎಂದು ಹೇಳಿ ಸುಮ್ಮನಾಗಿದ್ದರು ರಾಮಸ್ವಾಮಿಯವರು.

ಒಂದು ದಿನ ಕೃಷ್ಣಪ್ಪನವರು ಕಾರಣಾಂತರದಿಂದ ಅಣ್ಣನೊಡನೆ ಭಿಕ್ಷಾಟನೆಗೆ ಹೋಗಲಾಗಲಿಲ್ಲ. ಸುಬ್ಬರಾಯರು ಇನ್ನೂ ಮನೆಗೆ ಹಿಂತಿ

ರುಗಿರಲಿಲ್ಲ. ಹಸಿವಿನ ಬಾಧೆಯಿಂದ ಅತಿಯಾಗಿ ಬಳಲಿದ್ದ ಕೃಷ್ಣಪ್ಪನವರು ತಿನ್ನಲು ಏನಾದರೂ ಕೊಡಿರೆಂದು ತಾಯಿಯನ್ನು ಕೇಳಿದರಂತೆ. ಏನು ಹೇಳಿಯಾರು ಆಕೆ? ಹಿರಿಯ ಮಗ ಮನೆಗೆ ಬರುವವರೆಗೂ ಒಲೆ ಹಚ್ಚುವ ಪ್ರಮೇಯವೇ ಇರಲಿಲ್ಲ. ಹಸಿವಿನ ವೇಳೆಯಲ್ಲಿ ಕೊಡಲು ಕೈ ಬರಿದಾಗಿಮಾಡಿದ್ದ ದಾರಿದ್ರ್ಯದ ಬೇಗೆಯನ್ನು ಆಕೆ ದುಃಖಾಶ್ರುಬಿಂದುಗಳಿಂದ ಮಗನಿಗೆ ಸೂಚಿಸಿದರು. ಏನು ಮಾಡಲೂ ತೋಚದೆ ಕೃಷ್ಣಪ್ಪನವರು ಕೋಟೆ ಆಂಜನೇಯನ ದೇವಸ್ಥಾನದ ಬಳಿಗೆ ಬಂದು ದೇವಸ್ಥಾನದ ಮುಂಭಾಗದಲ್ಲಿ ಕುಳಿತು ದೇವರನಾಮಗಳನ್ನು ಹಾಡಲು ಪ್ರಾರಂಭಿಸಿದರು. ಆ ಮಟಮಟ ಮಧ್ಯಾಹ್ನದಲ್ಲಿ ಯಾವ ಭಕ್ತರು ಸುಳಿಯಬೇಕು ದೇವಸ್ಥಾನದ ಬಳಿ? ಹಸಿವು ಬಾಯಾರಿಕೆಗಳಿಂದ ಬಳಲಿ ಬೆಂಡಾದ ಕೃಷ್ಣಪ್ಪ ಅಲ್ಲಿಯೇ ಮಲಗಿದರು. ಆ ಸಮಯಕ್ಕೆ ಸರಿಯಾಗಿ ಡಾಕ್ಟರ್ ನಂಜುಂಡ ರಾವ್ ಎಂಬುವರು ಅಲ್ಲಿಗೆ ಬಂದು ಕೃಷ್ಣಪ್ಪನವರನ್ನು ಬೆನ್ನು ತಟ್ಟಿ ಎಬ್ಬಿಸಿ, ನಡೆದ ಸಂಗತಿಯೆಲ್ಲವನ್ನೂ ಹುಡುಗನ ಬಾಯಿಯಿಂದಲೇ ಕೇಳಿ, ಕನಿಕರಗೊಂಡು, ಒಂದು ರೂಪಾಯಿಯನ್ನು ಕೊಟ್ಟು ಮನೆಗೆ ಕಳುಹಿಸಿದರು. ಅಂದಿನಿಂದ ಪ್ರತಿದಿನವೂ ಕೃಷ್ಣಪ್ಪನವರು ಆಂಜನೇಯನ ದೇವಸ್ಥಾನದ ಬಳಿ ಕುಳಿತು ದೇವರನಾಮಗಳನ್ನು ಹಾಡಿ ಸಂಪಾದನೆಮಾಡುವ ಪದ್ಧತಿಯಾಯಿತು.

ಹೀಗಿರುವಲ್ಲಿ, ಒಂದು ದಿನ ದೇವರ ದರ್ಶನಕ್ಕಾಗಿ ಬಂದಿದ್ದ ಸಾಹುಕಾರ್ ತಿಮ್ಮಯ್ಯನವರ ಕೃಪಾದೃಷ್ಟಿ ಕೃಷ್ಣಪ್ಪನವರ ಮೇಲೆ ಬಿತ್ತು, ಯುವಕನ ತೇಜಸ್ಸು, ಭವ್ಯಾಕೃತಿ, ಶಾರೀರದ ಗಾಂಭೀರ್ಯ ಮತ್ತು ಮಾಧುರ್ಯಗಳನ್ನು ಮನಗಂಡ ತಿಮ್ಮಯ್ಯನವರು ಕೃಷ್ಣಪ್ಪನವರ ಭವಿಷ್ಯದ ಹೊಂಗನಸನ್ನು ಕಂಡುಕೊಂಡರು. "ಬಂಗಾರವಿದೆ, ಪುಟಕ್ಕೆ ಹಾಕಬೇಕು, ಅಷ್ಟೆ" ಅಂತಂದುಕೊಂಡರು ತಿಮ್ಮಯ್ಯನವರು.

"ಅಪ್ಪ ಮಗು! ನಿನ್ನ ಹೆಸರೇನು?"

"ಕೃಷ್ಣಪ್ಪ"

"ಸಂಗೀತಾಭ್ಯಾಸಮಾಡಲು ಇಷ್ಟವಿದೆಯೋ ನಿನಗೆ?"

"ಕುಡಿಯುವುದಕ್ಕೆ ಗಂಜಿಯೂ ಇಲ್ಲದ ಈ ಬಡವನೆಲ್ಲಿ? ಆ ಗಾಂಧರ್ವ ವಿದ್ಯೆಯೆಲ್ಲಿ ಸಾಹುಕಾರರೇ?" ಎಂದು ನಿಟ್ಟುಸಿರು ಬಿಟ್ಟರಂತೆ ಕೃಷ್ಣಪ್ಪನವರು.

" ನನ್ನೊಡನೆ ಬಾ ಹಾಗಾದರೆ " ಎಂದು ಹೇಳಿ ತಿಮ್ಮಯ್ಯನವರು ಹುಡುಗನನ್ನು ಕರೆದುಕೊಂಡು ಹೊರಟರು. ಕೃಷ್ಣಪ್ಪನವರ ಮನಸ್ಸಿನಲ್ಲಿ ಹಲವಾರು ಯೋಚನಾ ತರಂಗಗಳು ಅಲೆಅಲೆಯಾಗಿ ಎದ್ದು ಹೊಯ್ದಾಡ ಲಾರಂಭಿಸಿದವು. '' ಬಹುದಿನದ ಹೆಬ್ಬಯಕೆಯನ್ನು ಈಡೇರಿಸಲು ಸಹಾಯಕರಾಗಿ ಬಂದ ಈ ಆಪದ್ಬಾಂಧವರಾರು ? ಈ ಬೀದಿಹೋಕನ ಮೇಲೇಕೆ ಇವರಿಗಿಷ್ಟು ಅನುಗ್ರಹ ಬುದ್ಧಿ ? ಯಾವ ವಿದ್ವಾಂಸರ ಬಳಿ ಕರೆದೊಯ್ಯುತ್ತಿದ್ದಾರೆ ನನ್ನನ್ನು ? "—ಈ ಹಲವಾರು ಪ್ರಶ್ನೆಗಳ ಗೊಂದ ಲದಲ್ಲಿ ದಾರಿ ಸಾಗಿದ್ದರ ಅರಿವೇ ಇಲ್ಲ ಕೃಷ್ಣಪ್ಪನವರಿಗೆ. ಭಾವನಾಪ್ರಪಂಚ ದಲ್ಲಿ ಮುಳುಗಿದ್ದ ಕೃಷ್ಣಪ್ಪನವರಿಗೆ ತಿಮ್ಮಯ್ಯನವರು ಮನೆಯೊಂದರ ಮುಂದೆ ನಿಂತು ಬಾಗಿಲು ತಟ್ಟಿದಾಗಲೇ ಎಚ್ಚರವಾದದ್ದು.

" ಯಾರು ? " ಒಳಗಿನಿಂದ ಧ್ವನಿಯೊಂದು ಸಾಹುಕಾರರ ಕರೆಗೆ ಪ್ರತ್ಯುತ್ತರವೀಯಿತು. ಕೃಷ್ಣಪ್ಪನವರಿಗೆ ಪರಿಚಿತವಾದ ಧ್ವನಿ. ಕುತೂಹಲ ಕೆರಳಿತು. ಬಾಗಿಲನ್ನು ತೆಗೆದುಕೊಂಡು ಕರೂರು ರಾಮಸ್ವಾಮಿಯವರು ಹೊರಬಂದರು. " ಇದೇನು ಸ್ವಪ್ನವೋ ? ಜಾಗ್ರತಾವಸ್ಥೆಯೋ ? " ಎಂದು ಕೃಷ್ಣಪ್ಪನವರಿಗೆ ಅಚ್ಚರಿಯಾಯಿತು. ಯಾರನ್ನು ತಮ್ಮ ಗುರು ವನ್ನಾಗಿ ಕರುಣಿಸೆಂದು ಹಗಲಿರಳೂ ದೇವರಲ್ಲಿ ಮೊರೆಯಿಡುತ್ತಿದ್ದರೋ ಆ ವಿದ್ವಾಂಸರ ಅನುಗ್ರಹ ತಾನಾಗಿಯೇ ಪ್ರಾಪ್ತವಾಗುವ ಸನ್ನಿವೇಶಾನು ಭವದಿಂದ ಕೃಷ್ಣಪ್ಪನವರಿಗೆ ಸಂತೋಷ ಉಕ್ಕಿ ಬಂತು. ಮನದಲ್ಲಿಯೇ ಭಗವಂತನನ್ನು ಸ್ಮರಿಸಿದರು. "ಬನ್ನಿ ಸಾಹುಕಾರರೇ, ಒಳಗೆ ದಯಮಾಡಿ. ಇದೇನು ಇಷ್ಟು ದೂರ ಸವಾರಿ ?....ಬಾಯ್ಯ ಕೃಷ್ಣಪ್ಪ ! '' ಎಂದರು ರಾಮಸ್ವಾಮಿಯವರು.

" ಈತನ ಪರಿಚಯ ಎಲ್ಲಿ ನಿಮಗೆ ? " ಎಂದು ಕೇಳಿದರು ಸಾಹು ಕಾರರು.

" ಈತನನ್ನು ಚೆನ್ನಾಗಿ ಬಲ್ಲೆ. ಮೊನ್ನೆ ಸಹಿತ ಇವರೆ ಮನೆಗೆ ಹೋಗಿ ಹಾಡಿ ಬಂದಿದ್ದೇನೆ....ಇವರ ಮನೆಯವರೆಲ್ಲ ಚೆನ್ನಾಗಿ ಗೊತ್ತು ನನಗೆ. ಆದಿರಲಿ, ತಾವು ಬಂದ ಉದ್ದೇಶವೇನು ಸಾಹುಕಾರರು ? "

" ನಾ ಬಂದಿರುವುದೂ ಈ ಹುಡುಗನ ವಿಷಯವಾಗಿಯೇ. ಈತನಿಗೆ ನೀವು ಸಂಗೀತ ಹೇಳಿಕೊಡಬೇಕು. ಇಗೋ, ತೆಗೆದುಕೊಳ್ಳಿ ಈ ಹಣವನ್ನು.

ಪ್ರಶಸ್ತವಾದ ಒಂದು ದಿನವನ್ನು ನೋಡಿ ಆದಷ್ಟು ಜಾಗ್ರತೆಯಾಗಿ ಪಾಠ ಪ್ರಾರಂಭಮಾಡಿ. ಮನಬಿಚ್ಚಿವಿದ್ಯಾದಾನಮಾಡಿ. ನಿಮ್ಮ ಪ್ರತಿಫಲಕ್ಕೆ ಲೋಪವಿಲ್ಲದಂತೆ ನೋಡಿಕೊಳ್ಳುವ ಭಾರ ನನ್ನ ಮೇಲಿರಲಿ ಎಂದು ಹೇಳಿ ನೂರು ರೂಪಾಯಿನ ಒಂದು ನೋಟನ್ನು ರಾಮುಸ್ವಾಮಿಯವರ ಕೈಯಲ್ಲಿಟ್ಟರು. ”

“ ಅಗತ್ಯವಾಗಿ ಆಗಲೀ ಸಾಹುಕಾರರೇ. ತಮ್ಮ ಮಾತಿಗೆ ಯಾವಾಗಲಾದರೂ ಬದಲಾಡಿದ್ದೇನೆಯೇ? ಅಂದು ಈತನ ತಾಯಿಯೂ ಕೂಡ ಬಹುವಾಗಿ ಕೇಳಿಕೊಂಡಿದ್ದರು. ಆಗಲಿ ನೋಡೋಣ ಎಂದಿದ್ದೆ. ಇಂದು ತಮ್ಮ ಆಣತಿ ಬೇರೆ ಜತೆ ಸೇರಿದೆ. ಬಹಳ ಸಂತೋಷ, ನನ್ನ ಕೈಲಾದ ಮಟ್ಟಿಗೆ ಈತನನ್ನು ತಯಾರು ಮಾಡುತ್ತೇನೆ” ಎಂದರು ರಾಮುಸ್ವಾಮಿ.

ಆಶ್ಚರ್ಯದಿಂದ ಮೂಕರಾಗಿದ್ದ ಕೃಷ್ಣಪ್ಪನವರ ಬಾಯಲ್ಲಿ ಮಾತುಗಳೇ ಹೊರಡಲಿಲ್ಲ. ಕೃತಜ್ಞತೆಯ ಕುರುಹಾಗಿ ತಲೆ ಬಾಗಿತ್ತು, ಕಣ್ಣಂಚಿನಲ್ಲಿ ಹನಿ ಮೂಡಿತ್ತು.

ಗುರುಭಕ್ತಿ, ಪಾಠಪ್ರವಚನಗಳಲ್ಲಿದ್ದ ತೀವ್ರಾಸಕ್ತಿಗಳ ಪರಿಣಾಮವಾಗಿ ಕೃಷ್ಣಪ್ಪನವರ ವ್ಯಾಸಂಗ ಬಲು ಆಶಾದಾಯಕವಾಗಿ ಸಾಗಿತು. ಸಾಹುಕಾರ್ ತಿಮ್ಮಯ್ಯನವರು ಆಗಿಂದಾಗ್ಗೆ ಬಂದು ಕೃಷ್ಣಪ್ಪನವರ ಪುರೋಭಿವೃದ್ಧಿಯನ್ನು ಕಂಡು ಹರ್ಷಗೊಳ್ಳುತ್ತಿದ್ದರು. ಕೃಷ್ಣಪ್ಪನವರ ಶಾರೀರ ಮೊದಲಲ್ಲಿ ಬಲು ಕಟುವಾಗಿತ್ತಂತೆ. ಮಂದರ ಮತ್ತು ತಾರಸ್ಥಾಯಿಗಳಲ್ಲಿ ಹಾಡಲು ಸೌಕರ್ಯವಿರಲಿಲ್ಲವಂತೆ. ಇದಕ್ಕಾಗಿ ಒಂದು ಉಗ್ರ ತಪಸ್ಸನ್ನೇ ಆಚರಿಸಿದರು ಕೃಷ್ಣಪ್ಪನವರು. ಹಠಯೋಗಿಗಳು. ಗುರುಗಳ ಸೂಚನೆಯಂತೆ ಬೆಳಗಿನ ಝಾವ ನಡುನೀರಿನಲ್ಲಿ ಕುಳಿತು ಅಕಾರಸಾಧನೆ, ಸ್ವರಕಂಪಕಗಳ ಸಾಧನೆ ಮಾಡತೊಡಗಿದರಂತೆ! “ ಸಂಗೀತ ವಿದ್ವಾಂಸನಿಗೆ ಶಾರೀರ ಸಂಪತ್ತು ಎಷ್ಟು ಪ್ರಾಮುಖ್ಯವೋ ಶರೀರ ದಾರ್ಢ್ಯವೂ ಅಷ್ಟೇ ಮುಖ್ಯ. ಬೆಳಗಿನ ಝಾವ ಸಾಧಕವಾದನಂತರ, ಸ್ನಾನಮಾಡುವುದಕ್ಕೆ ಮುಂಚೆ, ಅಂಗಸಾಧನೆಮಾಡು. ಹಾಡುವಾಗ ಯಾವಾಗಲೂ ಪದ್ಮಾಸನದಲ್ಲಿ ನೆಟ್ಟಗೆ ಕುಳಿತುಕೋ. ಇಲ್ಲವಾದರೆ ಪ್ರತಿಯೊಂದು ಸ್ವರವೂ ನಾಭಿಯಿಂದ ಹೊರಟು ಶುದ್ಧವಾಗಿ ರೂಪಗೊಳ್ಳುವುದಿಲ್ಲ. ಎತ್ತಿದ ನಡೆಯನ್ನು ಕೊನೆಯವರೆಗೂ ನಿರ್ವಹಿಸಲು ಪ್ರಯತ್ನಿಸು ” ಎಂದು ಬೋಧಿಸುತ್ತಿದ್ದ

ರಂತೆ ಗುರುಗಳು. ಗುರುವಾಕ್ಯವನ್ನು ಶಿರಸಾ ನಿರ್ವಹಿಸುವುದೇ ಶಿಷ್ಯನ ಮೂಲಮಂತ್ರವಾಗಿತ್ತು. ಉಳಿಯ ಪೆಟ್ಟಿಗೆ ಸಿಕ್ಕಿದ ಬಂಡೆಯಿಂದ ದಿವ್ಯ ಶಿಲಾಮೂರ್ತಿ ಉದ್ಭವಿಸುವಂತೆ ಉಗ್ರತಪಸ್ಸಿನ ಫಲವಾಗಿ ಕೃಷ್ಣಪ್ಪನವರ ಶಾರೀರ ಮೃದುವಾಯಿತು, ಇಂಪಾಯಿತು, ವಿಸ್ತಾರವಾಯಿತು. ಎಷ್ಟು ಕಷ್ಟಪಟ್ಟು ಈ ಶಾರೀರ ಸಂಪತ್ತನ್ನು ಆರ್ಜಿಸಿಕೊಂಡರೋ ಅಷ್ಟೇ ಜಾಗ್ರತೆ ಯಾಗಿ ಅದನ್ನು ತಮ್ಮ ಅಂತ್ಯಕಾಲದವರೆಗೂ ರಕ್ಷಿಸಿಕೊಂಡು ಬಂದರು. ಕುತ್ತಿಗೆಗೆ ಶಾಖವಾದ ಉಣ್ಣೆಯ ವಸ್ತ್ರವನ್ನು ಸುತ್ತಿಕೊಳ್ಳದೇ ಎಂದೂ ಹೊರಗೆ ಹೊರಟವರಲ್ಲ ಕೃಷ್ಣಪ್ಪನವರು. ಕೃಷ್ಣಪ್ಪನವರ ಕಛೇರಿ ಸಾಮಾನ್ಯವಾಗಿ ಮಧ್ಯಾಹ್ನ ನಾಲ್ಕು ಘಂಟೆಗೆ ಪ್ರಾರಂಭವಾಯಿತೆಂದರೆ ಮುಗಿಯುವ ವೇಳೆಗೆ ಹತ್ತು ಘಂಟೆಯ ಸಮಯವಾಗುತ್ತಿತ್ತು. ಕಛೇರಿಯು ಮುಗಿಯುವವರೆಗೂ ಒಂದು ಬಾಲಮೆಣಸನ್ನು ಸಹ ಅವರು ಬಾಯಿಗೆ ಹಾಕುತ್ತಿರಲಿಲ್ಲ. ಎಳೆದತ್ತ ಬಾಗುತ್ತಿತ್ತು ಶಾರೀರ. ಆದಿಯಿಂದ ಅಂತ್ಯದ ವರೆಗೂ ಒಂದೇ ಇಂಪು, ಒಂದೇ ಶಕ್ತಿ ಆ ಶಾರೀರದಲ್ಲಿ. ಅಂಥ ಪ್ರಚಂಡ ಸಾಧಕ ಅವರದ್ದು.

ಕರೂರು ರಾಮಸ್ವಾಮಿಯವರ ಅನಂತರ ಕೃಷ್ಣಪ್ಪನವರ ಶಿಕ್ಷಣ ಗಿರಿಭಟ್ಟರ ತಮ್ಮಯ್ಯ, ಕರಗಿರಿರಾಯರು ಮತ್ತು ವೀಣೆ ಶೇಷಣ್ಣನವರಲ್ಲಿ ಮುಂದುವರೆಯಿತು.

ಹೇಗಾದರೂ ಮಾಡಿ ದೊರೆಗಳ ಕಟಾಕ್ಷ ಕೃಷ್ಣಪ್ಪನವರಮೇಲೆ ಬೀಳುವಂತೆ ಮಾಡಬೇಕೆಂಬುದು ತಿಮ್ಮಯ್ಯನವರ ಎರಡನೆಯ ಪ್ರಯತ್ನ. ತಿಮ್ಮಯ್ಯನವರಂತೆಯೇ ಕೃಷ್ಣಪ್ಪನವರ ಪುರೋಭಿವೃದ್ಧಿಯಲ್ಲಿ ಆಸಕ್ತ ರಾಗಿದ್ದ ಇನ್ನೊಬ್ಬ ವ್ಯಕ್ತಿಗಳೆಂದರೆ ಡಾಕ್ಟರ್ ನಂಜುಂಡರಾಯರು. ಕೃಷ್ಣಪ್ಪ ನವರು ಒಬ್ಬ ಮನುಷ್ಯರಾದದ್ದು ಈ ಇಬ್ಬರ ಪ್ರೋತ್ಸಾಹ ಬೆಂಬಲ ಗಳಿಂದಲೇ ಎನ್ನಬಹುದು. ದಿವಾನ್ ರಂಗಾಚಾರ್ಯರಲ್ಲಿ ಕೃಷ್ಣಪ್ಪನವರ ವಿಷಯವನ್ನು ಅನೇಕವೇಳೆ ಪ್ರಸ್ತಾಪಿಸಿ, ದೊರೆಗಳು ಒಮ್ಮೆ ಕೃಷ್ಣಪ್ಪ ನವರ ಸಂಗೀತವನ್ನು ಕೇಳುವಂತೆ ಮಾಡಿಕೊಡಬೇಕೆಂದು ಪ್ರಾರ್ಥಿಸಿ ಕೊಂಡಿದ್ದರು.

ಧರ್ಮಸ್ಥಳದಿಂದ ಇಲ್ಲಿಗೆ ಬಂದು ತಂಗಿದ್ದ ಯಕ್ಷಗಾನದ ಮಂಡಲಿ ಯನ್ನು ನಾಟಕದ ಕಂಪನಿಯನ್ನಾಗಿ ಪರಿವರ್ತಿಸಿ ನಟರಿಗೆಲ್ಲ ಅರಮನೆಯ

ಸಂಬಳವನ್ನು ಕಲ್ಪಿಸಿಕೊಡಬೇಕೆಂದು ದಿವಾನ್ ರಂಗಾಚಾರ್ಯರು ಯೋಚಿಸಿದ್ದರು- ಸಂಸ್ಕೃತದಲ್ಲಿ ಪ್ರಹ್ಲಾದ ಚರಿತ್ರೆ, ಮಹಾರಾಷ್ಟ್ರದಲ್ಲಿ ಧ್ರುವ ಚರಿತ್ರೆ ಮತ್ತು ಕನ್ನಡದಲ್ಲಿ ಅಂಬರೀಷ ಚರಿತ್ರೆ—ಈ ಮೂರು ನಾಟಕಗಳನ್ನು ಬರೆಸಿದರು. ಪಾತ್ರಗಳಿಗೆ ನಟರನ್ನು ರಂಗಾಚಾರ್ಯರೇ ಚುನಾಯಿಸಿದರು. ಕೃಷ್ಣಪ್ಪನವರಿಗೆ ಸೂತ್ರಧಾರನ ಪಾತ್ರ ನಿಯೋಜಿತ ವಾಯಿತು. ಈಗಿನ ಸಂಸ್ಕೃತ ಪಾಠಶಾಲೆಗೆ ಹೊಸ ಛತ್ರವೆಂದು ಆಗಿನ ಹೆಸರು. ಮೊಟ್ಟಮೊದಲ ನಾಟಕಗಳು ಪ್ರದರ್ಶಿತವಾದದ್ದು ಆ ಹೊಸ ಛತ್ರದಲ್ಲೇ. ಸ್ವಯಂ ದಿವಾನರೇ ಮುತುವರ್ಜಿ ವಹಿಸಿದ್ದರೆಂದ ಮೇಲೆ ಕೇಳಬೇಕೆ? ನಾಟಕಾಭಿನಯ ಬಲು ಉತ್ತಮ ದರ್ಜೆಯದಾಗಿತ್ತು. ಮಹಾಸ್ವಾಮಿಯವರಿಗೆ ಸೊಗಸಿತು. ರಂಗಾಚಾರ್ಯರ ಸಲಹೆಯ ಮೇರೆಗೆ ನಟರಿಗೆಲ್ಲ ಅರಮನೆಯಲ್ಲಿ ಸಂಬಳವಾಯಿತು. ಕೃಷ್ಣಪ್ಪನವರಿಗೆ ಈ ಸಂದ ರ್ಭದಲ್ಲಿ ಆರು ರೂಪಾಯಿನ ವೇತನ ದೊರೆಯಿತು. ಪ್ರಭುಗಳ ಸನ್ನಿಧಿ ಯಲ್ಲಿ ಒಂದೆರಡು ಸಂಗೀತ ಕಛೇರಿಗಳಾಗಿ ರಾಜಸನ್ಮಾನ ದೊರೆಯಿತು. ಇಷ್ಟೆಲ್ಲ ವೈಭವಕ್ಕೆ ಮೂಲಕಾರಣರಾದ ತಿಮ್ಮಯ್ಯನವರಿಗೂ ನಂಜುಂಡ ರಾಯರಿಗೂ ತಮ್ಮ ಕೃತಜ್ಞತೆಯನ್ನು ಸಲ್ಲಿಸಿದರು ಕೃಷ್ಣಪ್ಪ. ನೆಟ್ಟ ಸಸಿ ಫಲಬಿಡುವಂತಾದುದಕ್ಕಾಗಿ ಈರ್ವರೂ ಪ್ರಫುಲ್ಲವದನರಾದರು. ನಾಯು ವವರೆಗೂ ಕೃಷ್ಣಪ್ಪನವರು ಈ ಆಶ್ರಯದಾತರ ಉಪಕಾರವನ್ನು ಸ್ಮರಿಸಿ ಕೊಳ್ಳುತ್ತಲೇ ಇದ್ದರು. "ಅವರ ಹೆಸರು ಹೇಳಿ ದೀಪ ಹಚ್ಚಬೇಕು ನಾನು ಆಚಾರ್ಯರೇ, ನನ್ನ ಭಾಗ್ಯೋದಯವಾದದ್ದು. ಈ ಮಹಾನು ಭಾವರ ಪ್ರೀತಿ ಪ್ರೋತ್ಸಾಹಗಳ ಬಲದಿಂದ" ಎನ್ನುತ್ತಿದ್ದರು ಕೃಷ್ಣಪ್ಪ.

ಅಂದು, ಹೊಟ್ಟೆಯ ಹಸಿವನ್ನು ತಡೆಯಲಾರದೆ ಮಾರುತಿಯ ದೇವಸ್ಥಾನದ ಬಳಿ ಕುಳಿತು ಹಾಡುವಂತೆ ಪ್ರೇರಣೆಯಾದದ್ದು, ಆ ಮೂಲಕ ನಂಜುಂಡರಾಯರು ಮತ್ತು ತಿಮ್ಮಯ್ಯನವರ ಅನುಗ್ರಹ ಲಭ್ಯವಾದದ್ದು, ಅದರ ಫಲವಾಗಿ ತಮ್ಮ ಇಡೀ ಜೀವಮಾನವೇ ಒಂದು ಆಕೃತಿ ಪಡೆದದ್ದು ಇವೆಲ್ಲಕ್ಕೂ ಆ ಮಾರುತಿ, ಅವನ ಆರಾಧ್ಯಮೂರ್ತಿ ಶ್ರೀರಾಮಚಂದ್ರನೇ ಕಾರಣವೆಂದು ಕೃಷ್ಣಪ್ಪನವರ ನಿಶ್ಚಲನಂಬಿಕೆ. ರಾಮಚಂದ್ರನ ಅನುಗ್ರಹ ದಿಂದ ದೊರೆತ ವರಪ್ರಸಾದವನ್ನು ಅವನ ಸೇವೆಗಾಗಿಯೇ ಮುಡುಪಿಟ್ಟರು ಕೃಷ್ಣಪ್ಪನವರು. ಅವರು ಕೀರ್ತನಮಾಡಿ ಸೇವೆಮಾಡದ ರಾಮಮಂದಿರವೇ

ಇಲ್ಲವೆನ್ನಬಹುದು. ಕಛೇರಿಮಾಡಿ, ದ್ರವ್ಯಾರ್ಜನೆಮಾಡಿ ಭವ್ಯವಾದ ಮಂದಿರವೊಂದನ್ನು ನಿರ್ಮಿಸಿ ರಾಮಸೇವೆಯನ್ನು ಮನಸಾರ ಮಾಡ ಬೇಕೆಂಬ ಸಂಕಲ್ಪಮಾಡಿದರು. ದಾಕ್ಷಿಣಾತ್ಯದೇಶಗಳಿಗೆಲ್ಲ ಹೋಗಿ ತಮ್ಮ ಗಾನಪ್ರತಿಭೆಯಿಂದ ಯಶೋಧನಗಳನ್ನು ಅತುಲವಾಗಿ ಗಳಿಸಿದರು. ಮೈಸೂರಿನ ಪಾಂಡಿತ್ಯ ಜಯಭೇರಿಯನ್ನು ಧಕ್ಷಿಣ ದೇಶಗಳಲ್ಲಿ ಮೊಳಗಿಸಿ ನಮ್ಮ ನಾಡಿಗೆ ಧವಳಕೀರ್ತಿಯನ್ನು ದೊರಕಿಸಿಕೊಟ್ಟವರಲ್ಲಿ ಕೃಷ್ಣಪ್ಪನವರ ಸ್ಥಾನ ಬಲು ಹಿರಿಯದು. ಸಹಸ್ರಾರು ರೂಪಾಯಿಗಳನ್ನು ಸಂಪಾದಿಸಿ, ಮಹಾಜನರ ಸಹಕಾರದಿಂದ ಈಗ ಕಂಗೊಳಿಸುತ್ತಿರುವ ಶ್ರೀ ಪ್ರಸನ್ನ ಸೀತಾರಾಮ ಮಂದಿರವನ್ನು ನಿರ್ಮಿಸಿದರು. ಕೃಷ್ಣಪ್ಪನವರ ರಾಮಭಕ್ತಿಗೆ, ಪಾಂಡಿತ್ಯಪ್ರತಿಭೆಗೆ ಈ ಮಂದಿರ ಒಂದು ಭವ್ಯಸ್ಮಾರಕ. ಸಂಗೀತ ಕಛೇರಿಗಳಿಗೆ ಯೋಗ್ಯವಾದ ಕಟ್ಟಡವೊಂದರ ಅಭಾವದ ಕೊರತೆ ಯನ್ನು ಈ ಮಂದಿರ ನಿವಾರಿಸಿತು. ಕೃಷ್ಣಪ್ಪನವರ ಪರಸ್ಥಳ ಪ್ರವಾಸ ದಿಂದಾದ ಮತ್ತೊಂದು ಮಹತ್ಪ್ರಯೋಜನವೆಂದರೆ ನಮ್ಮೂರಿನ ಮತ್ತು ದಕ್ಷಿಣದೇಶದ ವಿದ್ವಾಂಸರುಗಳ ಪರಸ್ಪರ ಮಿಲನಕ್ಕೆ ಹೆಚ್ಚು ಅವಕಾಶ ವಾದದ್ದು. ಹಳೆಯ ನೀರಿನ ಜೊತೆಗೆ ಹೊಸ ನೀರು ಬೆರೆಯಿತು. ಗಾನ ವಾಹಿನಿಯ ರೂಪು ರೇಖೆಗಳ ಮೇಲೆ ಇದರ ಪ್ರಭಾವ ಬೀಳದೇ ಇರಲಿಲ್ಲ.

ದಿನೇ ದಿನೇ ಪ್ರವೃದ್ಧಮಾನಕ್ಕೆ ಬರುತ್ತಿದ್ದ ಕೃಷ್ಣಪ್ಪನವರು ಅಸೂಯಾಪರರ ನೀಚಕೃತ್ಯಗಳಿಗೆ ಈಡಾಗಬೇಕಾಯಿತು. ಹೊಟ್ಟೆಗೆ ಮದ್ದನ್ನು ಸಹ ಹಾಕಲು ಜನ ಹಿಂಜರಿಯಲಿಲ್ಲ. ತಾಯಿ ಸರಸ್ವತೀ ಬಾಯಿಗೆ ಬಹು ಕ್ಲೇಶ, ಆತಂಕಗಳುಂಟಾದವು. ಹೊರಗೆಲ್ಲೂ ತಿಂಡಿ ತೀರ್ಥಗಳನ್ನು ತೆಗೆದುಕೊಳ್ಳುವದಿಲ್ಲವೆಂದು ಮಗನಿಂದ ಪ್ರಮಾಣಮಾಡಿಸಿ ಕೊಂಡರು. ಕಛೇರಿಯಾದಮೇಲೆ ಒಂದು ಲೋಟ ಹಾಲನ್ನು ಸಹ ಕೃಷ್ಣಪ್ಪನವರು ಕುಡಿಯುತ್ತಿರಲಿಲ್ಲ.

ಕೃಷ್ಣಪ್ಪನವರ ಕೆಚ್ಚೆದೆ, ಅವರ ವಿರೋಧಿಗಳಿಂದ ಆಗಿಂದಾಗ್ಗೆ ತಲೆದೋರುತ್ತಿದ್ದ ಕಿರುಕುಳಗಳನ್ನು ಪ್ರತಿಬಿಂಬಿಸುವ ಮತ್ತೊಂದು ನಿದರ್ಶನ ಇದು, ಬೆಂಗಳೂರಿನಲ್ಲಿ Southern Maratha Railway Resident Engineer ಆಫೀಸಿನಲ್ಲಿ ಮ್ಯಾನೇಜರಾಗಿದ್ದ ನರಸಿಂಹಯ್ಯ ನೆಂಬುವರ ಮನೆಯಲ್ಲಿ ಕೃಷ್ಣಪ್ಪನವರ ಗಾಯನವೊಂದೇರ್ಪಾಡಾಗಿತ್ತು.

ಅನೇಕ ರಸಿಕರೂ ವಿದ್ವಾಂಸರೂ ಸಭೆ ಸೇರಿದ್ದರು. ಕೃಷ್ಣಪ್ಪನವರ ಉತ್ಕೃಷ್ಟ ಗಾನವನ್ನು ಕೇಳಿ ಸಭೆ ಅವರಿಗೆ ವಿಶೇಷ ರೀತಿಯಲ್ಲಿ ಸನ್ಮಾನ ಮಾಡಿತು. ಮಹಾವಿದ್ವಾಂಸರೆಂದು ಮುಕ್ತಕಂಠದಿಂದ ಸಾರಿತು. ಈ ಸುದ್ದಿ ಮೈಸೂರಿಗೂ ತಲುಪಿತು. ಕೃಷ್ಣಪ್ಪನವರು ಮೈಸೂರಿಗೆ ಹಿಂತಿರುಗಿದ ಮೇಲೆ ವೀಣೆ ಶೇಷಣ್ಣನವರು ಅವರನ್ನು ತಮ್ಮ ಮನೆಗೆ ಬರಮಾಡಿ ಕೊಂಡರು. ಶೇಷಣ್ಣನವರ ಮನೆಯಲ್ಲಿ ಒಂದು ದೊಡ್ಡ ಸಭೆಯೇ ಸೇರಿತ್ತು. ದಕ್ಷಿಣದೇಶದ ಗಣ್ಯವಿದ್ವಾಂಸರೊಬ್ಬರು ಸಭೆಯಲ್ಲಿ ಹಾಜರಿದ್ದರು. ಕೃಷ್ಣಪ್ಪ ನವರನ್ನು ಕುರಿತು ಶೇಷಣ್ಣ, "ಕೃಷ್ಣಪ್ಪ, ನೀನು ಬೆಂಗಳೂರಿನಲ್ಲಿ ಸಂಪಾದಿಸಿದ ಕೀರ್ತಿಗೌರವಗಳ ಸಮಾಚಾರವೆಲ್ಲ ನಮಗೆ ತಿಳಿದು ಬಂತು. ನಿನ್ನನ್ನು ಮಹಾವಿದ್ವಾಂಸರೆಂದು ಜನ ಘೋಷಿಸಿದರಂತೆ. 'ವಿದ್ವಾಂಸ' ಅನ್ನುವ ಪ್ರಶಸ್ತಿಯನ್ನು ನೀಡುವುದು ವಿದ್ವಾಂಸರಾದ ನಮಗೆ ಸೇರಿದ ಹಕ್ಕು. ಇಂದು, ನಮ್ಮೆದುರಿಗೆ ಹಾಡಿ, ನಮ್ಮ ಮೆಚ್ಚುಗೆಯನ್ನು ಗಳಿಸಿ ಕೊಂಡು ನಿನಗೆ ಬೆಂಗಳೂರಿನ ಮಹಾಜನರು ಕೊಟ್ಟಿರುವ ಗೌರವವನ್ನು ಉಳಿಸಿಕೋ" ಎಂದರು. ಇಷ್ಟರಲ್ಲಿ, ತಮ್ಮ ಮನೆಯಲ್ಲಿ ಆರು ತಿಂಗಳು ಕಾಲ ಗುಟ್ಟಿನಲ್ಲಿ ಏರ್ಪಾಡು ಮಾಡಿಕೊಂಡಿದ್ದ ಆರು ಅಕ್ಷರಕಾಲದ ಪಲ್ಲವಿ ಯೊಂದನ್ನು ಆ ದಕ್ಷಿಣದೇಶದ ವಿದ್ವಾಂಸರು ಹಾಡಿ ತೋರಿಸಿ "ಕೃಷ್ಣಪ್ಪ ನವರೇ! ಇದೋ, ಪೂರಾ ಕಛೇರಿ ಮಾಡಬೇಕಾದ ಪ್ರಮೇಯವಿಲ್ಲ. ಈಗ ನಾನು ಹಾಡಿ ತೋರಿಸಿದ ಪಲ್ಲವಿಯನ್ನು ಸ್ವಲ್ಪ ಹಾಡಿ, ನೆರವಲು ಮಾಡಿ, ನಾಲ್ಕಾವರ್ತ ಸ್ವರ ಹಾಡಿದರೆ ಸಾಕು" ಎಂದರು. ಕೃಷ್ಣಪ್ಪ ನವರಿಗೆ ಮೈಯೆಲ್ಲ ಬೆಂಕಿಯಾಯಿತು. ಆದರೂ ಹಸನ್ಮುಖಿಗಳಾಗಿಯೇ ಇದ್ದರು. ಸ್ವಲ್ಪವಾದರೂ ಎದೆ ಜಗ್ಗಲಿಲ್ಲ. ಎದ್ದುನಿಂತು ನಮ್ರರಾಗಿ ಶೇಷಣ್ಣನವರನ್ನು ಕುರಿತು ನುಡಿದರು, "ಗುರುಗಳೇ, ನನಗೆ ಏನೇ ಗೌರವ, ಕೀರ್ತಿ ಲಭಿಸಿದಾಗ್ಯೂ ಅದು ತಮ್ಮ ಆಶೀರ್ವಾದದ ಫಲವೇ ಹೊರತು ಅನ್ಯಥಾ ಅಲ್ಲ. ಶಿಷ್ಯನನ್ನು ಪರೀಕ್ಷಿಸಿಯೇ ತೀರಬೇಕೆಂಬ ಅಭಿಲಾಷೆಯಿದ್ದರೆ ತಮ್ಮ ಅಪ್ಪಣೆಗೂ, ಈ ವಿದ್ವಾಂಸರ ಸವಾಲಿಗೂ ಸಿದ್ಧ ವಾಗಿದ್ದೇನೆ. ಆದರೆ, ನನ್ನದೂ ಒಂದು ಷರತ್ತುಂಟು. ಇವರು ಗುಟ್ಟಾಗಿ ಏರ್ಪಡಿಸಿಕೊಂಡು ಬಂದಿರುವ ಪಲ್ಲವಿಯನ್ನು ನಾನು ಹಾಡಿಯಾದ ಮೇಲೆ, ನಾನೂ ಒಂದು ಪಲ್ಲವಿಯನ್ನು ಇಲ್ಲಿಯೇ ತಯಾರುಮಾಡಿ

ಕೊಡುತ್ತೇನೆ. ಅದನ್ನು ಈ ವಿದ್ವಾಂಸರೂ ಹಾಡಿ ತೋರಿಸಬೇಕು" ಎಂದರು. ಆರು ಅಕ್ಷರಕಾಲದ ಪಲ್ಲವಿಯನ್ನು ನಿರ್ಭಯವಾಗಿ, ನಿರಾಯಾಸವಾಗಿ ಹಾಡಿಯೇ ಬಿಟ್ಟರು, ಕೃಷ್ಣಪ್ಪ. "ಇನ್ನು ನನ್ನ ಸವಾಲು" ಎಂದರು. ಆಗ ಶೇಷಣ್ಣನವರು ಆನಂದಬಾಷ್ಪಭರಿತರಾಗಿ ಕೃಷ್ಣಪ್ಪನವರನ್ನಾಲಿಂಗಿಸಿಕೊಂಡು "ನೀನು ನಿಜವಾಗಿಯೂ ಮೈಸೂರಿನ ಗಾನ ಕೇಸರಿಯೇ ಸರಿ. ನಿನ್ನ ಯೋಗ್ಯತೆಯನ್ನು ನಾನು ಹೊಸದಾಗಿ ಪರೀಕ್ಷಿಸಬೇಕಾಗಿಲ್ಲ. ಪರೋಕ್ಷದಲ್ಲಿ ಸಣ್ಣಮಾತುಗಳನ್ನಾಡುತ್ತಿದ್ದ ಜನಕ್ಕೆ ನಿನ್ನ ಯೋಗ್ಯತೆಯನ್ನು ಪರಿಚಯಮಾಡಿಕೊಡುವ ಉದ್ದೇಶದಿಂದ ನಿನ್ನನ್ನು ಇಂದು ಬರಮಾಡಿಕೊಂಡೆ. ಯಶೋವಂತನಾಗಿ ಬಾಳು" ಎಂದು ಆಶೀರ್ವದಿಸಿದರು.

ದಕ್ಷಿಣದೇಶದ ಆ ವಿದ್ವಾಂಸರಿಗೆ ಕೃಷ್ಣಪ್ಪನವರ ಮೇಲೆ ಜಿದ್ದು ಬಲವಾಗಿ ಬೇರೂರಿತು. ಇದಾದ ಸ್ವಲ್ಪದಿನಗಳಮೇಲೆ ಕೃಷ್ಣಪ್ಪನವರಿಗೆ ತಿರವಡುಮರ್ದೂರಿನ ಪಂಡಾರು ಸನ್ನಿಧಿಯಲ್ಲಿ ವಿಶೇಷ ಗೌರವ ಪುರಸ್ಕಾರಗಳು ದೊರೆತದ್ದನ್ನು ತಿಳಿದ ಆ ವಿದ್ವಾಂಸರು ಕೃಷ್ಣಪ್ಪನವರಿಗೆ ಬರೆದ ಒಂದು ನೋಟೀಸು ಪತ್ರ, ಅದಕ್ಕೆ ಪ್ರತ್ಯುತ್ತರವಾಗಿ ಕೃಷ್ಣಪ್ಪನವರು ಬರೆದ ಕಾಗದದ ಕೆಲವು ಭಾಗಗಳನ್ನು ಇಲ್ಲಿ ಕೊಡಲಾಗಿದೆ.

## ನೋಟೀಸ್

ಮದರಾಸ್,

ನಂಬರು ೧ ತಾ|| 7—6—1905

"ಮೈಸೂರು ಅರಮನೆ ಸಂಗೀತ ಇಲಾಖಾ ಬಿಡಾರ ಕೃಷ್ಣಪ್ಪನವರಿಗೆ.........ರು ಬರಿಯುವ ನೋಟೀಸ್ ಏನೆಂದರೆ—

ನೀವು ಸಂಗೀತದಲ್ಲಿ ಅಭ್ಯಾಸಮಾಡುವುದು ಇನ್ನೂ ಬಹಳ ಇದ್ದಾಗ್ಯೂ ಸಭೆಯಲ್ಲಿ ಸಂಗೀತ ವಿದ್ವಾಂಸರುಗಳು ಕೇಳಿದ ಪ್ರಶ್ನೆಗಳಿಗೆ ಜವಾಬು ಹೇಳುವುದಕ್ಕೆ ಶಾಸ್ತ್ರಸಾಮರ್ಥ್ಯ ಸಾಲದೇ ಇದ್ದಾಗ್ಯೂ ಪಂಡಾರ ಸನ್ನಿಧಿಯಲ್ಲಿ ಅಶಾಸ್ತ್ರೀಯವಾಗಿ ಹಾಡಿ 'ಗಾಯಕಶಿಖಾಮಣಿ' ಎಂಬ ಬಿರುದನ್ನು ಪಡೆದಿರುತ್ತೀರಿ. ಇದು ಬಹಳ ದೊಡ್ಡ ಬಿರುದಾಗಿರುವುದರಿಂದ ನಿಮಗೆ ಸಲ್ಲದು. ಇದನ್ನು ನೀವು ಕಾಪಾಡಿಕೊಳ್ಳಬೇಕೆಂಬ ಕುತೂಹಲ

ವಿದ್ದರೆ ಸಂಗೀತ ವಿದ್ವಾಂಸರುಗಳ ಸಭೆಯನ್ನು ಮಾಡಿಸಿ ಆ ಸಭೆಯಲ್ಲಿ ನಾನು ಮತ್ತು ಇತರ ವಿದ್ವಾಂಸರುಗಳು ಕೇಳುವ ಸಂಗೀತ ಪ್ರಶ್ನೆಗಳಿಗೆ ಉತ್ತರ ಕೊಟ್ಟು ಲಕ್ಷಣಯುಕ್ತವಾಗಿ ಹಾಡಿ ತೋರಿಸಿ ಅನಂತರ ವಿದ್ವಾಂಸರುಗಳು ಅಪ್ಪಣೆಕೊಟ್ಟರೆ ಬಿರುದನ್ನು ಉಪಯೋಗಿಸುವುದು ಉತ್ತಮವಾಗಿ ತೋರುತ್ತೆ. ಸಂಗೀತ ವಿದ್ವಾಂಸರುಗಳ ಸಭೆಯ್ನನ್ನು ನೀವು ಎಲ್ಲಿ ಮಾಡಿಸಿದಾಗ್ಯೂ ನಾನು ಬರುವುದಕ್ಕೆ ಸಿದ್ಧನಾಗಿರುತ್ತೇನೆ. ಈ ರೀತಿ ವಿದ್ವಾಂಸರುಗಳ ಸಭೆಯನ್ನು ಮಾಡಿಸುವ ವಿಷಯದಲ್ಲಿ ತಮ್ಮ ಮಹಾ ರಾಜರಿಗೂ ಮತ್ತು ಪಂಡಾರ ಸನ್ನಿಧಿಯವರಿಗೂ ಕಾಗದಗಳನ್ನು ಬರೆದು ಕೊಂಡಿರುತ್ತೇನೆ. ದಯವಿಟ್ಟು ಯಾವ ಕಾಲದಲ್ಲಿ ಯಾವ ಸ್ಥಳದಲ್ಲಿ ವಿದ್ವಾಂಸರುಗಳನ್ನು ಸೇರಿಸಿ ಸಭೆಯನ್ನು ಮಾಡಿಸುತ್ತೀರೋ ತಿಳಿಸಬೇಕು. ಆ ರೀತಿ ಸಭೆಯವರ ಅನುಮತಿ ಪಡೆಯುವವರೆಗೂ ಈ ಬಿರುದನ್ನು ತಾವು ಉಪಯೋಗಿಸುವುದು ತಮಗೆ ಗೌರವವನ್ನು ಕೊಡಲಾರದು...... ವಿದ್ಯದಲ್ಲಿ ಅಭಿಮಾನವಿಟ್ಟು ಸಭೆಯನ್ನು ಜಾಗ್ರತೆಯಲ್ಲಿ ಏರ್ಪಡಿಸಿ ನನಗೆ ತಿಳಿಸುವಿರೆಂದು ಖಂಡಿತವಾಗಿ ನಂಬಿರುತ್ತೇನೆ. ”

ವಿಳಾಸ—

No. 186, Mint Street, Madras.

12-6-1905.

ಮೈಸೂರು.

“ ಹಾಲಿ ಮದ್ರಾಸಿನಲ್ಲಿರುವ.........ರಿಗೆ. ಮೈಸೂರು ಅರಮನೆ ಸಂಗೀತ ವಿದ್ವಾನ್ ಗಾಯಕ ಶಿಖಾಮಣಿ ಬಿ. ಕೃಷ್ಣಪ್ಪನು ತಿಳಿಯ ಪಡಿಸುವುದೇನೆಂದರೆ :—

ನಿಮ್ಮ 7-6-1905 ರ ಮದ್ರಾಸ್ ಮೊಕ್ಕಾಂ ೧ ನೇ ನೋಟೀ ಸೆಂಬ ಅಸಂಬದ್ಧ ಪ್ರಲಾಪವು ತಲಪಿ ಅಭಿಪ್ರಾಯವಾಯಿತು. ಆದರೆ ಲೋಕದಲ್ಲಿ ಯಾವ ವಿದ್ಯದಲ್ಲಿಯೂ ಮಹಾ ವಿದ್ವಾಂಸನಾದವನೂ ಕೂಡ ಇನ್ನೂ ತಿಳಿದುಕೊಳ್ಳಬೇಕಾದ ಅಂಶಗಳು ಅನೇಕವಿರಬಹುದು. ಅದು ಹಾಗಿರಲಿ..........ಇದುವರೆಗೂ ಸಂಗೀತವಿದ್ಯಾ ವಿಷಯದಲ್ಲಿ ಕೀರ್ತಿ

ಬಿರುದುಗಳನ್ನು ಪಡೆದಿರುವವರೆಲ್ಲರೂ ಯಾವುದಾದರೊಂದು ರಾಜಾಸ್ಥಾನದಲ್ಲೇ ಆಗಲೀ ಯತಿಸ್ಥಾನದಲ್ಲೇ ಆಗಲೀ ತನ್ನ ಸರ್ವ ಸಮ್ಮತವಾದ ಗಾನದಿಂದ ಸಭೆಯವರಿಗೂ ಪ್ರಭುಗಳಿಗೂ ಆನಂದವನ್ನುಂಟುಮಾಡಿ ಪಡೆದಿರುವವರೇ ಹೊರತು ನೀವು ಬರೆದಿರುವಂತೆ ಸಂಗೀತ ವಿದ್ವಾಂಸರ ಸಭೆಯಲ್ಲಿ ಪರೀಕ್ಷೆ ಕೊಟ್ಟು ಬಿರುದು ಪಡೆದಿರುವುದನ್ನು ಇದುವರೆಗೂ ಯಾರೂ ಅರಿಯರು.

"ನೀವು ಸಂಗೀತ ವಿದ್ವಾಂಸರೆಂದು ಹೇಳಿಕೊಳ್ಳುವುದಕ್ಕೆ ನಿಮ್ಮ ಸ್ವದೇಶದಲ್ಲೇ ಆಗಲೀ ಅಥವಾ ಇತರ ದೇಶಗಳಲ್ಲೇ ಆಗಲೀ ಸರ್ವಸಮ್ಮತವಾದ ನಿಮ್ಮ ಗಾನದಿಂದ ಯಾವಾಗ, ಯಾವ ಸಭೆಯಲ್ಲಿ ಜನಗಳನ್ನು ತೃಪ್ತಿಪಡಿಸಿ ಯಾರಿಂದ ನೀವು ಬಿರುದನ್ನು ಪಡೆದಿರುತ್ತೀರಿ ಎಂಬ ಅಂಶವನ್ನು ರಿಕಾರ್ಡು ಮೂಲಕ ರುಜುವಾತುಮಾಡುವವರೆಗೂ ನಿಮ್ಮನ್ನು ಪ್ರಖ್ಯಾತರಾದ ಸಂಗೀತ ವಿದ್ವಾಂಸರೆಂದು ಗಣಿಸುವುದು ಹೇಗೆ ಎಂಬುದಾಗಿ ನಿಮ್ಮ ಕಾಗದವನ್ನು ಓದಿದವರೆಲ್ಲರೂ ಹೇಳುತ್ತಾರೆ. ಹೀಗಿರುವಲ್ಲಿ ನಿಮ್ಮಂಥಾ ವಿದ್ವಾಂಸರ ಸಭೆ ಸೇರಿಸಿ ಸಂಗೀತ ಸಾಹಿತ್ಯ ವಿಶಾರದರಿಂದ ಮಹಾಜನಗಳಿಂದ ನಾನು ಇದುವರೆಗೂ ಪಡೆದಿರುವ ಬಿರುದುಗಳನ್ನು ಊರ್ಜಿತ ಪಡಿಸಿಕೊಳ್ಳಬೇಕೆಂಬ ಆವಶ್ಯಕತೆಯೇ ಆಗಲಿ ಇಷ್ಟವೇ ಆಗಲಿ ಇರುವುದಿಲ್ಲ.

"............ನಾನು ಬಿರುದು ಪಡೆದು ನಮ್ಮ ದೇಶಕ್ಕೆ ಬಂದನಂತರ ಈರ್ಷ್ಯಾಪರರಾದ ನಿಮ್ಮಂಥವರೆಲ್ಲರೂ ಸೇರಿ ಗುಜುಗುಂಪಲು ಮಾಡಿ ಮನಸ್ವೀ ಹರಟುತ್ತಿದ್ದುದಾಗಿ ಆಗಾಗ್ಯೆ ನನಗೆ ಸಮಾಚಾರ ಬರುತ್ತಿತ್ತು. ಈ ನಿಮ್ಮ ಹರಟೆಗಳನ್ನು ಅಡಗಿಸುವುದಕ್ಕಾಗಿಯೇ ಶ್ರೀ ಪಂಡಾರಸನ್ನಿಧಾನದವರು ಪುನಃ ನನ್ನನ್ನು ತಿರುವಡಮರ್ದೂರಿನಲ್ಲಿ ಕಳೆದ ಮೇ ತಿಂಗಳಿನಲ್ಲಿ ನಡೆದ ತಿರುಕಲ್ಯಾಣ ಮಹೋತ್ಸವಕ್ಕೆ ಕರೆಸಿ ಶ್ರೀ ಮಹಾಲಿಂಗಸ್ವಾಮಿ ದೇಸ್ಥಾನದಲ್ಲಿ ನನ್ನ ಗಾಯನವನ್ನು ಎರಡು ದಿವ್ಸಗಳು ಮಾಡಿಸಿದರು. ಎರಡನೇ ದಿನ ನನ್ನ ವಿನಿಕೆಯಾಗುವಾಗ ಸಭೆಯಲ್ಲಿ ನೀವೂ ನನ್ನ ಎದುರಿಗೇ ಕುಳಿತಿದ್ದಿರಿ. ಆಗ ನೀವು ನಾನು ಅಶಾಸ್ತ್ರೀಯವಾಗಿ ಹಾಡುವ ವಿಷಯವನ್ನಾಗಲೀ ಹಿಂದೆ ಶ್ರೀ ಪಂಡಾರ ಸನ್ನಿಧಾನದವರು ನನಗೆ ಗಾಯಕ ಶಿಖಾಮಣಿ ಎಂಬ ಬಿರುದನ್ನು ಕೊಟ್ಟಿರುವುದು ಸಲ್ಲದೆಂಬ ವಿಷಯವನ್ನಾಗಲೀ ಪ್ರಸ್ತಾಪಿಸಿ, ಚರ್ಚಿಸಿ, ಬಿರುದನ್ನು ಕಿತ್ತು

ಹಾಕಲಿಲ್ಲವೇತಕ್ಕೆ ? ಆಗ ನಿಮಗೆ ಅಷ್ಟು ಜ್ಞಾನವೂ, ಯೋಗ್ಯತೆಯೂ, ಶಕ್ತಿಯೂ ಇಲ್ಲದ್ದು ಈಗ ಪ್ರಾಪ್ತವಾಯಿತೇ? ನನ್ನ ನಿಮ್ಮ ಯೋಗ್ಯತಾ ತಾರತಮ್ಯಗಳ ವಿಷಯವು ಹಿಂದೆ ಮೈಸೂರಿನಲ್ಲಿ ವೈಣಿಕ ಶಿಖಾಮಣಿ ಮ|| ರಾ|| ಶೇಷಣ್ಣನವರ ಮನೆಯಲ್ಲಿ ನಡೆದ ಸಭೆಯಲ್ಲಿಯೂ ಮತ್ತು ಬೆಂಗಳೂರು ಸಿದ್ದಿಕಟ್ಟೆಯಲ್ಲಿ ಮ|| ರಾ|| ಅಡ್ವೋಕೇಟ್ ಕೃಷ್ಣಮೂರ್ತಿ ರಾಯರು ಮುಂತಾದ ದೊಡ್ಡ ಮನುಷ್ಯರು ಮತ್ತು ಅನೇಕ ಸಂಗೀತ ವಿದ್ವಾಂಸರು ನೆರೆದಿದ್ದ ಸಭೆಯಲ್ಲಿಯೂ ವಿಮರ್ಶೆಯಾಗಿ ನಿಮಗೆ ಉಂಟಾದ ಅಪಜಯವನ್ನು ಮರೆತಿರುವಂತೆ ತೋರುತ್ತೆ.

"..........ನೀವು ಪಂಡಾರ ಸನ್ನಿಧಿಯಲ್ಲಾಗಲೀ ಅಥವಾ ನಮ್ಮ ಶ್ರೀಮನ್ಮಹಾರಾಜರ ಆಸ್ಥಾನದಲ್ಲಾಗಲೀ ಸಭೇ ಸೇರಿಸುವ ಪಕ್ಷಕ್ಕೆ ನಾನು ಬರಲು ಸಿದ್ಧನಾಗಿದ್ದೇನೆ. ಹಾಗೆ ಮಾಡದೆ ಬರಿ ಪೊಳ್ಳು ಬರವಣಿಗೆ ಬರೆದರೆ ಪುನಃ ನಿಮಗೆ ಜವಾಬು ದೊರಕಲಾರದು."

ಅಡಿಗಡಿಗೆ ಒದಗುತ್ತಿದ್ದ ಈ ವಿಧವಾದ ಕಿರುಕುಳಗಳಿಂದ ಕೃಷ್ಣಪ್ಪ ನವರ ವಿದ್ವತ್ತು ಹೆಚ್ಚು ಪ್ರಕಾಶಕ್ಕೆ ಬರಲವಕಾಶವಾಯಿತೇ ವಿನಾ ಅವರ ಧೈರ್ಯೋತ್ಸಾಹಗಳಿಗೆ ಯಾವ ವಿಧವಾದ ಧಕ್ಕೆಯನ್ನೂ ತರಲಿಲ್ಲ.

ಸ್ಥಳ ಪರಸ್ಥಳಗಳಲ್ಲಿ ಪ್ರಖ್ಯಾತಿ ಪಡೆದ ಕೃಷ್ಣಪ್ಪನವರಿಗೆ ಆಸ್ಥಾನ ದಲ್ಲೂ ಸೂಕ್ತ ಮರ್ಯಾದೆ ಮಾಡಲಾಯಿತು. ಸಂಸ್ಥಾನದ ಗೌರವ ಪ್ರತಿಷ್ಠೆಗಳನ್ನು ಹೆಚ್ಚಿಸಿದ ಕೃಷ್ಣಪ್ಪನರಿಗೆ 'ಗಾನವಿಶಾರದ'ರೆಂಬ ಅನ್ವರ್ಥ ವಾದ ಬಿರುದನ್ನು ಪ್ರಭುಗಳು ದಯಪಾಲಿಸಿದರು. ಕೃಷ್ಣಪ್ಪನವರು ಮಹಾ ಸ್ವಾಮಿಯವರಿಗೆ ಅಚ್ಚುಮೆಚ್ಚಾದರು. ಒಮ್ಮೆ ಒಂದು ಸ್ವಾರಸ್ಯವಾದ ಪ್ರಸಂಗ ಜರುಗಿತು. ಯುವರಾಜರ ಮದುವೆ. ಪ್ರತಿಯೊಬ್ಬ ವಿದ್ವಾಂಸರೂ ಆಶೀರ್ವಾದಪೂರ್ವಕವಾದ ಒಂದೊಂದು ನವರತ್ನರಾಗಮಾಲಿಕೆಯನ್ನು ರಚಿಸಿ ಒಪ್ಪಿಸಬೇಕೆಂದು ದೊರೆಗಳ ಅಪ್ಪಣೆಯಾಯಿತು. ಕೃಷ್ಣಪ್ಪನವರಿಗೆ ಸ್ವಲ್ಪ ಪೇಚಾಟಕ್ಕಿಟ್ಟುಕೊಂಡಿತು. ಏಕೆಂದರೆ ಅಲ್ಲಿಯವರೆಗೆ ಅವರು ಯಾವ ಕವಿತ್ವವನ್ನೂ ಮಾಡಿದ್ದಿಲ್ಲ. ಮನೆಗೆ ಹಿಂತಿರುಗುವಾಗ ಎಂಭತ್ತು ಹಾಳೆಯ ಒಂದು ಎಕ್ಸರ್‌ಸೈಜ್ ಪುಸ್ತಕವನ್ನೂ ಎರಡು ಸೀಸದ ಕಡ್ಡಿಗಳನ್ನೂ ಕೊಂಡುಕೊಂಡರು. ಮನೆಗೆ ಹೋಗಿ, ಕೈಕಾಲು ತೊಳೆದುಕೊಂಡು, ಮಡಿಯುಟ್ಟು, ದೇವರಮನೆ ಹೊಕ್ಕರು. ಎಕ್ಸರ್‌ಸೈಸ್ ಪುಸ್ತಕವನ್ನು ದೇವರಮುಂದಿಟ್ಟು ಅರಿಸಿನ ಕುಂಕುಮವನ್ನು ಅದರ ಮೇಲೆ ಹಾಕಿದರು.

ಮೊದಲನೆಯ ಹಾಳೆಯಲ್ಲಿ ದಪ್ಪ ಅಕ್ಷರದಲ್ಲಿ "ಶ್ರೀ" ಎಂದು ಬರೆದರು. ಕವಿತ್ವ ಮಾಡಲು ಸ್ಫೂರ್ತಿಗಾಗಿ ಶಾರದೆಯ ಪಟವನ್ನು ನೋಡುತ್ತ ಬಲು ಹೊತ್ತು ಕುಳಿತರು. ದೇವಿಯ ಅನುಗ್ರಹ ಅಷ್ಟು ಸುಲಭವಾಗಿ ಪ್ರಾಪ್ತ ವಾಗುವ ಸೂಚನೆಗಳು ಕಂಡು ಬರಲಿಲ್ಲವಂತೆ. ಮತ್ತೆ ಧಾವಿಸಿದರು ಕೃಷ್ಣಪ್ಪ ಅರಮನೆಗೆ. "ಮಹಾಸ್ವಾಮಿಯವರು ಮನ್ನಿಸಬೇಕು. ನನ್ನಿಂದ ಕವಿತ್ವ ಸಾಧ್ಯವಿಲ್ಲ. ಅಪ್ಪಣೆಯಾದರೆ ಕವಿತ್ವವನ್ನು ಯಾರಿಂದಲಾದರೂ ಮಾಡಿಸಿ, ಅದಕ್ಕೆ ಸ್ವರಸಂಯೋಜನೆ ಮಾಡಲೆತ್ನಿಸುತ್ತೇನೆ" ಅಂತ ಅರಿಕೆ ಮಾಡಿಕೊಂಡರು. ಪ್ರಭುಗಳ ಮುಖದ ಮೇಲೆ ಒಂದು ಎಳೆನಗು ಮಿಂಚಿ ಮಾಯವಾಯಿತು. "ಹಾಗೆಯೇ ಮಾಡಿ ಕೃಷ್ಣಪ್ಪನವರೇ" ಎಂದರು. ತೆಲಗು ಪಂಡಿತರಾದ ಕೊಪ್ಪರಂ ಅಪ್ಪಾವುಶೆಟ್ಟರಿಂದ ಕವಿತ್ವಮಾಡಿಸಿ ಕೃಷ್ಣಪ್ಪ ವರ್ಣಮಟ್ಟನ್ನು ಹಾಕಿದರು. ಆಗದ ಕೆಲಸಕ್ಕೆ ಎಂದೂ ಕೈ ಹಾಕಲಿಲ್ಲ ಕೃಷ್ಣಪ್ಪ; ಕೈ ಹಾಕಿದ ಕೆಲಸವನ್ನು ಎಂದೂ ಪೂರೈಸದೇ ಬಿಡುತ್ತಿರಲಿಲ್ಲ.

ಆಡಿದ ಮಾತನ್ನು ಎಂದಿಗೂ ಮೀರುತ್ತಿರಲಿಲ್ಲ ಕೃಷ್ಣಪ್ಪನವರು ಅನ್ನುವುದನ್ನು ಧೃಢೀಕರಿಸುವ ಈ ಸಂಗತಿ ಬಹು ಸ್ವಾರಸ್ಯವಾಗಿದೆ. ಒಮ್ಮೆ ಕೃಷ್ಣಪ್ಪನವರ ಕಛೇರಿ ತಿರಮುಕೂಡ್ಲು ನರಸೀಪುರದ ದೇವಸ್ಥಾನ ದಲ್ಲಿ ಪ್ರಾರಂಭವಾಗಿತ್ತು. ಪ್ರಚಂಡ ಸಭೆ ಸೇರಿತ್ತು. ಕೃಷ್ಣಪ್ಪನವರಿಗೆ ತಮ್ಮ ವಿಸಿಕೆಯಲ್ಲಿ ಮನಸ್ಸೇ ಇಲ್ಲದಿದ್ದಂತೆ ಭಾಸವಾಗುತ್ತಿತ್ತು. ಕ್ಷಣ ಕ್ಕೊಂದು ಬಾರಿ ಸುತ್ತಮುತ್ತ ತಿರುಗಿ ನೋಡುತ್ತಿದ್ದಾರೆ; ಅವರ ಅರಿವಿಲ್ಲ ದೆಯೇ ಯಂತ್ರದಂತೆ ಶಾರೀರದಿಂದ ನಾದಬಿಂದುಗಳು ಹೊರಹೊಮ್ಮು ತ್ತಿದ್ದವು ಅಷ್ಟೆ. ಕೃಷ್ಣಪ್ಪನವರ ಮನೋಧರ್ಮ ಎಂದಿನಂತಿಲ್ಲವೆಂಬುದು ಸಭಿಕರಿಗೆ ಬಹು ಬೇಗ ಮನದಟ್ಟಾಯಿತು. ಆದರೆ ಕಾರಣವೇನೆಂಬುದು ಯಾರಿಗೂ ಅರ್ಥವಾಗಲಿಲ್ಲ. ಸ್ವಲ್ಪ ಹೊತ್ತಾದ ನಂತರ ಸಭೆಯಲ್ಲಿ ಎದುರಿಗೆ ಕಂಭವನ್ನೊರಗಿಕೊಂಡು ಕೂತಿದ್ದ ವೃಧ್ಧರೊಬ್ಬರಿಗೆ ಕೃಷ್ಣಪ್ಪನವರ ಮನೋ ವ್ಯಾಕುಲತೆಗೆ ಕಾರಣ ತಿಳಿದಂತೆ ಕಂಡುಬಂತು. ಸೊಂಟಕ್ಕೆ ಸಿಕ್ಕಿಸಿ ಕೊಂಡಿದ್ದ ನಶ್ಯದ ಡಬ್ಬಿಯನ್ನು ತೆಗೆದು ಶಾಸ್ತ್ರೋಕ್ತವಾಗಿ ನಶ್ಯವನ್ನು ತೀಡಿ ಕೃಷ್ಣಪ್ಪನವರ ಮುಂದೆ ಕೈ ನೀಡಿದರು. ಅಂದು ಕೃಷ್ಣಪ್ಪನವರು ತಮ್ಮ ನಶ್ಯದ ಡಬ್ಬಿಯನ್ನು ಮನೆಯಲ್ಲೇ ಮರೆತು ಬಂದು ಪರದಾಡು

ತ್ತಿದ್ದರು. ನಶ್ಯದ ಚುಟಕೆಯನ್ನು ನೋಡುತ್ತಲೇ ಚಟ, ಚಪಲ ಅಧಿಕ ಗೊಂಡಿತು. ಆದರೆ ಹಿರಿಯರಿಂದ ನಶ್ಯವನ್ನು ತೆಗೆದುಕೊಂಡು ಅವರೆದುರಿಗೇ ಹಾಕಿಕೊಳ್ಳುವುದು ಮರ್ಯಾದೆಯಲ್ಲವೆಂದೆಣಿಸಿದರು. ಬಹು ಗೌರವವಾಗಿ "ಕ್ಷಮಿಸಬೇಕು, ಯಜಮಾನರು. ನಾನು ನಶ್ಯಹಾಕುವ ಪದ್ಧತಿಯಿಟ್ಟಿಲ್ಲ." ಎಂದು ನುಡಿದರು. ಅವತ್ತು ಬಿಟ್ಟ ಈ ಅಭ್ಯಾಸವನ್ನು ಮತ್ತೆ ಪ್ರಾರಂಭಿಸಲೇ ಇಲ್ಲ ಕೃಷ್ಣಪ್ಪನವರು.

ಗುಣಗ್ರಾಹಿಗಳು ಕೃಷ್ಣಪ್ಪ. ತೆರೆದ ಹೃದಯ ಅವರದ್ದು. ನನಗೂ ಕೃಷ್ಣಪ್ಪನವರಿಗೂ ಆಗಿಂದಾಗ್ಗೆ ವೈಮನಸ್ಯವನ್ನು ತಂದೊಡ್ಡಲು ಚಾಡಿ ಮಾತುಗಳನ್ನು ಅಲ್ಲಿಂದಿಲ್ಲಿಗೆ ಚುಚ್ಚುವ ಜನಕ್ಕೇನೂ ಕೊರತೆಯಿರಲಿಲ್ಲ ಆಗ್ಗೆ. ಆದಾಗ್ಯೂ ನನ್ನನ್ನು ಕಂಡರೆ ಬಲು ಗೌರವ, ಪ್ರೀತಿ, ವಿಶ್ವಾಸ ಕೃಷ್ಣಪ್ಪನವರಿಗೆ. ಪರಸ್ಥಳಗಳಿಗೆ ಅವರು ಹೋಗಿ ಹಲವಾರು ಕಛೇರಿಗಳನ್ನು ಮಾಡಿದ ಸಂದರ್ಭಗಳಲ್ಲಿ ಇವರ ಹಾಡುಗಾರಿಕೆಯನ್ನು ಮೆಚ್ಚಿ ಕೊಂಡಾಡಿದ ಜನರನ್ನು ಕುರಿತು "ನನ್ನ ಸಂಗೀತವನ್ನು ಕೇಳಿಯೇ ನೀವು ಇಷ್ಟು ಅಚ್ಚರಿಪಡುತ್ತಿದ್ದೀರಿ, ತಲೆತೂಗುತ್ತಿದ್ದೀರಿ. ನೀವು ಕೇಳಬೇಕಾದ ನಿಜವಾದ ಸಂಗೀತ ಬೇರೊಂದಿದೆ. ನಮ್ಮ ಆಸ್ಥಾನದಲ್ಲಿ ಸಂಗೀತ ಸಾಹಿತ್ಯಗಳೆರಡರಲ್ಲೂ ನಿಸ್ಸೀಮರಾದ ಹಿರಿಯರೊಬ್ಬರಿದ್ದಾರೆ ಮೈಸೂರಿನಲ್ಲಿ. ಅವರನ್ನೊಮ್ಮೆ ನೀವು ಬರಮಾಡಿಕೊಂಡು ಅವರ ಗಾನಪ್ರಭೆಯ ಅನುಭವ ಪಡೆಯಿರಿ" ಎಂದು ನನ್ನ ಪರವಾಗಿ ಅವರು ಬಹಿರಂಗ ಸಭೆಗಳಲ್ಲಾಡಿದ ಮಾತುಗಳು ಅನೇಕವೇಳೆ ಮೂರನೆಯವರ ಮುಖಾಂತರ ನನಗೆ ತಿಳಿದು ಬಂದಿದೆ. ಎಷ್ಟು ಜನ ವಿದ್ವಾಂಸರಿಗೆ ಇಷ್ಟು ಉದಾತ್ತಹೃದಯವಿರುತ್ತೆಂಬುದನ್ನು ಪ್ರಶ್ನಾರ್ಥಕವಾಗಿಯೇ ಬಿಟ್ಟರೆ ಮೇಲು.

ಒಂದು ದಿನ ಶೇಷಣ್ಣನವರ ಮನೆಯಲ್ಲಿ ನನ್ನ ಸಂಗೀತ. ಅಂದೇ ಮುಗಿದಿದ್ದ ಖರಹರಪ್ರಿಯರಾಗದ "ಗಾನಸುಧಾರಸ" ಎಂಬ ಕೀರ್ತನೆಯನ್ನು ಹಿರಿಯರಲ್ಲಿ ಸಮರ್ಪಣೆಮಾಡುವ ಉದ್ದೇಶದಿಂದ ಹಾಡತೊಡಗಿದೆ. ನನ್ನ ಜೊತೆಯಲ್ಲಿ ವೀಣೆ ಲಕ್ಷ್ಮೀನಾರಣಪ್ಪನವರೂ ಹಾಡುತ್ತಿದ್ದರು. ಆ ಕೀರ್ತನೆಯಲ್ಲಿ "ತ್ಯಾಗರಾಜ" ಮತ್ತು "ವಾಸುದೇವ" ಎಂಬ ಎರಡು ಪದಗಳೂ ಪ್ರಯೋಗಿಸಲ್ಪಟ್ಟಿವೆ. ಶೇಷಣ್ಣ ಕೃಷ್ಣಪ್ಪನವರ ಮಧ್ಯೆ ಕೀರ್ತನೆ ಯಾರ ರಚನೆ ಎಂಬ ವಿಷಯವಾಗಿ ಜಿಜ್ಞಾಸೆ ಉದ್ಭವವಾಯಿತು. "ತ್ಯಾಗರಾಜರದ್ದೇ ಇರಬೇಕೆಂದು" ಕೃಷ್ಣಪ್ಪನವರು, 'ಇಲ್ಲ ಆಚಾರ್ಯ

ರದೇ ಇರಬೇಕು' ಎಂದು ಶೇಷಣ್ಣನವರು. ಕೀರ್ತನೆ ಹಾಡಿ ಮುಗಿಸಿದ ಮೇಲೆ, ಅದನ್ನೇ ಮತ್ತೊಮ್ಮೆ ಹಾಡಬೇಕೆಂದು ಸೂಚಿಸಿದರು. ಮತ್ತೆ ಹಾಡಿದೆ. "ಯಾರದ್ದು ಆಚಾರ್ಯರೇ ಈ ಕೀರ್ತನೆ?" ಅಂತ ಕೇಳಿದರು ಶೇಷಣ್ಣ. "ತಮ್ಮ ಅನುಗ್ರಹಬಲದಿಂದ ಇದೇ ತಾನೇ ನನ್ನಿಂದ ದೇವರು ಮಾಡಿಸಿದ್ದು. ಲೋಪದೋಷಗಳೇನಾದರೂ ಇದ್ದಲ್ಲಿ ತಿದ್ದಿಕೊಳ್ಳಲು ಸಿದ್ಧನಿದ್ದೇನೆ" ಎಂದೆ. "ಈ ಸಂಗೀತ ಕೇಳಿದಮೇಲೆ ನನಗೆ ಊಟಉಪಚಾರಗಳಾವುವೂ ಬೇಕಿಲ್ಲ. ನನ್ನ ಕೃಷ್ಣದೇವರ ಬಳಿ ನಾನು ಮಲಗುತ್ತೇನೆ" ಎಂದರು ಶೇಷಣ್ಣ. ಕೃಷ್ಣಪ್ಪನವರು ಎದ್ದು ನಿಂತು, ಶೇಷಣ್ಣನವರನ್ನುದ್ದೇಶಿಸಿ "ಗುರುಗಳೇ, ಈ ದಿನ ನನ್ನ ಕೈಯಿಂದ ಆಚಾರ್ಯರಿಗೆ ಪುಷ್ಪಮಾಲೆಯನ್ನು ಹಾಕಬೇಕೆಂಬ ಅಭಿಲಾಷೆಯಿದೆ. ದಯವಿಟ್ಟು ಅನುಮತಿ ಕೊಡಬೇಕು" ಅಂತ ಕೇಳಿಕೊಂಡರು. "ಅದೆಂದಿಗೂ ಸಾಧ್ಯವಿಲ್ಲ. ಇವತ್ತು ನಾನೇ ಹಾರವನ್ನು ಹಾಕುತ್ತೇನೆ" ಅಂದರು ಶೇಷಣ್ಣ. ಇಬ್ಬರೂ ಹಾರವನ್ನು ಹಿಡಿದೆಳೆದಾಡಿದರು. ಕೊನೆಗೆ ಶೇಷಣ್ಣನವರು ಹಾರವನ್ನು ಮೊದಲು ಹಾಕಿದಮೇಲೆ ಅದನ್ನೇ ತೆಗೆದು ಕೃಷ್ಣಪ್ಪ ಮತ್ತೆ ಹಾಕಿ ಆನಂದಬಾಷ್ಪಧಾರೆ ಸುರಿಸಿದರು. ಸಭೆ ಚೆದುರಿದ ಮೇಲೆ "ಆಚಾರ್ಯರೇ, ದಕ್ಷಿಣ ದೇಶದಲ್ಲಿ ಹುಟ್ಟುವುದರ ಬದಲು ಈ ಕೊಂಪೆಯಲ್ಲಿ ನಿಮ್ಮ ಜನ್ಮವನ್ನು ವ್ಯರ್ಥಗೊಳಿಸುತ್ತಿದ್ದೀರಲ್ಲ!" ಎಂದು ಬಹುವಾಗಿ ಮರುಗಿದರು. ಹಾಲನ್ನು ತರಿಸಿ ಅವರೇ ಒಂದು ಲೋಟಕ್ಕೆ ಬಗ್ಗಿಸಿ ನನ್ನ ಮುಂದಿಟ್ಟರು. "ಇಲ್ಲ, ಹಸಿವಿಲ್ಲ" ಎಂದೆ ನಾನು. "ಆಚಾರ್ಯರೇ, ನಿಮ್ಮ ಮನಸ್ಸಿನಲ್ಲಿರುವ ಶಂಕೆ ಅರ್ಥವಾಯಿತು ನನಗೆ. ಇಲ್ಲಿ ಕೊಡಿ ಆ ಲೋಟವನ್ನು. ಮೊದಲು ಅದರಲ್ಲಿ ಅರ್ಧವನ್ನು ಬೇರೆ ಲೋಟಕ್ಕೆ ಬಗ್ಗಿಸಿಕೊಂಡು ನಾನು ಕುಡಿಯುತ್ತೇನೆ. ಹತ್ತು ನಿಮಿಷಗಳನ್ನು ಬಿಟ್ಟುಕೊಂಡು, ನಿಮಗೆ ಅನುಮಾನ ಪರಿಹಾರವಾದ ಮೇಲಾದರೂ ಈ ಹಾಲನ್ನು ಕುಡಿಯಬಹುದಲ್ಲ!" ಎಂದರು. ನಮ್ಮಿಬ್ಬರ ಕಣ್ಣುಗಳಲ್ಲೂ ಹನಿ ತುಂಬಿಬಂತು. "ಆಚಾರ್ಯರೇ, ಚಾಡಿಕೋರರ ಮಾತುಗಳನ್ನು ಕಿವಿಗೆ ಹಾಕಿಕೊಳ್ಳಬೇಡಿ. ನಿಮ್ಮ ವಿಷಯದಲ್ಲಿ ನನಗೆ ಯಾವ ಭಾವನೆ ಇದೆಯೆಂಬುದನ್ನು ನನ್ನ ಹೃದಯವನ್ನು ಸೀಳಿ ನೋಡಲು ಸಾಧ್ಯವಾದರೆ ನೋಡಿ" ಎಂದು ಅತಿಯಾಗಿ ನೊಂದು

ಕೊಂಡರು. ಇಬ್ಬರ ಹೃದಯಗಳೂ ಬೆರತು ಒಂದಾದವು. ಅಂದು ರಾತ್ರಿ ಬಹಳ ಹೊತ್ತು ಹಾಡುತ್ತ, ಲೋಕಾಭಿರಾಮವಾದ ಮಾತುಗಳನ್ನಾಡುತ್ತ ಶೇಷಣ್ಣನವರಂತೆ, ದೇವರ ಬಳಿಯೇ ಮಲಗಿದೆವು. ನನ್ನ ಜೀವಮಾನ ದಲ್ಲೇ ಅದೊಂದು ರಸದಿವಸ.

ದಿನದಲ್ಲಿ ಮುಕ್ಕಾಲು ಭಾಗವನ್ನೆಲ್ಲ ಶಿಷ್ಯಂದಿರಿಗೆ ವಿದ್ಯಾದಾನ ಮಾಡುವುದರಲ್ಲೇ ಕಳೆಯುತ್ತಿದ್ದರು ಕೃಷ್ಣಪ್ಪನವರು. ರಾಮಮಂದಿರದಲ್ಲಿ ಶಿಷ್ಯರಿಗೆ ಪಾಠ ನಡೆಯುತ್ತಿತ್ತು. ಬೆಳಿಗ್ಗೆ ಐದು ಘಂಟೆಗೆ ಪ್ರಾರಂಭಮಾಡಿ ಮಧ್ಯಾಹ್ನ ಹನ್ನೆರಡು ಘಂಟೆಯವರೆಗೂ ಪಾಠ ಹೇಳುತ್ತಿದ್ದರು. ಮತ್ತೆ ಸಂಜೆ ಐದು ಘಂಟೆಯಿಂದ ರಾತ್ರಿ ಒಂಬತ್ತು ಘಂಟೆಯವರೆಗೂ ಪಾಠ ಪ್ರವಚನಗಳು ಜರುಗುತ್ತಿದ್ದವು. "ವಿದ್ಯೆ ಸುಲಭವಾಗಿ ದಕ್ಕುವ ಸ್ವತ್ತಲ್ಲ. ಅದಕ್ಕಾಗಿ ಒಂದು ತಪಸ್ಸೇ ಅಗತ್ಯವೆಂದು ಬೋಧಿಸುತ್ತಿದ್ದರು. ನನಗೆ ಪಾಠವಾದ ಕ್ರಮದಲ್ಲಿ ನನಗೆ ಸರಿಯೆಂದು ತೋಚಿದಷ್ಟನ್ನು ನಿಮಗೆ ಹೇಳಿ ಕೊಡುತ್ತೇನೆ. ದೇವರು ಕೊಟ್ಟಿರುವ ಬುದ್ಧಿಯನ್ನು ಪಯೋಗಿಸಿಕೊಂಡು ಅದನ್ನು ಊರ್ಜಿತಗೊಳಿಸಿಕೊಳ್ಳುವುದು ನಿಮ್ಮ ಕೆಲಸ. ಹಳೆಯದನ್ನುಳಿಸಿ ಕೊಂಡು ಹೊಸ ಹೊಸ ಹಾದಿಯಲ್ಲಿ ಹೆಜ್ಜೆ ಹಾಕಲು ಪ್ರಯತ್ನಿಸಿ" ಎಂಬಿವೇ ಮೊದಲಾದ ವಿವೇಕಗಳನ್ನು ಹೇಳುತ್ತಿದ್ದರು. ತಮ್ಮ ಬಾಲ್ಯದ ಕಷ್ಟ ಸುಖಗಳನ್ನೆಲ್ಲಾ ಶಿಷ್ಯರಲ್ಲಿ ಹೇಳಿಕೊಂಡು ಮುಂದೆ ಬರಬಹುದಾದ ಎಡರು ತೊಡರುಗಳ ಬಗ್ಗೆ ಎಚ್ಚರಿಕೆ ಕೊಡುತ್ತಿದ್ದರು. ನಮ್ಮ ನಾಡಿಗೆ ಚಿರಕೀರ್ತಿಯನ್ನು ಸಂಪಾದಿಸಿಕೊಟ್ಟಿರುವ ಶ್ರೀಯುತ ಚೌಡಯ್ಯನವರು ಕೃಷ್ಣಪ್ಪನವರ ಶಿಷ್ಯವರ್ಗದಲ್ಲಿ ಪ್ರಮುಖರು. ತಮ್ಮ ಹದಿನಾಲ್ಕನೇ ವಯಸ್ಸಿನಲ್ಲಿ ಕೃಷ್ಣಪ್ಪನವರಲ್ಲಿ ಆಶ್ರಯಪಡೆದು ಇಪ್ಪತ್ತೊಂದು ವರ್ಷಗಳ ಕಾಲ ಅಖಂಡವಾಗಿ ಸಾಧಕಮಾಡಿ ಪಿಟೀಲು ವಾದ್ಯವನ್ನು ಮಾತನಾಡಿಸು ವಷ್ಟು ಅದರಮೇಲೆ ಸ್ವಾಮಿತ್ವವನ್ನು ಪಡೆದುಕೊಂಡರು ಚೌಡಯ್ಯನವರು. ಸ್ವಯಂ ತಾವೇ ಘನ ಪಿಟೀಲು ವಿದ್ವಾಂಸರಾಗಿದ್ದ ಕೃಷ್ಣಪ್ಪನವರು ಶಿಷ್ಯನು ನುಡಿಸುತ್ತಿದ್ದುದನ್ನು ಸುಲಭವಾಗಿ ಒಪ್ಪುತ್ತಿರಲಿಲ್ಲ. ಆ ಗುರುವಿಗೆ ತಕ್ಕ ಶಿಷ್ಯ ಈತ. ಚೌಡಯ್ಯನವರು ಪಕ್ಕವಾದ್ಯ ನುಡಿಸುವ ಯೋಗ್ಯತೆಯನ್ನು ಸಂಪಾ ದಿಸಿದ ದಿನದಿಂದ ಕೃಷ್ಣಪ್ಪನವರ ಕಛೇರಿಗಳಲ್ಲೆಲ್ಲಾ ಚೌಡಯ್ಯನವರದೇ ಪಕ್ಕ ವಾದ್ಯ. ಒಮ್ಮೆ ರಾಮಮಂದಿರದಲ್ಲಿ ಕೃಷ್ಣಪ್ಪನವರ ಹಾಡುಗಾರಿಕೆ,

ಚೌಡಯ್ಯನವರ ಪಿಟೀಲು. ಚೌಡಯ್ಯನವರು ಏನೋ ಸ್ವಲ್ಪ ತಪ್ಪು ನುಡಿಸಿದರಂತೆ. ಕೃಷ್ಣಪ್ಪನವರಿಗೆ ಕಣ್ಣು ಕೆಂಪಾಯಿತು. ಬಹಿರಂಗ ಸಭೆಯಲ್ಲಿ ಫಳೀರನೆ ಒಂದು ಏಟನ್ನು ಬೀರಿದರು ಚೌಡಯ್ಯನವರ ಕೆನ್ನೆಯ ಮೇಲೆ. ತಗ್ಗಿಸಿದ ಮುಖವನ್ನು ಮೇಲೆತ್ತಲಿಲ್ಲ, ಚೌಡಯ್ಯ. "ಇದೂ ಗುರು ಅನುಗ್ರಹವೇ" ಅಂದುಕೊಂಡು ಸುಮ್ಮನಾದರು. ಕಛೇರಿಯೆಲ್ಲ ಮುಗಿದ ನಂತರ ಶಿಷ್ಯನನ್ನು ಕುರಿತು ವಾತ್ಸಲ್ಯಭರಿತರಾಗಿ, "ಮನಸ್ಸಿಗೆ ಬೇಜಾರಾಯಿತೇನಯ್ಯ ? ದುಡುಕಿಬಿಟ್ಟೆ ನಾನು, ನಿನ್ನ ಮನಸ್ಸನ್ನು ನೋಯಿಸಬೇಕೆಂಬುದೇ ಆಗಲೀ ಸಭೆಯಲ್ಲಿ ನಿನ್ನನ್ನು ಅಪಮಾನಮಾಡಬೇಕೆಂಬುದೇ ಆಗಲೀ ನನ್ನ ಉದ್ದೇಶವಲ್ಲ. ಅಪಸ್ವರ ಅಪಲಯಗಳನ್ನು ಕೊಂಚವೂ ಸಹಿಸಲಾರದೆ ಸ್ಥೈರಣೆ ಮೀರಿ ನಿನ್ನಮೇಲೆ ಕೈಮಾಡಿದೆ" ಎಂದು ಅತಿಯಾಗಿ ಪರಿತಪಿಸಿದರು. ಆ ಶಿಷ್ಯನಲ್ಲಿ ಗುರುವಿಗಿದ್ದ ಅಪಾರ ಪ್ರೇಮ ಶ್ರದ್ಧೆ, ಗುರುಗಳಲ್ಲಿ ಶಿಷ್ಯನಿಗಿದ್ದ ಭಕ್ತಿಗೌರವಗಳ ಪುಣ್ಯಫಲವನ್ನು ಈಗ ಇಡೀ ಭಾರತವೇ ಸವಿಯುತ್ತಿದೆ. ಚೌಡಯ್ಯನವರ ಹೆಸರು ಇಂದು ಮನೆ ಮಾತಾಗಿದೆ.

ಕೃಷ್ಣಪ್ಪನವರ ಪ್ರಥಮ ಶಿಷ್ಯರು ರಾಜಪ್ಪನವರು. ಕೋಲಾರದ ನಾಗರತ್ನಮ್ಮ, ಬೆಂಗಳೂರು ನಾಗರತ್ನಮ್ಮನವರೂ ಕೃಷ್ಣಪ್ಪನವರ ಶಿಷ್ಯರೇ.

ತಮ್ಮ ಸಾಧಕ, ಶಿಷ್ಯರಿಗೆ ಪಾಠ ಪ್ರವಚನಗಳು— ಇವುಗಳಿಗಾಗಿ ಕಳೆದುಳಿದ ವೇಳೆಯನ್ನು ಕೂಡ ಕೃಷ್ಣಪ್ಪನವರು ವ್ಯರ್ಥಮಾಡುತ್ತಿರಲಿಲ್ಲ. ಮುನಿಸಿಪಲ್ ಕೌನ್ಸಿಲ್ ಸದಸ್ಯರಾಗಿ, ಅರಮನೆ ನಾಟಕದ ಕಂಪೆನಿಯ ಮ್ಯಾನೇಜರಾಗಿ ನಿಃಸ್ವಾರ್ಥಸೇವೆ ಸಲ್ಲಿಸಿದರು. ವಿರಾಮಕಾಲದಲ್ಲಿ ಮನೋರಂಜನೆಗಾಗಿ ಪಗಡೆ ಮತ್ತು ಇಸ್ಪೀಟು ಆಟವಾಡುತ್ತಿದ್ದರು. " ಕತ್ತೆ ಆಟ " ಆಡುವುದರಲ್ಲಿ ಕೃಷ್ಣಪ್ಪನವರಿಗೆ ಬಲು ಹಿಗ್ಗು. ನಾನು, ಕುಂದೂರು ಶ್ರೀಕಂಠಯ್ಯನವರು, ತಾಯೂರು ಶ್ರೀಕಂಠಯ್ಯನವರು, ತಬಲ ಸೂರಪಂಡಿತರು, ನಾಟಕದ ಲಕ್ಷ್ಮೀಪತಿ ಶಾಸ್ತ್ರಿಗಳು ಮುಂತಾದವರು ಆಟದಲ್ಲಿ ಭಾಗವಹಿಸುತ್ತಿದ್ದೆವು. ಆಟದ ಪಂಥ ಏನೂ ಅಂದರೆ, ಸೋತವನು ಸಿಪಾಯಿ ವೇಷವನ್ನು ಧರಿಸಿಕೊಂಡು, ಬಂದೂಕ ಹಿಡಿದುಕೊಂಡು, ಗೆದ್ದವನ ಮುಂದೆ ನಿಂತು ಸಲಾಮು ಮಾಡಬೇಕು. ಸಿಪಾಯಿಯಿಂದ ಎರವಲು ತಂದಿದ್ದ ಉಡುಪು ಮತ್ತು ಬಂದೂಕ ಯಾವಾಗಲೂ

ಸಿದ್ಧವಿರುತ್ತಿತ್ತು. ಒಂದು ದಿನ ಒಂದು ವಿನೋದಪ್ರಕರಣ ನಡೆಯಿತು. ಕೃಷ್ಣಪ್ಪನವರು ಸೋತಿದ್ದರು ಆಟದಲ್ಲಿ. ಸಿಪಾಯಿಯ ಉಡುಪನ್ನು ಹಾಕಿಕೊಳ್ಳುವ ಸಮಯ. ಅರಮನೆಯಿಂದ ಹರಿಕಾರನೊಬ್ಬ ಧಾವಿಸುತ್ತಬಂದು "ಈ ಕೂಡಲೇ ಬರಬೇಕು; ಸವಾರಿ ಅಪ್ಪಣೆಯಾಗಿದೆ" ಎಂದು ಕೃಷ್ಣಪ್ಪನವರಿಗೆ ತಿಳಿಸಿದ. ಅಷ್ಟಕ್ಕೇ ಸುಮ್ಮನಾಗಲಿಲ್ಲ ಆತ. ಅಲ್ಲೇ ನಿಂತ. ಕೃಷ್ಣಪ್ಪನವರಿಗೆ ಹರಿಕಾರನೆದುರಿಗೆ ನಾಟಕಾಭಿನಯಮಾಡಲು ಸಂಕೋಚವಾಯಿತು. "ನೀನು ಹೊರಡು, ಈಗಲೇ ಹೊರಟು ಬಂದೆ" ಎಂದರು ಕೃಷ್ಣಪ್ಪ. "ಪರವಾಯಿಲ್ಲ ರಾಯರೇ, ಇಲ್ಲೇ ಕಾದಿರುತ್ತೇನೆ. ಸಂಗಡಲೇ ಕರೆತರಬೇಕೆಂದು ಅಪ್ಪಣೆಯಾಗಿರುತ್ತೆ" ಎಂದು ಬೇರೂರಿ ನಿಂತ ಹರಿಕಾರ. ಉಪಾಯಾಂತರವಿಲ್ಲದೆಯೇ ಹಲ್ಲು ಕಟಕಟನೆ ಕಡಿಯುತ್ತ ಕೃಷ್ಣಪ್ಪನವರು ಸಿಪಾಯಿಯ ವೇಷವನ್ನು ಹಾಕಿಕೊಂಡು, ಬಂದೂಕವನ್ನು ಹೆಗಲಿಗೇರಿಸಿಕೊಂಡು ಗೆದ್ದವನ ಮುಂದೆ ನಮ್ರರಾಗಿ ನಿಂತು ಸಲಾಮು ಮಾಡಿದರು. ದುರುಗುಟ್ಟಿನ ದೃಷ್ಟಿ ಮಾತ್ರ ಹರಿಕಾರನ ಮೇಲೆಯೇ ಇತ್ತು. ಮೂಗನ್ನು ಒರಸಿಕೊಳ್ಳುವ ನೆಪದಲ್ಲಿ ಚಿಮ್ಮಿ ಬರುತ್ತಿದ್ದ ನಗೆಯನ್ನು ಹರಿಕಾರ ಮರೆಮಾಚಿಕೊಂಡ.

ಕೃಷ್ಣಪ್ಪನವರೂ ನಾನೂ ಜೊತೆಯಲ್ಲಿ ಹಾಡುವ ಸಂದರ್ಭಗಳು ಕೆಲವು ಒದಗಿಬಂದಿದ್ದವು. ಒಂದೊಂದು ಸಂದರ್ಭವೂ ಒಂದೊಂದು ವೈಶಿಷ್ಟ್ಯದಿಂದ ಕೂಡಿತ್ತು.

ಆಗ್ಗೆ ಶ್ರೀ ರಂಗಪಟ್ಟಣದಲ್ಲಿ ತುಂಟತನ, ಕುಹಕ ಬುದ್ಧಿಗೆ ಹೆಸರುವಾಸಿಯಾಗಿದ್ದ ಕೆಲವು ಜನರಿದ್ದರು. ಇಬ್ಬರ ನಡುವೆ ಕಲಹ ತಂದೊಡ್ಡುವುದು, ಸಭೆಗಳಲ್ಲಿ ಗೊಂದಲವೆಬ್ಬಿಸುವುದು, ಮತ್ತೊಬ್ಬರ ತೇಜೋವಧೆ ಮಾಡಿ ಅವಹೇಳನ ಮಾಡುವುದು, ಇವೇ ಆ ಜನರ ಮುಖ್ಯ ಕಸಬು. ಒಂದುಬಾರಿ ಶ್ರೀರಂಗಪಟ್ಟಣದಲ್ಲಿ ಒಂದು ಸಂತೋಷಕೂಟವೇರ್ಪಟ್ಟಿತ್ತು. ವೀಣೆ ಶೇಷಣ್ಣನವರು, ಕೃಷ್ಣಪ್ಪನವರು ಮತ್ತು ನನ್ನ ಸಂಗೀತಗಳು ಆಗಬೇಕೆಂದು ಗೊತ್ತಾಗಿತ್ತು. ಮೊದಲು ಶೇಷಣ್ಣನವರ ವೀಣೆ, ನನ್ನ ಹಾಡಿಕೆಯಾಯಿತು. ಅನಂತರ ಕೃಷ್ಣಪ್ಪನವರ ಸಂಗೀತ. ಭೈರವಿ ರಾಗಾಲಾಪನೆಯನ್ನು ಪ್ರಾರಂಭ ಮಾಡಿದರು. ಈ ಹೊತ್ತಿಗೆ ಸಭೆಯಲ್ಲಿ ಹಾಜರಿದ್ದ ದಿವಾನ್ ಮಾಧವರಾಯರೂ ಮತ್ತು ದಿವಾನ್ ಕೃಷ್ಣಮೂರ್ತಿಗಳೂ ಕಾರ್ಯ ಗೌರವದ ಸಲುವಾಗಿ ಸಭೆಯಿಂದ ಹೊರಬಿದ್ದರು. ಇದೇ

ಸಮಯವನ್ನು ನಿರೀಕ್ಷಿಸುತ್ತಿದ್ದ ಕುಹಕಿಗಳು ಸಭೆಯ ಗಾಂಭೀರ್ಯವನ್ನು ಕದಡಿದರು. ನನ್ನ ಹಿತೈಷಿಗಳು ಕೆಲವರು ಶ್ರೀರಂಗಪಟ್ಟಣದಲ್ಲಿ ನನ್ನ ಕಛೇರಿಯನ್ನು ಮಾಡಿಸಿ, ಕೃಷ್ಣಪ್ಪನವರಿಗೆ ಕೊಟ್ಟಿದ್ದಂತೆ, ನನಗೂ ಒಂದು ಘಂಟಾತೋಡವನ್ನು ಕೊಟ್ಟು ಗೌರವಿಸಬೇಕೆಂದು ಯೋಚಿಸಿದ್ದುದು ಈ ಜನಕ್ಕೆ ಹೇಗೋ ತಿಳಿದಿತ್ತು. "ಕೃಷ್ಣಪ್ಪನವರನ್ನೂ ವಾಸುದೇವಾಚಾರ್ಯರನ್ನೂ ಜೊತೆಯಲ್ಲಿ ಹಾಡುವಂತೆ ಮಾಡಿ ಇಬ್ಬರಲ್ಲಿ ಯಾರು ಹೆಚ್ಚು? ಯಾರು ಕಡಿಮೆ? ಎಂಬುದನ್ನು ನಿರ್ಧರಿಸಬೇಕು. ಇಬ್ಬರಿಗೂ ಸರಿಸಮಾನವಾದ ಯೋಗ್ಯತೆಯಿದೆ ಎಂದು ತೀರ್ಮಾನವಾದರೆ ಮಾತ್ರ ವಾಸುದೇವಾಚಾರ್ಯರಿಗೆ ಘಂಟಾತೋಡವನ್ನು ಕೊಡಿಸಬೇಕು. ಇಲ್ಲವಾದಲ್ಲಿ ಕೂಡದು" ಎಂದು ಜನ ಯೋಚಿಸಿದರು. ಇಬ್ಬರನ್ನೂ ಜೊತೆಯಲ್ಲಿ ಹಾಡಿ ಎಂದು ಹೇಳುವರಾರು? ಬಹಳ ಹೊತ್ತು ಚರ್ಚೆಯಾದಮೇಲೆ ಶೇಷಣ್ಣನವರನ್ನು ಸಭೆಯಿಂದ ಹೊರಗೆ ಕರೆದುಕೊಂಡು ಹೋಗಿ ಜನ ಹೇಳಿದರು, "ಇವತ್ತು ಕೃಷ್ಣಪ್ಪನವರೂ ಆಚಾರ್ಯರೂ ಜೊತೆಯಲ್ಲಿ ಹಾಡುವಂತೆ ತಾವು ಸೂಚಿಸಬೇಕು." "ಬೇಡ, ಅದು ಚೆನ್ನಾಗಿರುವುದಿಲ್ಲ. ಅಲ್ಲದೆ ಆಚಾರ್ಯರ ವಿನಿಕೆ ಈಗತಾನೇ ಮುಗಿದಿದೆ" ಅಂದರು ಶೇಷಣ್ಣ. ಜನ ಕೇಳಲಿಲ್ಲ. ಕೊನೆಗೆ ಶೇಷಣ್ಣನವರು ಸಭೆಯಲ್ಲಿ ಎದ್ದುನಿಂತು ಕೃಷ್ಣಪ್ಪ ನವರನ್ನೂ ನನ್ನನ್ನೂ ಉದ್ದೇಶಿಸಿ "ನೀವಿಬ್ಬರೂ ಜೊತೆಯಲ್ಲಿ ಹಾಡುವುದನ್ನು ಕೇಳಬೇಕೆಂದು ಮಹಾಜನರು ಅಪೇಕ್ಷಿಸುತ್ತಾರೆ. ನಿಮಗಿದೇನೂ ಹೊಸದಲ್ಲವಲ್ಲ, ಕೊಂಚ ಹಾಡಿ" ಎಂದರು. ಕೃಷ್ಣಪ್ಪನವರು ನನ್ನ ಮುಖವನ್ನೂ, ನಾನು ಅವರ ಮುಖವನ್ನೂ ನೋಡಿಕೊಂಡೆವು. ನಾನು ಮಾಮೂಲಿನಂತೆ ಕಂಠಪೂರ್ತಿಯಾಗಿ ಭೋಜನಮಾಡಿ ಸಂಕಟಪಡುತ್ತಿದ್ದೆ. ಕೃಷ್ಣಪ್ಪನವರಿಗೆ ಆಮಶಂಕೆಯಿಂದಾಗಿ ನಿಶ್ಶಕ್ತಿಯಾಗಿತ್ತು. "ದಯಮಾಡಿ ಆಚಾರ್ಯರೇ, ತಾವೂ ಕೊಂಚ ರಾಗಾಲಾಪನೆ ಮಾಡಿಬಿಡಿ. ಆಮೇಲೆ ಒಂದು ಪಲ್ಲವಿಯನ್ನು ಹಾಡಿ ಮುಗಿಸಿಬಿಡೋಣ" ಅಂದರು ಕೃಷ್ಣಪ್ಪ. ಭೈರವಿರಾಗಾಲಾಪನೆ ಮುಂದುವರೆಯಿತು. ಯಾವ ಪಲ್ಲವಿಯನ್ನೆತ್ತಿದರೆ ಯಾರಿಗೆ ಹೇಗೋ ಎಂಬುದು ಮುಂದಿನ ತೊಡಕಾಯಿತು. "ನೀವೇ ಭೈರವಿ ರಾಗವನ್ನು ಪ್ರಾರಂಭ ಮಾಡಿದ್ದಿರಿ. ಯಾವ ಪಲ್ಲವಿಯನ್ನು ಹಾಡಬೇಕೆಂದು ಉದ್ದೇಶಮಾಡಿದ್ದಿರೋ ಅದನ್ನೇ ಪ್ರಾರಂಭ ಮಾಡಿ" ಅಂದೆ ನಾನು. "ಸರಿ, ಹಾಗಾದರೆ" ಅಂತ ಹೇಳಿ

"ಮಾ ಮಧುರಾ ಮೀನಾಕ್ಷಿ" ಎಂಬ ಪಲ್ಲವಿಯನ್ನೆತ್ತಿದ್ದರು. ನೆರವಲ್ಲು, ಸ್ವರಕಲ್ಪನೆ ಕ್ರಮವಾಗಿ ಜರುಗಿತು. ಮಂಗಳವನ್ನು ಹಾಡಿ ಕಛೇರಿಯನ್ನು ಮುಕ್ತಾಯಮಾಡಿದೆವು. "ಏನು ಜನ ಆಚಾರ್ಯರೇ, ನಾವೇನೋ ಒಬ್ಬರನ್ನೊಬ್ಬರು ಅರಿತುಕೊಂಡಿದ್ದು, ಯಾವ ಸ್ಪರ್ಧೆಯನ್ನೇ ಆದರೂ ಎದುರಿಸುವ ಧೈರ್ಯಸಾಮರ್ಥ್ಯಗಳನ್ನು ನಮಗೆ ದೇವರು ಕರುಣಿಸಿರುವ ಕಾರಣ ಆಭಾಸಕ್ಕೆ ಅವಕಾಶವಾಗಲಿಲ್ಲ. ಇಲ್ಲದಿದ್ದರೆ ಗತಿ?" ಎಂದು ನನ್ನ ಕಿವಿಯಲ್ಲಿ ಕೃಷ್ಣಪ್ಪ ನುಡಿದರು. "ನನಗಾಗಿರುವ ಹಲವಾರು ಮರೆಯಲಾಗದ ವೇದಿಕೆಯ ಅನುಭವಗಳಲ್ಲಿ ಇದೂ ಒಂದಾಯಿತು, ಬಿಡಿ" ಎಂದೆ. ಅದೇ ದಿನ ರಾತ್ರಿ ಕೃಷ್ಣಪ್ಪನವರು ಗಣಪತಿ ಮಂಗಳಾರತಿಯ ಸಂದರ್ಭದಲ್ಲಿ ಅರಮನೆಯಲ್ಲಿ ಹಾಡಬೇಕಾಗಿತ್ತು. ಮೈಸೂರಿಗೆ ಹೊರಡಲೇಬೇಕು. ಆದರೆ ಊಟವಸತಿಗಳ ಮತ್ತು ಪ್ರಯಾಣದ ಏರ್ಪಾಡಿನ ಜವಾಬ್ದಾರಿಯನ್ನು ಹೊತ್ತಿದ್ದ ಸಂತೋಷಕೂಟದ ಮುಖಂಡರಲ್ಲಿ ಒಬ್ಬರ ತಲೆಯೂ ಕಂಡುಬರಲಿಲ್ಲ. ಸಭೆ ಮುಗಿಯುವ ವೇಳೆಗೆ ಎಲ್ಲರೂ ಅಲ್ಲಲ್ಲೇ ಮಾಯವಾಗಿದ್ದರು. ನಮ್ಮ ಗುಂಪಿನಲ್ಲಿ ಸುಮಾರು ಇಪ್ಪತ್ತು ಜನ. ಒಬ್ಬನ ಹತ್ತಿರವಾದರೂ ವಿಷ ತೆಗೆದುಕೊಳ್ಳುವುದಕ್ಕೆ ಒಂದು ಕುರುಡು ಕಾಸಿಲ್ಲ. ನಮ್ಮ ಅದೃಷ್ಟವಶಾತ್ ಅಲ್ಲಿನ ಸ್ಟೇಷನ್ ಮಾಸ್ಟರು ನಮಗೆ ಪರಿಚಯಸ್ಥರಾಗಿದ್ದರು. "ಏನೂ ಯೋಚಿಸಬೇಡಿ. ತಮ್ಮ ಸೇವೆಮಾಡುವ ಯೋಗ ಲಭಿಸಿದ್ದು ನನ್ನ ಪುಣ್ಯ ವಿಶೇಷ" ಎಂದು ಹೇಳಿ ನಮ್ಮೆಲ್ಲರಿಗೂ ಅವರೇ ಟಿಕೆಟ್ಟುಗಳನ್ನು ಕೊಂಡುಕೊಟ್ಟರು. ಈ ಘಟನೆಯಾಗಿ ಒಂದೆರಡು ತಿಂಗಳುಗಳಾಗಿದ್ದರೂ ನನಗಾಗಲೀ ಕೃಷ್ಣಪ್ಪನವರಿಗಾಗಲೀ ಶೇಷಣ್ಣನವರಿಗಾಗಲೀ ಪಕ್ಕವಾದ್ಯ ನುಡಿಸಿದ್ದ ತಬಲಾ ಚಿಕ್ಕರಂಗಣ್ಣನಿಗಾಗಲೀ ಕಛೇರಿಯ ಹಣವೇ ಬರಲಿಲ್ಲ. ಕೊನೆಗೆ ಲಾಯರು ನೋಟೀಸನ್ನು ಕೊಟ್ಟು ಹಣವನ್ನು ವಸೂಲು ಮಾಡಿದ್ದಾಯಿತು! ಈ ಮೊದಲೇ ಕೃಷ್ಣಪ್ಪನವರಿಗೆ ಶ್ರೀರಂಗಪಟ್ಟಣದಲ್ಲಿ ಒಂದು ಕಹಿ ಅನುಭವವಾಗಿತ್ತು. ಅವರ ಕಛೇರಿಯೊಂದು ಏರ್ಪಾಡಾಗಿ ನೂರು ರೂಪಾಯಿ ಸಂಭಾವನೆ ಮಾಡುವುದು ಎಂದು ಗೊತ್ತಾಗಿತ್ತು. ಕಛೇರಿಯಾದ ಮೇಲೆ ಒಂದು ಬೆಳ್ಳಿಯ ತಟ್ಟೆಯಲ್ಲಿ ತಾಂಬೂಲ ಸಮೇತವಾಗಿ ಎರಡು ಹಣದ ಕೋಟಾಗಳನಿಟ್ಟು ಕೃಷ್ಣಪ್ಪನವರಿಗೆ ಕೊಟ್ಟರು. ಊರಿಗೆ ಹಿಂತಿರುಗುವಾಗ್ಗೆ ತೋಟಾಗಳನ್ನು ಬಿಚ್ಚಿ ನೋಡಿದಾಗ ಎರಡು ತೋಟಾಗಳಲ್ಲೂ ಒಂದು ರೂಪಾಯಿ ನಾಣ್ಯ,

ಅದರ ಪಕ್ಕದಲ್ಲಿ ಒಂದು ಅರ್ಧಾಣೆ ನಾಣ್ಯ-ಹೀಗೆ ಜೋಡಿಸಿ 50 ರೂಪಾಯಿಗಳನ್ನೂ 50 ಅರ್ಧಾಣೆಗಳನ್ನೂ ಕೊಡಲಾಗಿತ್ತು. ಜನರ ಸಣ್ಣತನಕ್ಕಾಗಿ, ಕಲೆಗೆ ಆದ ದ್ರೋಹಕ್ಕಾಗಿ ಕೃಷ್ಣಪ್ಪನವರು ಬಹುವಾಗಿ ಪರಿತಪಿಸಿದ್ದರು. ಈ ಎರಡನೆಯ ಬರೆಬಿದ್ದಮೇಲೆ "ಇನ್ನು ನನ್ನ ಜನ್ಮವಿರುವವರೆಗೆ ಶ್ರೀರಂಗಪಟ್ಟಣದ ಕಡೆ ತಲೆ ಹಾಕಿ ಮಲಗುವುದಿಲ್ಲ, ಆಚಾರ್ಯರೇ" ಎಂದರು ಕೃಷ್ಣಪ್ಪ.

ಇನ್ನೊಂದಾವರ್ತಿ ಜೆಟ್ಟಿದಮೇಲೆ ತೆಪ್ಪೋತ್ಸವದಲ್ಲಿ ನಾನೂ ಕೃಷ್ಣಪ್ಪನವರೂ ಜೊತೆಯಲ್ಲಿ ಹಾಡಬೇಕೆಂದು ಮಹಾರಾಜರ ಅಪ್ಪಣೆಯಾಯಿತು. ಆಗಲೂ ಒಂದು ಪೇಚಾಟ ತಲೆದೋರಿತು. ನಾರಾಯಣಿ ರಾಗದ "ಮಹಿಷಾಸುರಮರ್ದಿನಿ" ಎಂಬ ದೀಕ್ಷಿತರ ಕೃತಿಯನ್ನು ಹಾಡುವಂತೆ ಹೇಳಿದರು ಪ್ರಭುಗಳು. ಇಬ್ಬರಿಗೂ ಆ ಕೀರ್ತನೆ ಪಾಠವಿರಲಿಲ್ಲ. "ಪಲ್ಲವಿಯ ಧಾಟಿ ಮಾತ್ರ ನನಗೆ ಗೊತ್ತು" ಎಂದು ಪಿಟೀಲು ನುಡಿಸುತ್ತಿದ್ದ ದೊಡ್ಡ ವೆಂಕಟರಮಣಯ್ಯನವರು ಹಾಡಿ ತೋರಿಸಿದರು. ಸರಿ ಅಂದಿದ್ದೆ, ತೆಪ್ಪ ಮಹಾಸ್ವಾಮಿಯವರಿದ್ದ ದಡದಿಂದ ಈಚೆ ದಡಕ್ಕೆ ಬಂದಾಗ ಆ ಪಲ್ಲವಿಯಷ್ಟನ್ನೇ ಗಟ್ಟಿಮಾಡಿಕೊಂಡು, ತೆಪ್ಪ ಮಹಾಸ್ವಾಮಿಯವರ ಹತ್ತಿರ ಹೋದ ಹೋದ ಹಾಗೆ ಕೃಷ್ಣಪ್ಪನವರು ಒಂದಾವರ್ತಸ್ವರ, ನಾನೊಂದಾವರ್ತಸ್ವರ ಹಾಡಿ ಪಲ್ಲವಿಯನ್ನೆತ್ತುತ್ತಿದ್ದೆವು. ತೆಪ್ಪ ಮಹಾರಾಜರಿಂದ ದೂರವಾಯಿತೆಂದರೆ ಸುಮ್ಮನಾಗುತ್ತಿದ್ದೆವು. ಹೀಗಾಗಿ ಅಂದಿನ ಪರೀಕ್ಷೆ ಮುಗಿಯಿತು. "ಸದ್ಯ ಬಡಜೀವ ಇಂದಿಗೆ ಬದುಕಿತು" ಅಂತಂದುಕೊಂಡು ಒಬ್ಬರನ್ನೊಬ್ಬರು ನೋಡಿ ನಕ್ಕೆವು. ಮಾರನೆಯ ದಿನವೇ ಬಂತು ಕರೆ ಇಬ್ಬರಿಗೂ ಅರಮನೆಯಿಂದ. "ನಿನ್ನೆ ತಾವು ಹಾಡಿದ ಕೀರ್ತನೆ ಬಲು ಸೊಗಸಾಗಿತ್ತು. ಅನುಪಲ್ಲವಿ, ಚರಣಗಳನ್ನೂ ಕೇಳಬೇಕೆಂಬ ಆಪೇಕ್ಷೆಯಿದೆ ನಮಗೆ. ಪೂರ್ತಾ ಕೀರ್ತನೆಯನ್ನು ಪಾಠಮಾಡಿಕೊಂಡು ನಾಳಿದ್ದು ಸಂಜೆ ಹಾಡಿದರೆ ಸಂತೋಷ" ಎಂದರು ಪ್ರಭುಗಳು. ತುಂಟು ನಗೆಯೊಂದು ತುಟಿಯಮೇಲೆ ಹರಿದಾಡುತ್ತಿತ್ತು. ನಮ್ಮಿಬ್ಬರ ಮುಖವೂ ಬಿಳುಪೇರಿ ಪೆಚ್ಚುನಗೆಯೊಂದು ಪ್ರಯತ್ನ ಪೂರ್ವಕವಾಗಿ ಹೊರ ಹೊಮ್ಮುತ್ತಿತ್ತು.

ಜ್ಯೋತಿಷ್ಯದ ಹುಚ್ಚು ಬಹಳ ಕೃಷ್ಣಪ್ಪನವರಿಗೆ. ತಿಂದದ್ದು ಜೀರ್ಣಿಸದೇ ಇದ್ದರೆ, ರಾತ್ರಿ ನಿದ್ದೆ ಚೆನ್ನಾಗಿ ಬಾರದೇ ಇದ್ದರೆ, ಜನ್ಮಕುಂಡಲಿಯನ್ನು ತೋರಿಸಿಬರುವಷ್ಟು ಜ್ಯೋತಿಷ್ಯದಲ್ಲಿ ಮಮತೆ ಮತ್ತು ನಂಬಿಕೆ. ಕೃಷ್ಣಪ್ಪನವರ ಹಿರಿಯ ಆಸೆಗಳ ಪೈಕಿ ಒಂದೆಂದರೆ ಪಾಶ್ಚಾತ್ಯದೇಶಗಳಿಗೆ ಹೋಗಿ ಕರ್ಣಾಟಕ ಸಂಗೀತದ ಪರಿಚಯವನ್ನು ಅಲ್ಲಿಯ ಜನತೆಗೆ ಮಾಡಿಕೊಡಬೇಕೆಂಬುದು. ಕಂಡಕಂಡ ಜೋಯಿಸರನ್ನೆಲ್ಲ ಪ್ರಶ್ನೆ ಕೇಳಿದರು. "ಹೋಗುವುದರಲ್ಲಿ ಸಂದೇಹವೇನೂ ಇಲ್ಲ, ಯೋಗಬಲವಿದೆ" ಎಂದು ಜ್ಯೋತಿಷ್ಕರೇನೋ ಭವಿಷ್ಯನುಡಿದರು. ಆದರೆ ಅವರ ಕನಸು ನನಸಾಗದೆಯೇ ಉಳಿಯಿತು. 1931 ನೇ ಜುಲೈ 29 ನೇ ತಾರಿಖು ಮಧ್ಯಾಹ್ನ ಎರಡು ಘಂಟೆಗೆ ಕೃಷ್ಣಪ್ಪನವರ ಇಹಲೋಕಯಾತ್ರೆ ಕೊನೆಗೊಂಡಿತು.

ಇಪ್ಪತ್ತೆರಡು, ಇಪ್ಪತ್ತನಾಲ್ಕು ಶ್ರುತಿಗಳ ಚರ್ಚೆಯ ಗೋಜಿಗೆ ಹೋದವರೇ ಅಲ್ಲ ಕೃಷ್ಣಪ್ಪ. "ಹನ್ನೆರಡು ಸ್ವರಗಳನ್ನು ಶುದ್ಧವಾಗಿ ಹಾಡಿ ಜಯಿಸಿಕೊಂಡರೆ ಸಾಕು" ಎನ್ನುತ್ತಿದ್ದರು. ಮೇಳಕರ್ತರಾಗಗಳು ಅವುಗಳಲ್ಲಿ ಜನ್ಯವಾದ ರಾಗಗಳಿಗೆ ಪುರಸ್ಕಾರವೀಯುತ್ತಿದ್ದಷ್ಟು ಭಾಷಾಂಗ ರಾಗಗಳಿಗಾಗಲೀ ದೇಶೀಯ ರಾಗಗಳಿಗಾಗಲೀ ಕೊಡುತ್ತಿರಲಿಲ್ಲ. ಇಂಥ ರಾಗಗಳ ಲಕ್ಷಣದ ವಿಷಯವಾಗಿ ನನ್ನನ್ನು ಯಾವ ಪ್ರಶ್ನೆಯನ್ನೂ ಕೇಳಬೇಡಿ ಎಂದು ಸ್ಪಷ್ಟವಾಗಿ ಹೇಳಿಬಿಡುತ್ತಿದ್ದರು. ಶಂಕಾರಾಭರಣ, ಕಲ್ಯಾಣಿ, ತೋಡಿ, ಭೈರವಿ ಇವೇ ಅವರಿಗೆ ಪ್ರಿಯವಾದ ರಾಗಗಳು. ನೂರೆಂಟು ತಾಳಗಳಲ್ಲಿ ಪಲ್ಲವಿಯನ್ನು ಹಾಡುವ ಸಾಮರ್ಥ್ಯ ಪಾಂಡಿತ್ಯಗಳಿದ್ದಾಗ್ಯೂ ಸಭೆಗಳಲ್ಲಿ ವಿಚಿತ್ರ ತಾಳದ ಕೆಲಸಗಳನ್ನು ಏಕಾಏಕಿಯಾಗಿ ಪ್ರದರ್ಶಿಸಿ ಪಕ್ಕವಾದ್ಯದವರಿಗಾಗಲೀ, ಸಭಿಕರಿಗಾಗಲೀ ಬೇಸರಮಾಡುತ್ತಿರಲಿಲ್ಲ. ಪುರಂದರದಾಸರ ದೇವರ ನಾಮಗಳನ್ನು ಕಛೇರಿಗಳಲ್ಲಿ ಹಾಡಲು ಪ್ರಾರಂಭ ಮಾಡಿದವರೇ ಕೃಷ್ಣಪ್ಪನವರು. ಕೈಬಿಟ್ಟು ಹೋಗುತ್ತಿದ್ದ ಈ ಅಮೂಲ್ಯ ರತ್ನಗಳನ್ನು ಅವರು ಮತ್ತೆ ನಮ್ಮ ಕಲಾಭಂಡಾರಕ್ಕೆ ಸೇರಿಸಿ ಕನ್ನಡಿಗರೆಲ್ಲರನ್ನೂ ತಮಗೆ ಋಣಿಗಳನ್ನಾಗಿ ಮಾಡಿಕೊಂಡರು.

# ರಾಮನಾಡ್ ಶ್ರೀನಿವಾಸಯ್ಯಂಗಾರ್ಯರು

ನಮ್ಮ ಪೂಜ್ಯ ಗುರುಗಳಾದ ಪಟ್ಣಂ ಸುಬ್ರಹ್ಮಣ್ಯಯ್ಯರ್ ಅವರ ಶಿಷ್ಯ ಪರಂಪರೆಯಲ್ಲಿ ಕೊನೆಯವನು ನಾನಾದರೆ ಮೊದಲನೆಯವರು ರಾಮನಾಡ್ ಶ್ರೀನಿವಾಸಯ್ಯಂಗಾರ್ಯರು. ಇವರನ್ನು "ಪೂಚಿ ಅಯ್ಯಂ ಗಾರ್ಯರು" ಎಂದೂ ಕರೆಯುವ ವಾಡಿಕೆಯಿದೆ. ಮೊಟ್ಟಮೊದಲು ನಾನು ಇವರನ್ನು ನೋಡಿದ್ದು ವೀಣೆ ಶೇಷಣ್ಣನವರ ಮನೆಯಲ್ಲಿ. ಆಗ ನಾನಿನ್ನೂ ವಿದ್ಯಾರ್ಥಿ ದೆಸೆಯಲ್ಲಿದ್ದೆ. ನಾಲ್ಕಾರು ವರ್ಣಗಳು ಮಾತ್ರ ಪಾಠವಾಗಿತ್ತು. ಆದಾಗ್ಯೂ ಅಯ್ಯಂಗಾರ್ಯರ ಹಾಡುಗಾರಿಕೆ ನನ್ನ ಮನಸ್ಸಿನಮೇಲೆ ಪ್ರಭಾವ ಬೀರಿ ಈ ಮೊದಲೇ ಮನದಲ್ಲಿ ಮೂಡಿದ್ದ ಪಟ್ಣಂ ಅವರಲ್ಲಿ ಸಂಗೀತಾಧ್ಯಯನ ಮಾಡಬೇಕೆಂಬ ಅಭಿಲಾಷೆಯನ್ನು ಇಮ್ಮಡಿಗೊಳಿಸಿತು. ಅಂದು ಅವರು ಶಂಕರಾಭರಣರಾಗದಲ್ಲಿ ಹಾಡಿದ ನಾಲ್ಕು ಕಳೆ ಚೌಕದ "ಮಂದಹಾಸವದನ" ಎಂಬ ಪಲ್ಲವಿಯನ್ನು ಇವತ್ತು ಕೇಳಿದಂತಿದೆ!

ರಾಮನಾಡಿನ ಭಾಸ್ಕರ್ ಸೇತೂಪತಿ ಮಹಾರಾಜರು ಅಯ್ಯಂಗಾರ್ಯರಲ್ಲಿದ್ದ ಕಲಾಸಕ್ತಿಯನ್ನೂ ಶ್ರದ್ಧೆಯನ್ನೂ ಮನಗಂಡು ಸಹಸ್ರಾರು ರೂಪಾಯಿಗಳನ್ನು ಪಟ್ಣಂ ಸುಬ್ರಹ್ಮಣ್ಯಯರ್ ಅವರಿಗೆ ಸಮರ್ಪಿಸಿ, ಶ್ರೀನಿವಾಸಯ್ಯಂಗಾರ್ಯರನ್ನು ಅವರ ಶಿಷ್ಯರನ್ನಾಗಿ ಅಂಗೀಕರಿಸುವಂತೆ ಕೋರಿದರು. ತರುಣನ ಭವಿಷ್ಯದ ಹೊಂಗನಸನ್ನು ಕಂಡ ಸುಬ್ರಹ್ಮಣ್ಯಯ್ಯರ್ ಅವರು ರಾಜರ ಅಭೀಷ್ಟವನ್ನು ನೆರವೇರಿಸಿ ಕೊಡಲು ಒಪ್ಪಿದರು. ಮನಬಿಚ್ಚಿ ಪಾಠಹೇಳಿದರು. ತಮ್ಮ ವಿದ್ಯಾನಿಷ್ಠೆಯಿಂದಲೂ ಗುರುಗಳ ಆಶೀರ್ವಾದಬಲದಿಂದಲೂ ಪೂಚಿಯವರು ಕೆಲವೇ ವರ್ಷಗಳಲ್ಲಿ ಉತ್ತಮ ಪಾಂಡಿತ್ಯವನ್ನು ಸಂಪಾದಿಸಿಕೊಂಡರು. ಹಲವಾರು ಕಛೇರಿಗಳ ಮೂಲಕ ಜನತೆಯ ಹಾಗೂ ವಿದ್ವಾಂಸರ ಪ್ರೀತಿಗೌರವಗಳನ್ನು ಸಂಪಾದಿಸಿಕೊಂಡರು. ಗುರುಗಳ ಮೇಲ್ಪಂಕ್ತಿಯನ್ನನುಸರಿಸಿ ಹಲವಾರು ಮನೋಹರವಾದ ಕೃತಿಗಳನ್ನು ರಚಿಸಿದರು. ತಾವು ರಚಿಸಿದ ಪ್ರತಿ ಕೀರ್ತನೆಯನ್ನೂ, ಗುರುಗಳಲ್ಲಿ ಸಮರ್ಪಿಸಿ ಅವರ ಆಶೀರ್ವಾದ ಪಡೆಯುತ್ತಿದ್ದರು. ಶಿಷ್ಯನ ಪಾಂಡಿತ್ಯವನ್ನೂ ನಮ್ರತೆಯನ್ನೂ ಕಂಡ ಗುರುಗಳಿಗೆ ಹೃದಯ ತುಂಬಿ ಬರುತ್ತಿತ್ತು. "ಚೆನ್ನಾಗಿ ಬಾಳು ನೀನು" ಎಂದು ಹರಸುತ್ತಿದ್ದರು ಗುರುಗಳು.

ಶೇಷಣ್ಣನವರೂ ವೀಣೆ ಸುಬ್ಬಣ್ಣನವರೂ ರಾಮನಾಡಿಗೆ ಹೋಗಿದ್ದಾಗ ಅವರ ಜೊತೆಯಲ್ಲೇ ಇದ್ದ ನಾನು ಶ್ರೀನಿವಾಸಯ್ಯಂಗಾರ್ಯರನ್ನು ನೋಡುವ ಸಂದರ್ಭ ಮತ್ತೆ ಒದಗಿತು. ಮೈಸೂರು ಅರಸರ ಮುಂದೆ ತಮ್ಮ ಕಛೇರಿಯನ್ನೇರ್ಪಡಿಸಿ ರಾಜಸನ್ಮಾನ ದೊರಕಲು ಅವಕಾಶ ಕಲ್ಪಿಸಿ ಕೊಟ್ಟಿದ್ದ ಶೇಷಣ್ಣ ಸುಬ್ಬಣ್ಣನವರಲ್ಲಿ ತಮಗಿದ್ದ ಕೃತಜ್ಞತೆಯ ಕುರುಹಾಗಿ ರಾಮನಾಡ್ ಸಂಸ್ಥಾನದ ದೊರೆಗಳ ಸಮ್ಮುಖದಲ್ಲಿ ಅವರಿಬ್ಬರ ಕಛೇರಿಗಳನ್ನು ಮಾಡಿಸಿ ವಿಶೇಷ ಮರ್ಯಾದೆ ಮಾಡಿಸಿದರು.

ಈ ವೇಳೆಗಾಗಲೇ ಪಟ್ಣಂ ಸುಬ್ರಹ್ಮಣ್ಯಯ್ಯರ್ ಬಳಿ ನನ್ನ ವ್ಯಾಸಂಗ ಒಂದೆರಡು ವರ್ಷ ಸಾಗಿತ್ತು. ಸಂಗೀತದಲ್ಲಿ ಸಾಮಾನ್ಯವಾದ ಜ್ಞಾನ ಉಂಟಾಗಿತ್ತು. ಅಯ್ಯಂಗಾರ್ಯರಿಗೆ ಬರೆದಿದ್ದ ಒಂದೆರಡು ಪತ್ರಗಳಲ್ಲಿ ನನ್ನ ವಿಷಯವನ್ನು ಪ್ರಸ್ತಾಪಮಾಡಿ ಆಶಾಪೂರಿತವಾದ ನುಡಿಗಳನ್ನು ಬರೆದಿದ್ದರಂತೆ ನಮ್ಮ ಗುರುಗಳು! "ಸಂಗೀತ ಸಾಹಿತ್ಯಗಳೆರಡರಲ್ಲೂ ಉತ್ತಮ ಪಾಂಡಿತ್ಯವನ್ನು ಸಂಪಾದಿಸಿಕೊಂಡಿದ್ದೀರೆಂದು ಗುರುಗಳು ಹಿಂದೆಯೇ ಬರೆದಿದ್ದರು. ಬಹಳ ಸಂತೋಷ" ಎಂದರು ಪೂಚಿಯವರು ನನ್ನನ್ನು ಕುರಿತು. "ಎಲ್ಲವೂ ಗುರಿಹಿರಿಯರನುಗ್ರಹ" ಎಂದೆ.

ಮರುದಿನ ಬೆಳಿಗ್ಗೆ ನಾನು ಪೂಚಿಯವರ ಮನೆಗೆ ಹೋದಾಗ್ಗೆ, ಅವರು ತಮ್ಮ ಶಿಷ್ಯಮಂಡಲಿಯ ಮಧ್ಯೆ ಕುಳಿತು ಹಾಡುತ್ತಿದ್ದರು. ಪಕ್ಕದಲ್ಲಿ ತಂಬೂರಿ ಹಾಕುತ್ತ ಕುಳಿತಿದ್ದ ವಿದ್ಯಾರ್ಥಿಯೇ ಸೇಲಂ ದೊರೆಸ್ವಾಮಿ ಅಯ್ಯಂಗಾರ್ಯರು; ಪೂಚಿಯವರ ಪಟ್ಟ ಶಿಷ್ಯರು. ಉಳಿದವರೆಲ್ಲರೂ ನಿಶ್ಶಬ್ದರಾಗಿ ಗುರುಗಳ ಹಾಡಿಕೆಯಲ್ಲಿ ತಲ್ಲೀನರಾಗಿದ್ದರು. ಪೂಚಿಯವರು ಅಂದು ಹಾಡುತ್ತಿದ್ದುದು ನಮ್ಮ ಗುರುಗಳು ರಚಿಸಿದ್ದ ಬೇಗಡೆರಾಗದ ಅಟ್ಟತಾಳದ ವರ್ಣ: "ಮರಚಿಟ್ಲುಂಡೇದಿ ಮೇರಗಾದುರ." ಕಾಲ ಮಧ್ಯಮಕಾಲ, ತ್ರಿಕಾಲದಲ್ಲಿ ವರ್ಣದ ಸಾಧಕ ನಡೆಯಿತು. "ಎಲ್ಲ ಗುರುಗಳ ಪಡಿಯಚ್ಚು" ಅನ್ನುವಂತಿತ್ತು, ಅವರ ಗಾಯನ ಕ್ರಮ. ಬೆಳಿಗ್ಗೆ ಸುಮಾರು ಹತ್ತು ಘಂಟೆಯ ಹೊತ್ತಿಗೆ ಸಾಧಕ ಮುಕ್ತಾಯಗೊಂಡಿತು. ಅನಂತರ ಪೂಚಿಯವರು ಹಿಂದೆ ಸರಿದು ಗೋಡೆ ಒರಗಿ ಕುಳಿತರು. ದೊರೆಸ್ವಾಮಿ ಅಯ್ಯಂಗಾರ್ಯರ ಕಡೆ ಒಂದು ಬಾರಿ ದೃಷ್ಟಿ ಹೊರಳಿಸಿದರು. ಗುರುಗಳ ಇಂಗಿತವನ್ನರಿತ ಶಿಷ್ಯ, ತಂಬೂರಿಯನ್ನು

ಮೂಲೆಗೊರಗಿಸಿಟ್ಟು, ಒಳಗೆ ಹೋಗಿ, ದೊಡ್ಡ ಪರಾತವೊಂದರಲ್ಲಿ ಇಡ್ಡಲಿಗಳನ್ನೂ, ದೊಡ್ಡ ಬಟ್ಟಲೊಂದರಲ್ಲಿ ತುಪ್ಪವನ್ನೂ ತೆಗೆಸಿಕೊಂಡು ಹಿಂತಿರುಗಿದರು. ಸುಮಾರು ಇಪ್ಪತ್ತೈದು ಇಡ್ಡಲಿಗಳನ್ನು ಬೆಳ್ಳಿಯ ತಟ್ಟೆಯೊಂದರಲ್ಲಿ ಗುರುಗಳ ಮುಂದಿಟ್ಟು ಧಾರಾಳವಾಗಿ ತುಪ್ಪವನ್ನು ಬಡಿಸಿದರು. ಉಪಾಹಾರದ ಪ್ರಮಾಣ ಪರಿಮಿತಿಯನ್ನು ನೋಡಿ ನನಗೆ ಸ್ವಲ್ಪ ಆಶ್ಚರ್ಯವೇ ಆಯಿತು! ತಲೆದೋರಿದ ಆಶ್ಚರ್ಯಕ್ಕೆ ಸಮಾಧಾನವನ್ನು ಹುಡುಕುತ್ತಿರುವಷ್ಟರಲ್ಲೇ ಪೂಜಿಯವರ ಮುಂದಿದ್ದ ತಟ್ಟೆ ಬರಿದಾಯಿತು. ಒಂದು ಪುಟ್ಟ ಕೊಡದಿಂದ ಬಿಸಿಬಿಸಿಯ ಕಾಫಿಯನ್ನು ಗಳಗಳನೆ ಸುರಿದುಕೊಂಡು ಕುಡಿದು ತೃಪ್ತಿಯ ಮುಖಭಾವವೊಂದನ್ನು ವ್ಯಕ್ತಪಡಿಸಿದರು. ಆ ರಾಕ್ಷಸ ಸಾಧನಾ ವಿಧಾನಕ್ಕೆ ಈ ರಾಕ್ಷಸ ಉಪಹಾರ ಸರಿಯಾದ ಜೋಡಿ ಎಂದುಕೊಂಡೆ. ಶಿಷ್ಯರಿಗೂ ಉಪಹಾರ ಜರುಗಿತು. ಇಷ್ಟಾದಮೇಲೆ ಶಿಷ್ಯರಿಗೆ ಪಾಠ ಪ್ರಾರಂಭವಾಯಿತು. ಅದೇ ಬೇಗಡೆರಾಗದ ವರ್ಣ! "ನನ್ನ ಪಾಠ ಕ್ರಮವೇ ಇದು ಆಚಾರ್ಯರೇ. ಸಂಗೀತ ಕಲಿಯುವ ವಿದ್ಯಾರ್ಥಿಗಳಿಗೆ ಶಿಕ್ಷಣ ಎಷ್ಟು ಅಗತ್ಯವೋ ಕೇಳ್ಮೆಯೂ ಅಷ್ಟೇ ಅಗತ್ಯ. ನನಗೂ ಸಾಧಕವಾದ ಹಾಗಾಯಿತು, ಅವರಿಗೂ ಕೇಳ್ಮೆ ಬಿದ್ದಂತಾಯಿತು. ಒಂದು ವಾರದಲ್ಲಿ ಮುಗಿಯುವ ವರ್ಣವನ್ನು ಮೂರೇ ದಿನಗಳಲ್ಲಿ ಪೂರ್ತಿಮಾಡಬಹುದು, ಕೆಲಸವೂ ಹಗುರವಾಯಿತು. ಕಾಲವೂ ಕೂಡಿಬಂತು,"–ಎಂದರು ಶ್ರೀನಿವಾಸರು. ವರ್ಣದ ಪಲ್ಲವಿ, ಅನುಪಲ್ಲವಿಗಳ ಪಾಠ ನಡೆಯಿತು. ಪ್ರತಿಯೊಬ್ಬ ಶಿಷ್ಯರಿಗೂ ಪ್ರತ್ಯೇಕವಾಗಿ ಹೇಳಿಕೊಟ್ಟು ಅನಂತರ ಎಲ್ಲರನ್ನೂ ತಮ್ಮ ಜೊತೆಯಲ್ಲಿ ಸಾಮೂಹಿಕವಾಗಿ ಹಾಡಿಸಿದರು. ಅಲ್ಲಿಗೆ ಅಂದಿನ ಪಾಠ ಮುಗಿಯಿತು. ಶಿಷ್ಯರೆಲ್ಲರೂ ಗುರುಗಳಿಗೆ ಪ್ರಣಾಮಮಾಡಿ ಹೊರಬಿದ್ದರು. ಶಿಷ್ಯರ ವಿಧೇಯತೆ, ವಿದ್ಯಾಶ್ರದ್ಧೆಯನ್ನು ಕಂಡು ಮನಸ್ಸಿಗೆ ಆಹ್ಲಾದವಾಯಿತು. "ಕೇಳಿದಿರಾ ಆಚಾರ್ಯರೇ? ಇಷ್ಟು ಮಂದಿ ಶಿಷ್ಯರಲ್ಲಿ ಯಾರ ಹಾಡಿಕೆ ನಿಮಗೆ ಒಪ್ಪಿತು?" ಎಂದು ಪೂಜಿಯವರು ನನ್ನನ್ನು ಪ್ರಶ್ನಿಸಿದರು. "ಶಿಷ್ಯರೆಲ್ಲರೂ ಚುರುಕಾಗಿದ್ದಾರೆ. ತಮ್ಮ ಹೆಸರನ್ನು ಪ್ರಖ್ಯಾತಿಗೆ ತರುವ ಭರವಸೆಯನ್ನು ಸೂಚಿಸುತ್ತಿದ್ದಾರೆ. ಆದರೆ, ಆ ಮೂಲೆಯಲ್ಲಿ ಕುಳಿತು ಹಾಡುತ್ತಿದ್ದ ಯುವಕನ ಭವಿಷ್ಯದಲ್ಲಿ ನನಗೆ ಪೂರ್ಣ ಭರವಸೆಯಿದೆ. ಉತ್ತಮ ಹಾಡುಗಾರಿಕೆ ಆತನದು" ಎಂದೆ.

"ಹುಡುಗ ಚುರುಕಿಲ್ಲ–ಕೊಂಚ ಮಂಕು. ಏನುಮಾಡಲಿ?" ಎಂದು ಆತಂಕಪಟ್ಟರು ಪ್ರೊಚಿಯವರು. "ಆತಂಕಕ್ಕೆ ಆಸ್ಪದವಿಲ್ಲ. ಮನಃಪೂರ್ವಕವಾಗಿ ವಿದ್ಯಾಧಾರೆಯೆರೆಯಿರಿ" ಎಂದೇ. ಆತನೇ ಈಗ ಪ್ರಖ್ಯಾತ ವಿದ್ವಾಂಸರಾಗಿರುವ ಅರಿಯಕುಡಿ ರಾಮಾನುಜಯ್ಯಂಗಾರ್ಯರು! ವಿದ್ಯಾರ್ಥಿದೆಸೆಯಲ್ಲಿದ್ದಾಗ ಬೂದಿ ಮುಚ್ಚಿದ ಕೆಂಡದಂತಿದ್ದು ಈಗ ಶ್ರೇಷ್ಠ ಗಾಯಕರಾಗಿರುವ ಅರಿಯಾಕುಡಿಯವರಮೇಲೆ ಪ್ರೊಚಿಯವರಿಗೆ ಪ್ರೇಮ ಮಮತೆಗಳು ಗುಪ್ತಗಾಮಿನಿಯಂತಿದ್ದವೇ ಹೊರತು ಎಂದೂ ಬಹಿರಂಗವಾಗಿ ಪ್ರದರ್ಶಿತವಾಗುತ್ತಿರಲಿಲ್ಲ. ಹೊಗಳಿಕೆಯಿಂದ ಶಿಷ್ಯನ ಪುರೋಭಿವೃದ್ಧಿಗೆ ಎಲ್ಲಿ ಧಕ್ಕೆ ಬಂದೀತೋ ಎಂದು ಪ್ರೊಚಿಯವರು ಜಾಗರೂಕರಾಗಿರುತ್ತಿದ್ದರು.

ಶ್ರೀನಿವಾಸರು ತಮ್ಮ ಶಿಷ್ಯರನ್ನು ಮಕ್ಕಳಿಗಿಂತ ಹೆಚ್ಚಾಗಿ ನೋಡಿಕೊಳ್ಳುತ್ತಿದ್ದರು. ರಾತ್ರಿ ತಮ್ಮ ಊಟವಾದಮೇಲೆ, ತಾಂಬೂಲ ಸೇವನೆ ಮಾಡುತ್ತ ಸಂಚಾರಹೊರಟು ಶಿಷ್ಯರ ಕೊಠಡಿಗಳ ಸುತ್ತಲೂ ಒಂದು ಗಸ್ತು ಹೊಡೆದು ಎಲ್ಲರೂ ನಿರಾತಂಕವಾಗಿ ನಿದ್ದೆಮಾಡುತ್ತಿದ್ದಾರೆಯೋ ಇಲ್ಲವೇ ಎಂದು ಪರೀಕ್ಷಿಸುತ್ತಿದ್ದರು. ಹೀಗಿರುವಲ್ಲಿ ಒಂದು ದಿನ ಒಂದು ಪ್ರಸಂಗ ಜರುಗಿತು. ಶಿಷ್ಯನೊಬ್ಬನ ಕೊಠಡಿಗೆ ಬೀಗ ಹಾಕಿತ್ತು. ಒಳಗೆ ದೀಪ ಉರಿಯುತ್ತಿತ್ತು. ತೆರೆದ ಕಿಟಕಿಯಿಂದ ನೋಡಿದವರಿಗೆ ಹಾಸಿಗೆಯ ಮೇಲೆ ಮುಸುಕುಹಾಕಿ ಮಲಗಿದ್ದ ವ್ಯಕ್ತಿ ಗೋಚರವಾಗುತ್ತಿತ್ತು. ಪ್ರೊಚಿಯವರಿಗೆ ವಿಸ್ಮಯವಾಯಿತು. ಬಾಗಿಲನ್ನು ಎರಡು ಮೂರು ವೇಳೆ ತಟ್ಟಿದರು, ಶಿಷ್ಯನನ್ನು ಸಂಬೋಧಿಸಿ ಕರೆದರು, ಒಳಗಿನಿಂದ ಪ್ರತ್ಯುತ್ತರ ಬರಲಿಲ್ಲ. ವ್ಯಕ್ತಿ ಅಲುಗಾಡಲೂ ಇಲ್ಲ. ಆಶ್ಚರ್ಯಚಕಿತರಾಗಿ ಪ್ರೊಚಿಯವರು ಕೊಠಡಿ ಸುತ್ತ ತಿರುಗಿ, ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿರುವಾಗ್ಗೆ ಯಾರೋ ಕತ್ತಲಿನ ಸಂದಿಯಲ್ಲಿ ಸರಿಯುತ್ತಿದ್ದಂತೆ ಭಾಸವಾಯಿತು. ಹೆಜ್ಜೆಯನ್ನು ತ್ವರಿತವಾಗಿ, ಹಗುರವಾಗಿ, ಹಾಕುತ್ತ ಅಯ್ಯಂಗಾರ್ಯರು ಆ ವ್ಯಕ್ತಿಯನ್ನು ಹಿಂಬಾಲಿಸಿದರು. ಕ್ರಮೇಣ ಆ ವ್ಯಕ್ತಿ ಮನೆಯ ಹಿಂಬದಿಯಲ್ಲಿದ್ದ ಪುಷ್ಕರಿಣಿಯೊಂದರ ಬಳಿ ಸಾಗಿತು. ಭಯಾಶ್ಚರ್ಯಭರಿತರಾಗಿ ಪ್ರೊಚಿಯವರೂ ಪುಷ್ಕರಿಣಿಯನ್ನು ಸಮೀಪಿಸಿದರು. ಪುಷ್ಕರಿಣಿಯ ಮೆಟ್ಟಲುಗಳನ್ನು ಇಳಿದು, ನಿರ್ಮಲಾಕಾಶದ ಕಡೆ ಮುಖವೆತ್ತಿ ಆ ವ್ಯಕ್ತಿ ಹಾಡಲು

ಪ್ರಾರಂಭಮಾಡಿತು. ಕಂಠದಿಂದ ನಾದಧಾರೆ ಪ್ರವಹಿಸಿದ ಕ್ಷಣವೇ ಪೂಚಿಯವರು ಕಂಪಿಸತೊಡಗಿದರು. ಅಂದು ಬೆಳಿಗ್ಗೆ ಪಾಠ ನಡೆಯುತ್ತಿದ್ದಾಗ್ಯೆ ನಡೆದಿದ್ದ ವಿದ್ಯಮಾನವೆಲ್ಲ ಅವರ ಮನಸ್ಸಿನ ತೆರೆಯಮೇಲೆ ವಿದ್ಯುದ್ವೇಗದಲ್ಲಿ ಸುಳಿದು ಮಾಯವಾಯಿತು. ಕೀರ್ತನೆಯೊಂದನ್ನು ಅತೃಪ್ತಿಕರವಾಗಿ ಶಿಷ್ಯ ಹಾಡಿದ್ದನ್ನು ಕೇಳಿ ಕುಪಿತರಾದ ಪೂಚಿಯವರು ಮೂದಲಿಸಿದ್ದರು. ಈಗ ಅದೇ ಕೀರ್ತನೆಯನ್ನು ಶಿಷ್ಯ ಹಾಡಲುಪಕ್ರಮಿಸಿದ್ದನ್ನು ಕೇಳಿ ಪೂಚಿಯವರು ಅವಾಕ್ಕಾದರು. ಸಿಡುಕಿನ, ದುಡುಕಿನ ನುಡಿಗಳು ಇಷ್ಟುದೂರ ಮುಟ್ಟುವುವೆಂದು ಅವರೆಣಿಸಿರಲಿಲ್ಲ. ಶಿಷ್ಯನೆಲ್ಲಿ ಪ್ರಾಣತ್ಯಾಗಮಾಡಿಕೊಳ್ಳುವನೋ ಎಂದು ದಿಗಿಲುಬಿದ್ದರು. ಮೆಟ್ಟಲಿಳಿದು ಶಿಷ್ಯನ ಭುಜದ ಮೇಲೆ ಕೈಯಿಟ್ಟು ಅಕ್ಕರೆಯಿಂದ "ದೊರೆ, ಎನ್ನಡಾ ಇದಿ?" ಎಂದರು. ದೊರೆಸ್ವಾಮಿ ಅಯ್ಯಂಗಾರ್ಯರಿಗೆ ಬಾಹ್ಯಪ್ರಪಂಚದ ಅರಿವೇ ಇರಲಿಲ್ಲ. ಮೈ ಮರೆತು ಹಾಡುತ್ತಿದ್ದರು. ರಾತ್ರಿಯ ಪ್ರಶಾಂತತೆಯಲ್ಲಿ ಮಧುರ ಶಾರೀರದಿಂದ ಹೊರಹೊಮ್ಮುತ್ತಿದ್ದ ಪೂರ್ವಿಕಲ್ಯಾಣಿರಾಗ ಅಪೂರ್ವ ಕಳಾಭರಿತವಾಗಿತ್ತು. ಪ್ರತಿಯೊಂದು ಸ್ವರವೂ ಜೀವಕಳೆಯಿಂದ ಕೂಡಿತ್ತು. ಹೆತ್ತು ಹೊತ್ತು ಸಾಕಿ ಸಲಹಿದ ಮಮತೆಯ ಮಗಳಿಗೆ ಅನುರೂಪನಾದ ವರನು ಪ್ರಾಪ್ತನಾದಾಗ ಜನನೀ ಜನಕರಿಗೆ ಅದೆಷ್ಟು ಆನಂದವಾಗುವುದೋ ಅದಕ್ಕೂ ಮಿಗಿಲಾದ ಸಂತೋಷವಾಯಿತು, ಪೂಚಿಯವರು ತಮ್ಮ ಕೃತಿ "ಪರಮಪಾವನರಾಮ" ಎಂಬುದನ್ನು ಶಿಷ್ಯ ಅಷ್ಟು ರಸಪೂರ್ಣವಾಗಿ ಹಾಡುತ್ತಿದ್ದುದನ್ನು ಕೇಳಿದಾಗ. ಪೂಚಿಯವರು ಕೊಳದ ತಣ್ಣನೆಯ ನೀರನ್ನು ಬೊಗಸೆಯಲ್ಲಿ ತೆಗೆದುಕೊಂಡು ಮುಖದಮೇಲೆ ಎರಚಿದ ಬಳಿಕ ದೊರೆಸ್ವಾಮಿ ಅಯ್ಯಂಗಾರ್ಯರು ಬಹಿರ್ಮುಖರಾದರು. ಎದುರಿಗಿದ್ದ ಗುರುಗಳನ್ನು ನೋಡಿ ಭ್ರಾಂತರಾದರು. ಇಬ್ಬರ ಬಾಯಿಂದಲೂ ಮಾತೇ ಹೊರಡಲಿಲ್ಲ. ಶಿಷ್ಯನನ್ನು ತಬ್ಬಿಕೊಂಡು ಗೃಹಾಭಿಮುಖರಾಗಿ ತೆರಳಿದರು, ಶ್ರೀನಿವಾಸರು. ಅಂದಿನಿಂದ ತಮ್ಮ ಕೊಠಡಿಯಲ್ಲೇ ಮಲಗಿಕೊಳ್ಳುವಂತೆ ದೊರೆಸ್ವಾಮಿ ಅಯ್ಯಂಗಾರ್ಯರಿಗೆ ವಿಧಾಯಕಮಾಡಿದರು.

ಶ್ರೀನಿವಾಸಯ್ಯಂಗಾರ್ಯರ ಹಲವಾರು ಕಛೇರಿಗಳನ್ನು ಕೇಳಿದ್ದು ಈಗಲೂ ಅವರ ಗಾನ ಮಾಧುರ್ಯ ನನ್ನ ಕಿವಿಗೆ ಕಟ್ಟಿದಂತಿದೆ. ಕೀರ್ತನೆಯನ್ನು ಚೌಕವಾಗಿ ಹಾಡುವುದರಲ್ಲೂ ಅಕ್ಷರಗಳ ಸ್ಥಳಪಲ್ಲಟವಿಲ್ಲದೆ ನೆರವಲು ಮಾಡುವುದರಲ್ಲೂ ಮಧ್ಯಮಕಾಲ ವಿನ್ಯಾಸಮಾಡುವುದರಲ್ಲೂ

ನಮ್ಮ ಗುರುಗಳ ಪಂಥವನ್ನು ಬಹು ಸೂಕ್ಷ್ಮವಾಗಿ ಅನುಸರಿಸುತ್ತಿದ್ದರು. ಅವರ ಸ್ವರಕಲ್ಪನೆ ಮಾತ್ರ ಮಹಾವೈದ್ಯನಾಥಯ್ಯರ್ ಅವರ ಸ್ವರಕಲ್ಪನೆಯನ್ನು ಸಂಪೂರ್ಣವಾಗಿ ಹೋಲುತ್ತಿತ್ತು. ಬೆಂಗಳೂರು ಗಾಯನ ಸಮಾಜದಲ್ಲಿ ನೂರೆಂಟು ಅಕ್ಷರದ ಸಿಂಹನಂದನ ತಾಳದಲ್ಲಿ ಪಲ್ಲವಿಯನ್ನು ಹಾಡಿದ್ದು ಈಗಲೂ ನನ್ನ ಸ್ಮೃತಿ ಪಥದಲ್ಲಿ ಚಿರಸ್ಥಾಯಿಯಾಗಿದೆ. ಅಂದು ತಬಲ ಪಕ್ಕವಾದ್ಯ ನುಡಿಸಲು ಮೈಸೂರಿನ ಪ್ರಸಿದ್ಧ ವಿದ್ವಾಂಸರಾಗಿದ್ದ ಚಿಕ್ಕರಂಗಣ್ಣನವರನ್ನು ಕರೆಸಿಕೊಂಡಿದ್ದರು. ಅದ್ಭುತವಾಗಿ ಪಕ್ಕವಾದ್ಯ ನುಡಿಸಿ ಚಿಕ್ಕರಂಗಣ್ಣನವರು ಮೈಸೂರಿನ ಕೀರ್ತಿಗೌರವಗಳನ್ನು ಊರ್ಜಿತ ಪಡಿಸಿದರು. ತಾರಸ್ಥಾಯಿಯಲ್ಲಿ ಪೂಚಿಯವರ ಶಾರೀರ ಸ್ವಲ್ಪ ಕಟು. ಮಂದರ ಮಧ್ಯಮಸ್ಥಾಯಿಗಳಲ್ಲಿ ಬಲು ಇಂಪು; ಮತ್ತು ಸುಲಲಿತವಾಗಿ, ಸರಳವಾಗಿ ನುಡಿಯುತ್ತಿತ್ತು.

ಪೂಚಿಯವರ ರಚನ, ಶೈಲಿ ಸರಳ ಹಾಗೂ ಮಧುರ. ಉತ್ತಮ ಮನೋಧರ್ಮ. ಅವರ ಕೃತಿಗಳ ಬಗ್ಗೆ ನಮ್ಮ ಗುರುಗಳಿಗೆ ಒಳ್ಳೆಯ ಅಭಿಪ್ರಾಯವಿತ್ತು. "ಸೀನುವಿನ ಕೃತಿಗಳಲ್ಲಿ ರಾಗ ಭಾವ ಬಹಳ ಚೆನ್ನಾಗಿ ಪ್ರತಿಬಿಂಬಿತವಾಗಿದೆ. ಶೈಲಿಯಲ್ಲಿ, ರಚನೆಯಲ್ಲಿ ಗಾಂಭೀರ್ಯವಿದೆ, ಸ್ವತಂತ್ರ ಕಲ್ಪನೆಯಿದೆ, ವಾಸು" ಎನ್ನುತ್ತಿದ್ದರು ನಮ್ಮ ಗುರುಗಳು.

ನಾಲ್ವಡಿ ಕೃಷ್ಣರಾಜ ಒಡೆಯರ ವಿವಾಹ ಮಹೋತ್ಸವಕ್ಕೆ ಪೂಚಿ ಅಯ್ಯಂಗಾರ್ಯರು ಬಂದಿದ್ದಾಗ್ಗೆ ಒಂದು ಸ್ವಾರಸ್ಯ ನಡೆಯಿತು. ದೊರೆಗಳ ಮದುವೆಯೆಂದರೆ ಕೇಳಬೇಕೆ! ಎಲ್ಲೆಲ್ಲೂ ವೈಭವ, ಸಡಗರ; ಸ್ಥಳ ಪರಸ್ಥಳಗಳಿಂದ ಸಂಗೀತ ಸಾಹಿತ್ಯ ವಿದ್ವಾಂಸರು, ನಟನಟಿಯರು, ವಿದೂಷಕರು, ಪೈಲ್ವಾನರು ತಂಡತಂಡವಾಗಿ ಬಂದು ಸೇರಿದ್ದರು. ಅರಮನೆಯಲ್ಲಿ ಸಂಗೀತ ನೃತ್ಯ ನಾಟಕಗಳ ಸಮಾರಾಧನೆಯೇ ಏರ್ಪಟ್ಟಿದ್ದವು. ಶ್ರೀನಿವಾಸಯ್ಯಂಗಾರ್ಯರ ಮತ್ತು ನನ್ನ ಕಛೇರಿಗಳು ಒಂದೇ ದಿನ ನಡೆಯುವಂತೆ ಗೊತ್ತಾಗಿತ್ತು. ಮೊದಲು ನನ್ನ ಹಾಡುಗಾರಿಕೆ, ಅನಂತರ ಪೂಚಿಯವರದ್ದು. ಮೇಘರಂಜಿನಿ ರಾಗದಲ್ಲಿ ನಾನು ಮಾಡಿದ್ದ "ಜನಕೇಂದ್ರ ಸುತಾಪ್ರಿಯ ಪಾಲಯ ಮಾಂ" ಎಂಬ ನನ್ನ ಕೀರ್ತನೆಯೊಂದನ್ನು ಹಾಡಿದೆ. ಹತ್ತಿರದಲ್ಲೇ ಕುಳಿತಿದ್ದ ಪೂಚಿಯವರು ಆಶ್ಚರ್ಯಚಕಿತರಾದವರಂತೆ ಭಾಸವಾಯಿತು. ಕಾರಣವೇನೆಂದು ನನಗೆ ತಿಳಿಯಲಿಲ್ಲ. ನನ್ನ ಕಛೇರಿ ಮುಗಿದಮೇಲೆ ಪೂಚಿಯವರು ತಮ್ಮ ವಿನಿಕೆಯನ್ನು ಪ್ರಾರಂಭ

ಮಾಡಿದರು. ಅದೇ ಮೇಘರಂಜಿನಿ ರಾಗದಲ್ಲಿ "ಕರುಣಾತೋ ನನ್ನ ಕಾಪಾಡು ರಾಮ" ಎಂಬ ಕೀರ್ತನೆಯನ್ನು ಹಾಡಲುಪಕ್ರಮಮಾಡಿ ನನ್ನ ಕಡೆ ನೋಡಿದರು. ನನಗೂ ಅಚ್ಚರಿಯಾಯಿತು. ಎರಡು ಕೀರ್ತನೆಗಳ ವರ್ಣಮಟ್ಟುಗಳೂ ಒಂದೇ ಪ್ರಕಾರವಾಗಿದ್ದವು. ಒಂದು ಸ್ವರವಾದರೂ ವ್ಯತ್ಯಾಸವಿರಲಿಲ್ಲ. ಒಂದನ್ನು ನೋಡಿ ಮತ್ತೊಂದು ರಚಿಸಲ್ಪಟ್ಟಿರ ಬೇಕೆಂದು ಯಾರಾದರೂ ಅನುಮಾನಿಸದೇ ಹೇಳಬಹುದಾದಷ್ಟು ಸಾಮ್ಯವಿತ್ತು. ಕೀರ್ತನೆ ಹಾಡಿಯಾದಮೇಲೆ "ಇಬ್ಬರ ಮೇಲೂ ಗುರುಗಳ ಆಶೀರ್ವಾದ ಒಂದೇ ರೀತಿಯಲ್ಲಿತ್ತೆಂಬುದಕ್ಕೆ ಇದೇ ಸಾಕ್ಷಿ" ಎಂದರು ಶ್ರೀನಿವಾಸರು. "ಕ್ಷಮಿಸಬೇಕು. ತಾವು ಮಾಡಿದ್ದ ಕೀರ್ತನೆಯ ಪರಿಚಯವಿರಲಿಲ್ಲ ನನಗೆ, ಈ ಕೀರ್ತನೆಯನ್ನು ರಚಿಸಿದಾಗ. ಈ ರಾಗ ವನ್ನು ಬಿಟ್ಟು ಮತ್ತೆ ಯಾವುದಾದರೂ ರಾಗದಲ್ಲಿ ವರ್ಣಮಟ್ಟನ್ನು ಹಾಕುತ್ತೇನೆ" ಎಂದೆ. "ಇದರಲ್ಲಿ ತಪ್ಪೇನು ಬಂತು ಆಚಾರ್ಯರೇ ? ಒಬ್ಬರ ಮನೋಧರ್ಮವಿದ್ದಂತೆಯೇ ಮತ್ತೊಬ್ಬರದೂ ಇರಬಾರದೇಕೆ ? ನಮ್ಮ ಗುರುಗಳ "ಎಟುಲಾ ವ್ರಾಸಿಯುನ್ನಾಡೆ" ಎಂಬ ಕೀರ್ತ ನೆಗೂ ತ್ಯಾಗರಾಜರ-"ಎಟುಲಾ ಬ್ರೋತುವೋ ತೆಲಿಯಾ" ಎಂಬ ಕೀರ್ತ ನೆಗೂ ಹೋಲಿಕೆ ಎಷ್ಟಿಲ್ಲ ? ತ್ಯಾಗಯ್ಯನವರ "ಮನುಸು ಸ್ವಾಧೀನ" ಎಂಬ ಕೀರ್ತನೆಗೂ ದೀಕ್ಷಿತರ "ಅಕ್ಷಯಲಿಂಗವಿಭೋ" ಎಂಬ ಕೀರ್ತನೆಗೂ ಸಾಮ್ಯ ಎಷ್ಟಿಲ್ಲ ? ರಾಗ ಬದಲಾಯಿಸಬೇಕಾದ ಪ್ರಮೆಯವೇನೂ ಇಲ್ಲ. ಈಗಿರುವಂತೆಯೇ ಇರಲಿ. ನಿಮ್ಮರಚನೆ ಸೊಗಸಾಗಿದೆ" ಎಂದು ಅಯ್ಯಂ ಗಾರ್ಯರು ಪ್ರೋತ್ಸಾಹಕರವಾದ ನುಡಿಗಳನ್ನಾಡಿದರು.

ಶ್ರೀನಿವಾಸಯ್ಯಂಗಾರ್ಯರು ಸದಾಚಾರ ಸಂಪನ್ನರು. ಬಹು ರಸಿಕರು. ಸಂಗೀತದಲ್ಲಿ ಸ್ವಲ್ಪವೂ ಕಟಪಟಿಯಿರಬಾರದು ಅವರಿಗೆ. ಹಾಡಿಕೆ ಕೋಮಲವಾಗಿರಬೇಕು, ನಿರ್ಮಲವಾಗಿರಬೇಕು. ಬೆರಳನ್ನು ತೋರಿದರೆ ಹಸ್ತವನ್ನು ನುಂಗುವಷ್ಟು ಮೇಧಾವಿಗಳು. ಗುರುಗಳಿಂದ ಕಲಿತದ್ದನ್ನು ತಮ್ಮ ಬುದ್ಧಿವಿಶೇಷದಿಂದ ಮತ್ತು ಸಾಧಕಬಲದಿಂದ ಒಂದಕ್ಕೆ ಹತ್ತರಷ್ಟು ಮಾಡಿಕೊಳ್ಳುತ್ತಿದ್ದರು. ನೋಡುವುದಕ್ಕೆ ಸುಂದರ ವಾಗಿದ್ದರು. ದೇಹಾಕೃತಿ ಅತಿ ಸ್ಥೂಲವೂ ಅಲ್ಲ, ಅತಿ ಕೃಶವೂ ಅಲ್ಲ. ಅತಿ ಎತ್ತರವೂ ಅಲ್ಲ, ಅತಿ ಗಿಡ್ಡೂ ಅಲ್ಲ. ಬಣ್ಣ ಎಣ್ಣೆಗೆಂಪು.

ತಾವು ಆರ್ಜಿಸಿದ ದ್ರವ್ಯದಮೇಲೆ ವಸ್ತ್ರಾಭರಣಗಳಮೇಲೆ ಪೂಚಿಯ ವರಿಗೆ ಬಲು ಮಮತೆ. ಒಂದು ಕುರುಡು ಕಾಸು ಲೋಪವಾದರೂ ಆ ಹೊತ್ತೆಲ್ಲ ತಲೆಯ ಮೇಲೆ ಆಕಾಶವೇ ಕಳಚಿಬಿದ್ದಂತೆ ಪೇಚಾಡುತ್ತಿದ್ದರು. ಒಂದಾವರ್ತಿ ಪೂಚಿಯವರ ಕಛೇರಿಯೊಂದಕ್ಕೆ ತಿರುಕೋಡ್ ಕಾವಲ್ ಕೃಷ್ಣಯ್ಯರ್ ಅವರ ಪಿಟೀಲು ಪಕ್ಕವಾದ್ಯ ಗೊತ್ತಾಗಿತ್ತು. ಕಛೇರಿಯೆಲ್ಲ ಮುಗಿಯಿತು. ಇಬ್ಬರಿಗೂ ನಿಗದಿಯಾಗಿದ್ದ ಸಂಭಾವನೆಯನ್ನು ಕೊಡಲಾಯಿತು. ಮರುದಿನ ಬೆಳಿಗ್ಗೆ ಇಬ್ಬರೂ ತಮ್ಮ ಊರಿಗೆ ಹಿಂತಿರುಗಲು ಸಿದ್ಧರಾದರು. ಹೊರಡುವ ಮುನ್ನ ಪೂಚಿಯವರು ತಮ್ಮ ಹಾಸಿಗೆ ಪೆಟ್ಟಿಗೆಗಳನ್ನು ಒಂದು ಬಾರಿ ವಿವರವಾಗಿ ಪರೀಕ್ಷಿಸತೊಡಗಿದರು. ಬಟ್ಟೆ ಪದಾರ್ಥಗಳೆಲ್ಲವನ್ನೂ ಕ್ರಮವಾಗಿ ಎಣಿಸಿದರು. ಒಂದು ಪದಾರ್ಥ ಕಡಮೆ ಬಂತು. ಪೂಚಿಯವರ ಮುಖ ವಿವರ್ಣವಾಯಿತು. ಕೊಠಡಿಯೆಲ್ಲ ಪರದಾಡಿದರು. ಕಳೆದುಹೋಗಿದ್ದ ಪದಾರ್ಥ ಪತ್ತೆಯಾಗಲಿಲ್ಲ. ತಲೆಯಮೇಲೆ ಕೈಹೊತ್ತು ಕುಳಿತರು. ಅವರ ಕಾಂತಿರಹಿತವಾದ ಮುಖ ಚರ್ಯೆಯನ್ನು ನೋಡಿ, ಸಹಸ್ರಾರು ರೂಪಾಯಿ ಬೆಲೆಬಾಳುವ ವಸ್ತು ಯಾವುದೋ ಕಳೆದು ಹೋಗಿರಬೇಕು ಎಂದು ಖಚಿತವಾಯಿತು ನನಗೆ. "ಏನಾಯಿತು ಶ್ರೀನಿವಾಸಯ್ಯಂಗಾರ್ಯರೇ?" ಎಂದೆ. ಈ ಪ್ರಶ್ನೆಗೆ ಅವರಿಂದ ಹೊರಬಿದ್ದ ಉತ್ತರದಿಂದ ತಡೆಯಲಾರದಷ್ಟು ನಗು ಉಕ್ಕಿ ಬಂತು. ಕಷ್ಟಪಟ್ಟು ಅಡಗಿಸಿಕೊಂಡೆ. ಒಂದು ಹಳೆಯ ಅನಂತನದಾರ ಅವರ ಕೈಬಿಟ್ಟು ಹೋಗಿತ್ತು! "ಇದಕ್ಕೆ ಇಷ್ಟು ಯೋಚನೆಯೇ?" ಎಂದೆ. "ಉಂಟೆ ಎಲ್ಲಾದರೂ! ಇಟ್ಟಿದ್ದ ಪದಾರ್ಥ ಹೋಗೋಣ ಎಂದರೇನು?" ಎಂದು ಹೇಳಿ ಮತ್ತೆ ಹುಡುಕಾಡ ತೊಡಗಿದರು. ಇಷ್ಟು ಹೊತ್ತಿಗೆ ಹೊರಗೆ ಹೋಗಿದ್ದ ಪಿಟೀಲು ಕೃಷ್ಣಯ್ಯರ್ ಅವರು ಹಿಂತಿರುಗಿದರು. ಅವರ ಮುಖದಮೇಲೆ ತುಂಟು ನಗೆಯೊಂದು ಮೂಡಿತ್ತು. "ಇದರಲ್ಲೇನೋ ಚಮತ್ಕಾರವಿರಬೇಕು" ಎಂದು ತೋರಿತು ನನಗೆ. "ಏನು ವಿಷಯ? ಏಕೆ ಅಯ್ಯಂಗಾರ್ಯರು ಖಿನ್ನಮನಸ್ಕರಾಗಿದ್ದಾರೆ?" ಎಂದು ನನ್ನನ್ನು ಪ್ರಶ್ನಿಸಿದರು. ನಡೆದ ಸಂಗತಿಯೆಲ್ಲವನ್ನೂ ತಿಳಿಸಿದೆ. ಅವರಿಗೂ ನಗು ಚಿಮ್ಮಿ ಹರಿಯಿತು. ತಮ್ಮ ಸೊಂಟದಲ್ಲಿ ಸಿಗಿಸಿದ್ದ ಅನಂತನದಾರವನ್ನು ಪೂಚಿಯವರ ಮುಂದಿಟ್ಟರು. ಹೋದ ಪ್ರಾಣ ಮತ್ತೆ ಬಂದಂತಾಯಿತು ಅಯ್ಯಂಗಾರ್ಯರಿಗೆ!

# ಮೂಗೂರು ಸುಬ್ಬಣ್ಣ

ಸದಾಶಿವರಾಯರ ಸಮಕಾಲೀನರಲ್ಲಿ ಮತ್ತೊಬ್ಬ ಮೈಸೂರಿನ ಪ್ರಮುಖ ವಿದ್ವಾಂಸರೆಂದರೆ ಮೂಗೂರು ಸುಬ್ಬಣ್ಣನವರು. ತಿರುಮಕೂಡ್ಲು ನರಸೀಪುರ ತಾಲ್ಲೂಕಿನ ಮೂಗೂರು ಇವರ ಜನ್ಮಸ್ಥಳ. ಸುಬ್ಬಣ್ಣನವರು ಶಿವಭಕ್ತರು. ನಾವು ಪಾಠಶಾಲೆಯಲ್ಲಿ ವ್ಯಾಸಂಗಮಾಡುತ್ತಿದ್ದಾಗ ಆ ವರ್ಷ ವಿನಾಯಕನ ಪೂಜೆಯ ಸಂದರ್ಭದಲ್ಲಿ ಸುಬ್ಬಣ್ಣನವರ ಕಛೇರಿ ಏರ್ಪಾಡಾಗಿತ್ತು. ಅಂದೇ ನಾನು ಸುಬ್ಬಣ್ಣನವರನ್ನು ಮೊಟ್ಟಮೊದಲು ಕಂಡದ್ದು. ಸಾಮಾನ್ಯ ಎತ್ತರ, ದೃಢಕಾಯ, ಸ್ವರ್ಣವರ್ಣ, ಮಹಾತೇಜಸ್ವಿ, ಮಿತ ಹಾಗೂ ಮೃದುಭಾಷಿ. ಸಣ್ಣ ಮಕ್ಕಳನ್ನೂ ಕೂಡ "ಏನು ದೇವರು? ಏನು ಶಿವನೇ?" ಎಂದು ಗೌರವದಿಂದ, ಮಮತೆಯಿಂದ ಮಾತನಾಡಿಸುತ್ತಿದ್ದರು. ಹಸುಗೂಸಿನಂತಹ ಸರಳಸ್ವಭಾವ.

ಆ ದಿನದ ಕಛೇರಿಯಲ್ಲಿ ಸುಬ್ಬಣ್ಣನವರು ಶ್ರೀ ಮುತ್ತುಸ್ವಾಮಿ ದೀಕ್ಷಿತರ "ಸರಸ್ವತೀ ಛಾಯಾತರಂಗಿಣಿ" ಎಂಬ ಕೀರ್ತನೆಯನ್ನೂ, ತ್ಯಾಗರಾಜರ ಕೃತಿ "ಮೇರುಸಮಾನ" ಎಂಬುದನ್ನೂ ವಿಸ್ತಾರವಾಗಿ ಹಾಡಿದರು. ಸುಬ್ಬಣ್ಣನವರ ಪಾಂಡಿತ್ಯವನ್ನು ತಿಳಿಯಲು ಅಸಮರ್ಥರಾಗಿದ್ದ ನಾವುಗಳು ಅವರ ಹಾವಭಾವಗಳನ್ನು ನೋಡಿ ಮನಸ್ಸಿನಲ್ಲಿಯೇ ಕುಚೋದ್ಯ ಮಾಡಿದೆವು. ಕೆಲವು ಚೇಷ್ಟೆಯ ಹುಡುಗರು ಬಹಿರಂಗವಾಗಿಯೂ ಗೇಲಿಮಾಡಿದರು. ಕೋಣದ ಮುಂದೆ ಕಿನ್ನರಿ ನುಡಿಸಿದಂತಾಗಿತ್ತು ಅಂದಿನ ಅವರ ಹಾಡುಗಾರಿಕೆ. ಆದರೆ, ಸುಬ್ಬಣ್ಣನವರ ಪರಿಚಯ ಮಾಡಿಕೊಳ್ಳಬೇಕು, ಅವರ ಸಂಗೀತವನ್ನರ್ಥಮಾಡಿಕೊಳ್ಳಬೇಕು ಎಂಬ ಹೆಬ್ಬಯಕೆ ನನ್ನಲ್ಲಿ ಅಂದಿನಿಂದಲೇ ಅಂಕುರಿಸಿತು.

ಮೊದಲಲ್ಲಿ ಸುಬ್ಬಣ್ಣನವರ ಶಾರೀರ ಬಲು ಪೆಡಸು, ಕಟುವಾಗಿತ್ತಂತೆ. "ಗಾರ್ದಭ ಶಾರೀರ" ವೆಂದೂ ಸಹ ಜನ ಅಪಹಾಸ್ಯಮಾಡುತ್ತಿದ್ದರಂತೆ. ಮಹಾ ಹಠಯೋಗಿಗಳಾದ ಸುಬ್ಬಣ್ಣ ಯೋಗಾಭ್ಯಾಸ ಬಲದಿಂದಲೂ, ಸಂಗೀತ ಸಾಧನೆಯಿಂದಲೂ ಉಗ್ರತಪಸ್ಸನ್ನೇ ಕೈಗೊಂಡು ಶಾರೀರವನ್ನು ಪುಟಕ್ಕೆ ಹಾಕಿದ ಚಿನ್ನದಂತೆ ಮಾರ್ಪಡಿಸಿ ಸ್ವಾಧೀನಪಡಿಸಿಕೊಂಡರಂತೆ.

ಸುಬ್ಬಣ್ಣನವರ ಆದಿ ಗುರುಗಳು ವೀಣೆ ಶಾಮಣ್ಣನವರು. ಸುಬ್ಬಣ್ಣನವರಿಗೆ ದೇವರು ಬ್ರಾಹ್ಮಣರು ಅಂದರೆ ಬಲು ಭಯ, ಬಲು ಭಕ್ತಿ. ಮಾರ್ಗದಲ್ಲಿ ಬ್ರಾಹ್ಮಣರು ಸಂಚರಿಸುತ್ತಿದ್ದರೆ ಸುಬ್ಬಣ್ಣ ದೂರದಿಂದಲೇ ಒಂದು ಪಕ್ಕಕ್ಕೆ ಸರಿದು ತಲೆ ತಗ್ಗಿಸಿ ನಿಲ್ಲುತ್ತಿದ್ದರು. ಗುರುಗಳನ್ನಂತೂ ತಲೆಯೆತ್ತಿ ನೋಡಿದವರೇ ಅಲ್ಲ. ಬಾಲ್ಯಪಾಠಗಳನ್ನು ಶ್ಯಾಮಣ್ಣನವರಲ್ಲಿ ಮುಗಿಸಿಕೊಂಡು, ಅಂದಲನೂರು ಸುಬ್ಬಯ್ಯನವರಲ್ಲಿ ಪ್ರೌಢಪಾಠಕ್ಕಾಗಿ ತೆರಳಿದರು. ಕ್ಷೇತ್ರಜ್ಞನ ಪದಗಳಿಗೆ ವರ್ಣಮಟ್ಟನ್ನು ಹಾಕಿದವರು ಅಂದಲನೂರು ಸುಬ್ಬಯ್ಯನವರು ಎಂದು ಪ್ರತೀತಿ. ಈ ಪ್ರಖ್ಯಾತ ವಿದ್ವಾಂಸರಲ್ಲಿ ಕೆಲವುಕಾಲ ಶಿಕ್ಷಣ ಪಡೆದು ಮೈಸೂರಿಗೆ ಹಿಂತಿರುಗಿ ಮೂಗೂರು ಸುಬ್ಬಣ್ಣನವರು ಅನೇಕ ಕಛೇರಿಗಳನ್ನು ಮಾಡಿ, ಬಹುಮಂದಿ ಶಿಷ್ಯರನ್ನು ತರಪೇತು ಮಾಡಿ, ಹಲವಾರು ಸ್ವರಜತಿ, ವರ್ಣ, ಕೀರ್ತನೆಗಳನ್ನು ರಚಿಸಿ, ಕಲೆಯ ಪುರೋಭಿವೃದ್ಧಿಗಾಗಿ ಅಮೂಲ್ಯ ಸೇವೆ ಸಲ್ಲಿಸಿ ಕೃತಾರ್ಥರಾದರು. ಮೂಗೂರು ಸುಬ್ಬಣ್ಣನವರು ರಚಿಸಿದ ಮಾಯಾಮಾಳವಗೌಳ ರಾಗದ "ಜನಸಿ'' ಎಂಬ ವರ್ಣವೂ, ಶ್ರೀರಾಗದ "ವನಜನೇತ್ರ" ಎಂಬ ವರ್ಣವೂ ಆಗ್ಗೆ ವಿದ್ಯಾರ್ಥಿಗಳ ಹಾಗೂ ವಿದ್ವಾಂಸರ ವಲಯಗಳಲ್ಲಿ ಬಹಳ ಬಳಕೆಯಲ್ಲಿದ್ದವು. ಸುಬ್ಬಣ್ಣನವರ ರಚನೆಗಳಲ್ಲಿ ಕೆಲವು ಶೇಷಣ್ಣನವರಿಗೆ ಪಾಠವಾಗಿತ್ತು. ಸುಬ್ಬಣ್ಣನವರ ಹತ್ತಿರ ದಿನಕ್ಕೊಂದು ವರ್ಣ ಕಲಿಯುತ್ತಿದ್ದೆನೆಂದು ಶೇಷಣ್ಣನವರು ನನಗೆ ಹೇಳುತ್ತಿದ್ದರು. ನನ್ನ ಮೊದಲನೆಯ ಗುರುಗಳಾದ ಸುಬ್ಬರಾಯರು ಮೂಗೂರು ಸುಬ್ಬಣ್ಣನವರ ಬಳಿಗೆ ಹೋಗಿ ಅನೇಕ ವಿಷಯಗಳನ್ನು ಸಂಗ್ರಹಮಾಡುತ್ತಿದ್ದರು. ಸುಬ್ಬಣ್ಣನವರಲ್ಲಿ ಬಹು ಗೌರವವಿತ್ತು ಸುಬ್ಬರಾಯರಿಗೆ. "ಅಜಾತಶತ್ರು ಸುಬ್ಬಣ್ಣ. ಘನ ವಿದ್ವಾಂಸ" ಎಂದೆನ್ನುತ್ತಿದ್ದರು.

ಸುಂದರಂ ಮತ್ತು ಸುಬ್ಬರಾಯರು ಎಂಬ ಇಬ್ಬರು ಸಹೋದರರು ತಿರುಚನಾಪಳ್ಳಿಯಿಂದ ಮೈಸೂರಿಗೆ ಬಂದಿದ್ದರು. ಮುಮ್ಮಡಿ ಕೃಷ್ಣರಾಜ ಒಡೆಯರ ಸಮ್ಮುಖದಲ್ಲಿ ತಮ್ಮ ಪಾಂಡಿತ್ಯವನ್ನು ಪ್ರದರ್ಶಿಸಬೇಕೆಂದು ಅವರು ಪಟ್ಟ ಪ್ರಯತ್ನಗಳೆಲ್ಲ ನಿಷ್ಪ್ರಯೋಜನವಾಗಿ, ಕೊನೆಗೆ ತಂಬೂರಿಯನ್ನು ಮಾರಿಕೊಂಡು ಹೋಗುವ ಸ್ಥಿತಿ ಒದಗಿತಂತೆ. ಆದರೆ, ಅದೃಷ್ಟವಶಾತ್ ಪ್ರಭುಗಳಿಗೆ ಇವರ ಆಗಮನದ ಸುದ್ದಿ ಹೇಗೋ ತಿಳಿದು, ಅರಮನೆಯಲ್ಲಿ ನಾಲ್ಕಾರು ಕಛೇರಿಗಳು ಏರ್ಪಾಡಾದುವಂತೆ. ಅರಮನೆಗೆ

ಹೋಗುವಾಗ ಆನೆ ಬಾಗಿಲು ಬಳಿ ಪಾದರಕ್ಷೆಗಳನ್ನು ಬಿಟ್ಟು ಹೋಗುವ ಪದ್ಧತಿ. ಮೂಗೂರು ಸುಬ್ಬಣ್ಣ ಆ ಜೋಡುಗಳನ್ನು ತನ್ನ ಅಂಗವಸ್ತ್ರದಿಂದ ಒರಸಿ, ಧೂಳನ್ನು ತಲೆಗೆಲ್ಲ ಸವರಿಕೊಂಡು, ಅವರು ಹಿಂತಿರುಗುವ ವೇಳೆಗೆ ಮೆಟ್ಟಿಕೊಳ್ಳಲು ಮುಂದಿಡುತ್ತಿದ್ದರಂತೆ. "ಯಾರು ನೀವು?" ಅಂತ ವಿದ್ವಾಂಸರು ಕೇಳಿದರೆ, "ನಾನೊಬ್ಬ ಪಾಮರ, ತಮ್ಮ ಪಾದ ಸೇವಕ" ಅನ್ನುತ್ತಿದ್ದರಂತೆ ಸುಬ್ಬಣ್ಣ.

ಈ ಸುಂದರಂ ಸುಬ್ಬರಾಯರು ಅನ್ನುವವರು ಮೈಸೂರಿನ ಚಾವಡಿ ಬೀದಿಯ ಮನೆಯೊಂದರಲ್ಲಿ ವಾಸಮಾಡಿಕೊಂಡಿದ್ದರು. ಹಗಲೆಲ್ಲ ತಂಬೂರಿಯ ಗವಸನ್ನೇ ಬಿಚ್ಚುತ್ತಿರಲಿಲ್ಲವಂತೆ! ಬೀದಿಯಲ್ಲಿ ಜನಸಂಚಾರವೆಲ್ಲ ನಿಂತಮೇಲೆ ರಾತ್ರಿ ಸುಮಾರು ಹನ್ನೊಂದು ಘಂಟೆಯ ಹೊತ್ತಿಗೆ ತಮ್ಮ ವ್ಯಾಸಂಗವನ್ನು ಪ್ರಾರಂಭಿಸಿ ಬೆಳಗಿನ ಝಾವ ಐದು ಘಂಟೆಯುವರೆಗೂ ಸಾಧಕ ಮಾಡುತ್ತಿದ್ದರಂತೆ. ಈ ಗುಟ್ಟು ಸುಬ್ಬಣ್ಣನವರಿಗೆ ಹೇಗೋ ತಿಳಿಯಿತು. ಅವರ ಬಳಿ ಇದ್ದ ಅಡಿಗೆಯವನೊಬ್ಬನನ್ನು ಆಶ್ರಯಿಸಿ, ಸುಬ್ಬಣ್ಣ ಮನೆಯೊಳಗೆ ಗುಪ್ತವಾಗಿ ಪ್ರವೇಶಿಸಿ ಅವರ ಸಾಧಕ ಕ್ರಮವನ್ನು ಕೇಳಿ ವಿಷಯಸಂಗ್ರಹ ಮಾಡುತ್ತಿದ್ದರಂತೆ.

ಆಡಿದ ನುಡಿಯಂತೆ ನಡೆಯುವವರು ಸುಬ್ಬಣ್ಣ ಎಂದು ತೋರುವ ಈ ಕಥೆಯನ್ನು ಶೇಷಣ್ಣನವರು ನನಗೆ ಹೇಳಿದರು. ಒಮ್ಮೆ, ಗೃಹಕೃತ್ಯದ ಸಲುವಾಗಿ ಸುಬ್ಬಣ್ಣ ಒಬ್ಬ ಸಾಹುಕಾರರ ಬಳಿ ಮೂರು ಸಹಸ್ರ ರೂಪಾಯಿಗಳನ್ನು ಸಾಲ ಮಾಡಬೇಕಾಗಿ ಬಂತಂತೆ. ನಿಗದಿಯಾದ ವಾಯಿದೆಗೆ ಸಾಲವನ್ನು ತೀರಿಸಲು ಹಣ ಒದಗಿ ಬರಲಿಲ್ಲ. ಸಾಹುಕಾರನ ತಗಾದೆ ಹೆಚ್ಚಾಗುತ್ತ ಬಂದಿತು. ಒಂದು ದಿನ ಆ ಸಾಹುಕಾರ ಬೇಸರಪಟ್ಟು "ಅಯ್ಯಾ ಸುಬ್ಬಣ್ಣ! ಎಷ್ಟು ದಿನವಯ್ಯ ನಿನ್ನ ಮನೆ ಬಾಗಿಲಿಗೆ ಅಲೆಯುವುದು? ಸ್ವಲ್ಪವೂ ಚೆನ್ನಾಗಿಲ್ಲ ಇದು. ಇವತ್ತು ಹಣ ಕೊಟ್ಟು ಊಟ ಮಾಡಬೇಕಪ್ಪ" ಎಂದು ನಿಷ್ಠುರದ ಮಾತುಗಳನ್ನಾಡಿದನಂತೆ. "ಹಾಗೆಯೇ ಆಗಲಿ ಶಿವನೇ" ಅಂತ ಹೇಳಿ ಅಂದಿನಿಂದಲೇ ಊಟವನ್ನು ತ್ಯಜಿಸಿದರಂತೆ, ಸುಬ್ಬಣ್ಣ. ಕೊಂಚ ಹಾಲನ್ನು ಮಾತ್ರ ಸೇವಿಸುತ್ತಾ ಬಂದರು. ದಿನೇ ದಿನೇ ಶಕ್ತಿ ಕುಂದುತ್ತ ಬಂದಿತು. ಅವರ ಆಪ್ತಮಿತ್ರರಿಗೆ ಯೋಚನೆಗೆ ಕಾರಣವಾಯಿತು. ಎಷ್ಟು ಬಗೆಯಿಂದ ಕೇಳಿದರೂ ಸುಬ್ಬಣ್ಣ ಮೌನದಿಂದಲೇ ಇದ್ದುಬಿಟ್ಟರು. ಕೊನೆಗೆ ನಡೆದ ಸಂಗತಿಯೆಲ್ಲ ಹೇಗೋ

ಬಯಲಿಗೆ ಬಂತು. ಸುಬ್ಬಣ್ಣನವರ ಹಿತೈಷಿಗಳ ಪೈಕಿ ಒಬ್ಬಾತ ಆ ಸಾಹುಕಾರನನ್ನು ಬರಹೇಳಿ "ಏನಯ್ಯ, ಇಂತಹ ಮಹಾವಿದ್ವಾಂಸನಿಗೆ ಈರೀತಿ ಅಪಚಾರ ಮಾಡಬಹುದೇ? ಕಲೆಗೇ ದ್ರೋಹವೆಸಗಿದಂತಾಯಿತಲ್ಲಯ್ಯ? ತೆಗೆದುಕೋ ನಿನ್ನ ಹಣವನ್ನು. ಹಣ ಬಂತು ಅಂತ ಹೇಳಿ ಸುಬ್ಬಣ್ಣನ ನಿರಶನವ್ರತವನ್ನು ಮುಕ್ತಾಯಗೊಳಿಸು" ಅಂದರಂತೆ. ಸಾಹುಕಾರನಿಗೆ ನಾಚಿಕೆಯೂ, ಮನಸ್ಸಿಗೆ ನೋವೂ ಏಕಕಾಲದಲ್ಲಿ ಉಂಟಾದುವು. ಹಣವನ್ನು ಮುಟ್ಟಲಿಲ್ಲವಂತೆ. ಸುಬ್ಬಣ್ಣನವರಲ್ಲಿ ಕ್ಷಮೆ ಬೇಡಿ ಲೋಕಾಭಿರಾಮವಾಗಿ ಆಡಿದ ಮಾತು ಇಷ್ಟನರ್ಥಕ್ಕೆ ಕಾರಣವಾಯಿತಲ್ಲ ಎಂದು ಬಹುವಾಗಿ ಮರುಕಪಟ್ಟನಂತೆ!

ಸದಾಶಿವರಾಯರ ಕಮಲಾಮನೋಹರಿ ರಾಗದ 'ನರಸಿಮ್ಹುಡು' ಎಂಬ ಕೀರ್ತನೆಯನ್ನು ಸುಬ್ಬಣ್ಣ ಎಲ್ಲೋ ಒಂದು ಕಛೇರಿಯಲ್ಲಿ ಹಾಡಿದರಂತೆ. "ಕೀರ್ತನೆಯ ಸ್ವರೂಪವನ್ನೇ ಹಾಳುಮಾಡಿದ ಸುಬ್ಬಣ್ಣ, ಸಾಹಿತ್ಯದ ಕೊಲೆಯೇ ಆಯಿತು"—ಅಂತ ಯಾರೋ ಸದಾಶಿವರಾಯರಿಗೆ ವರದಿ ಮಾಡಿದರು. ಸದಾಶಿವರಾಯರಿಗೆ ಇವರಿಂದ ಬಲು ಖೇದವುಂಟಾಯಿತಂತೆ. ಈ ಸಮಾಚಾರ ಹೇಗೋ ಸುಬ್ಬಣ್ಣನವರ ಕಿವಿ ಮುಟ್ಟಿತು. ಆ ದಿನದಿಂದಲೇ ಎರಡು ತಿಂಗಳುಕಾಲ ಸುಬ್ಬಣ್ಣ ಅಜ್ಞಾತವಾಸಕ್ಕೆಗೊಂಡರು. ಹಗಲೂ ರಾತ್ರಿ ಎನ್ನದೆ ಅದೊಂದೇ ಕೀರ್ತನೆಯನ್ನು ಅಭ್ಯಸಿಸಿ ಕರಗತ ಮಾಡಿಕೊಂಡು ರಾಯರ ಬಳಿಗೆ ಬಂದು ಆ ಕೀರ್ತನೆಯನ್ನು ಅವರ ಸಮ್ಮುಖದಲ್ಲಿ ಹಾಡಲನುಮತಿ ಬೇಡಿದರು. ಹಾಡುಗಾರಿಕೆಯ ವೈಖರಿಯನ್ನು ಕೇಳಿ ಸದಾಶಿವರಾಯರು ಆನಂದಬಾಷ್ಪ ಸುರಿಸುತ್ತ "ಅಪ್ಪ ಸುಬ್ಬಣ್ಣ! ಹಿಂದೆ ನಿನ್ನನ್ನು ಆಕ್ಷೇಪಿಸಿದ್ದುಂಟು. ಅಪರಾಧವಾಯಿತು ನನ್ನಿಂದ. ನನ್ನ ಕೀರ್ತನೆಯನ್ನು ಹಾಡಬೇಕಾದರೆ ನೀನೆ ಸರಿ ಸುಬ್ಬಣ್ಣ. ನಾನು ಜಾತಿಯಲ್ಲಿ ಬ್ರಾಹ್ಮಣ; ನಿನಗೆ ನಮಸ್ಕಾರಮಾಡಿದರೆ ಅಶ್ರೇಯಸ್ಸು. ಇಗೋ ನಿನಗೆ ಬದಲು ದೇವರಿಗೆ ವಂದಿಸುತ್ತೇನೆ"—ಅಂದರಂತೆ. ಅಂದಿನಿಂದ ಸುಬ್ಬಣ್ಣ ಯಾವ ಕೀರ್ತನೆಯನ್ನು ಹಾಡಬೇಕಾದರೂ, ಸುಪ್ರಸಿದ್ಧ ಸಾಹಿತಿಗಳಾಗಿದ್ದ ಸೋಸಲೆ ಗರಲಪುರಿಶಾಸ್ತ್ರಿಗಳ ಬಳಿ ಪೂರ್ವಭಾವಿಯಾಗಿ ಹೋಗಿ, ಸಾಹಿತ್ಯದ ಅರ್ಥವನ್ನು ವಿಶದವಾಗಿ ತಿಳಿದುಕೊಂಡು ಬರುವುದು ವಾಡಿಕೆಯಾಯಿತು. ಅರ್ಥಾನುಸಂಧಾನ ಮಾಡಿ

ಕೊಂಡು ಹಾಡುತ್ತಿದ್ದುದರಿಂದ ಭಾವಭರಿತವಾದ ಅವರ ಗಾಯನ ಸ್ವರ್ಗೀಯವಾಯಿತು.

ಬೆಂಗಳೂರಿನಲ್ಲಿ ಚಂದ್ರಾಸಾನಿ ಎಂಬ ಒಬ್ಬ ನಾಯಕಸಾನಿ. ಆಕೆಗೆ ಸನ್ಮಾನಮಾಡಬೇಕೆಂಬ ಅಭಿಲಾಷೆಯಿಂದ ಅಳಿಯ ಲಿಂಗರಾಜೇ ಅರಸಿನವರು ಒಂದು ಭಾರಿ ಸಭೆಯನ್ನು ಸೇರಿಸಿ ಎರಡು ಕೈಗಳಿಗೂ ಎರಡು ತೋಡಗಳನ್ನು ಕೊಟ್ಟರಂತೆ. 'ವಿದ್ವಾಂಸರ ಅನುಮತಿಯಿಲ್ಲದೆಯೇ ಈಕೆಗೆ ಹೇಗೆ ಸಂಭಾವನೆ ಮಾಡಿದಿರಿ?' ಎಂದು ಸವಾಲು ಹಾಕಿದರಂತೆ ಸುಬ್ಬಣ್ಣ. ಆಗ, ಲಿಂಗರಾಜೇ ಅರಸಿನವರು ಸುಬ್ಬಣ್ಣನವರನ್ನು ಬರಮಾಡಿಕೊಂಡು ಅವರೆದುರಿಗೆ ಚಂದ್ರಾಸಾನಿಯ ಗಾಯನವನ್ನೇರ್ಪಡಿಸಿ ಅನಂತರ ಅವರ ಕೈಯಿಂದಲೇ ಆ ತೋಡಗಳನ್ನು ಕೊಡಿಸಿದರಂತೆ. ಅಂಥ ಕೆಚ್ಚಿನ ವಿದ್ವಾಂಸರು ಸುಬ್ಬಣ್ಣ.

ಕಡುಬಡತನದಲ್ಲಿದ್ದಾಗ್ಯೂ ಕೂಡ ತಮ್ಮ ಆತ್ಮಗೌರವಕ್ಕಾಗಲೀ ಪಾಂಡಿತ್ಯಕ್ಕಾಗಲೀ ಲೋಪಬಂದರೆ ಸುಬ್ಬಣ್ಣ ಸ್ವಲ್ಪವೂ ಸಹಿಸುತ್ತಿರಲಿಲ್ಲ. ತುರುವೇಕೆರೆ ಅರಸಿನವರ ಬಂಗಲೆಯಲ್ಲಿ ಒಂದು ವಿವಾಹ. ಮೂಗೂರು ಸುಬ್ಬಣ್ಣನವರ ಕಛೇರಿ ಏರ್ಪಾಡಾಗಿತ್ತು. ಅವರಿಗೆ ಐನೂರು ರೂಪಾಯಿಗಳನ್ನೂ ಒಂದು ಜೊತೆ ಶಾಲನ್ನೂ ಸಂಭಾವನೆ ಮಾಡುವುದೆಂದು ತೀರ್ಮಾನವಾಗಿತ್ತು. ಸುಬ್ಬಣ್ಣನವರೂ, ಅವರ ತಮ್ಮ ಚಿಕ್ಕಸುಬ್ಬಣ್ಣ, ಮತ್ತು ಶಿಷ್ಯರು ಎಲ್ಲರೂ ಸಕಾಲಕ್ಕೆ ಆಗಮಿಸಿದರು. ಜೋಡಿ ತಂಬೂರಿ ಶ್ರುತಿಯಾಯಿತು. ಸುಬ್ಬಣ್ಣ ಎಂದೂ ಒಂದು ತಂಬೂರಿಯಮೇಲೆ ಹಾಡಿದವರಲ್ಲ. ಶ್ರುತಿಮಾಡಿದ ಬಳಿಕ ಕೊನೆಯಪಕ್ಷ ಹದಿನೈದು ನಿಮಿಷಗಳಾದರೂ ಶ್ರುತಿಯನ್ನು ಕಿವಿಗೊಟ್ಟು ಆಲಿಸಿ ನಾದಾನುಸಂಧಾನ ಮಾಡಿಕೊಳ್ಳದೇ ಕಛೇರಿ ಪ್ರಾರಂಭಮಾಡುತ್ತಿರಲಿಲ್ಲ. ಅಂದು ಕಛೇರಿ ಪ್ರಾರಂಭವಾದ ಕೊಂಚ ಹೊತ್ತಿನಲ್ಲೇ ಹಿಂದೆ ಕೂತಿದ್ದ ಸಭಿಕರೊಬ್ಬರು ಪಿಸುಮಾತಿಗೆ ಆರಂಭಿಸಿದರಂತೆ. "ಚಿಕ್ಕ ಸುಬ್ಬು, ತಂಬೂರಿಗೆ ಗವಸು ಹಾಕು" ಅಂತ ಹೇಳಿ ಮೇಲೆದ್ದರಂತೆ ಮೂಗೂರು ಸುಬ್ಬಣ್ಣ. ಮನೆಯ ಯಜಮಾನರಿಗೆ ಯಾವುದೂ ಅರ್ಥವಾಗಲಿಲ್ಲ. ಆಗಂದರು ಸುಬ್ಬಣ್ಣ "ಸಂಗೀತವೆಂಬುದು ಎಲ್ಲರ ಪಾಲಿಗೂ ಬಂದುದಲ್ಲ. ಇದೊಂದು ಉಗ್ರತಪಸ್ಸಿನಂತೆ.

ನಮ್ಮ ಜನ್ಮವನ್ನೇ ಅದಕ್ಕಾಗಿ ಧಾರೆಯೆರೆದು ಆರ್ಜಿಸಿದ ವಿದ್ಯೆಗೆ ತಕ್ಕ ಪುರಸ್ಕಾರ ಲಭ್ಯವಾಗದ ಸ್ಥಳಕ್ಕೆ ನಾವು ಬರುವುದು ಉಚಿತವಲ್ಲ ಶಿವನೇ" ಎಂದು. ಸಭಿಕರು ಕೈ ಮುಗಿದು ವಿನಯದಿಂದ ಪ್ರಾರ್ಥಿಸಿಕೊಂಡ ಮೇಲೆ ಕಛೇರಿ ಮತ್ತೆ ಪ್ರಾರಂಭವಾಯಿತಂತೆ!





ಪಟ್ಣಂ ಸುಬ್ರಹ್ಮಣ್ಯಯ್ಯರ್

# ಪಟ್ಣಂ ಸುಬ್ರ್ರಹ್ಮಣ್ಯ ಅಯ್ಯರ್

ನನ್ನ ಆರಾಧ್ಯಮೂರ್ತಿಯಾದ ಗುರುದೇವನನ್ನು ಕಾಣುವ ಉತ್ಸಾಹ ಭರದಲ್ಲಿ ಪ್ರಯಾಣದ ತ್ರಾಸವಾಗಲೀ ಕಂಡರಿಯದ ಸ್ಥಳಕ್ಕೆ ಮೊದಲ ಬಾರಿಗೆ ಏಕಾಏಕಿಯಾಗಿ ಹೊರಟಿದ್ದರ ಪರಿಣಾಮವಾಗಿ ಮನಸ್ಸಿನಲ್ಲಿ ಕಳವಳವಾಗಲೀ ತಲೆದೋರಲಿಲ್ಲ. ಎದುರುಗಿದ್ದ ಗುರಿಯನ್ನು ಹೇಗಾದರೂ ಮಾಡಿ ಸಾಧಿಸಬೇಕೆಂಬ ದೀಕ್ಷೆ ತೊಟ್ಟಿದ್ದೆ. ಬಹುದಿನದಿಂದ ಮಾಡಿದ ಕೃಷಿಯ ಫಲವಾಗಿ ಆಸೆ ನೆರವೇರುವ ಭರವಸೆ ಕಾಣತೊಡಗಿತ್ತು. ತಿರುವೆಯಾರನ್ನು ನಾನು ತಲಪಿದಾಗ ಬೆಳಿಗ್ಗೆ ಸುಮಾರು ಹತ್ತು ಘಂಟೆಯ ಸಮಯ. ಆ ವೇಳೆಗಾಗಲೇ ನೆತ್ತಿಯಮೇಲೆ ಸೂರ್ಯನ ಉಗ್ರತಾಂಡವ ಪ್ರಾರಂಭವಾಗಿತ್ತು. " ಈ ಉರಿ ಬೇಸಗೆಯನ್ನು ಸಹಿಸಿಕೊಂಡು ಜೀವನ ಮಾಡುವುದಾದರೂ ಹೇಗೆ ? ನಿಜವಾಗಿಯೂ ನನ್ನ ವ್ಯಾಸಂಗ ಸಾಂಗವಾಗಿ ನಡೆದೀತೇ ? " ಎಂಬ ವ್ಯಾಕುಲತೆ ಕ್ರಮಕ್ರಮವಾಗಿ ನನ್ನನ್ನಾವರಿಸ ತೊಡಗಿತು. ಮನಸ್ಸನ್ನು ಬಿಗಿ ಹಿಡಿದೆ. ಕಾವೇರಿಯಲ್ಲಿ ಆನಂದವಾಗಿ ಮುಳುಗು ಹಾಕಿ, ಮನೆದೇವರನ್ನು ಭಕ್ತಿಪುರಸ್ಸರವಾಗಿ ಸ್ಮರಿಸಿ, ಅವಸರವಸರವಾಗಿ ಗುರುಗಳ ದರ್ಶನಭಾಗ್ಯ ಪಡೆಯಲುದ್ಯುಕ್ತನಾದೆ. ಪ್ರಣತಾರ್ತಿಹರಸ್ವಾಮಿ ದೇವಾಲಯದ ಮಗ್ಗುಲಿನಲ್ಲೇ ಗುರುಗಳ ಮನೆ ಎಂಬ ವಿವರವನ್ನು ಮೈಸೂರಿನಿಂದ ಹೊರಡುವಾಗಲೇ ಸಂಗ್ರಹಮಾಡಿದ್ದೆ. ದೇವಸ್ಥಾನವನ್ನು ತಲುಪುವುದು ಅಷ್ಟೇನೂ ಪ್ರಯಾಸವಾಗಲಿಲ್ಲ. ಆದರೆ, ಗುರುಗಳ ಮನೆ ದೇವಾಲಯದ ಬಲಭಾಗದಲ್ಲೋ ಅಥವಾ ಎಡಭಾಗದಲ್ಲೋ ಎಂಬುದು ಈ ಸಮಯಕ್ಕೆ ಸರಿಯಾಗಿ ಮರೆತಿತ್ತು. ದೇವಾಲಯದ ಬಲಭಾಗದಲ್ಲಿದ್ದ ಮನೆಯೊಂದರ ಮುಂಭಾಗದಲ್ಲಿ ನಿಂತೆ. " ಏನೆಂದು ಸಂಬೋಧಿಸಬೇಕು ? ನನ್ನ ಹರುಕು ಮುರುಕು ತಮಿಳು ಅವರಿಗೆ ಅರ್ಥವಾದೀತೇ ? " ಎಂಬ ಸಂಕೋಚ ಬಾಯಿಗೆ ಬೀಗಮುದ್ರೆಯನ್ನೊತ್ತಿತ್ತು. ಚೆದುರಿದ್ದ ಧೈರ್ಯಸ್ಥೈರ್ಯಗಳನ್ನು ಮತ್ತೆ ಒಂದುಗೂಡಿಸಿ, " ಗುರುಗಳೇ " ಎಂದು ಒಂದುಬಾರಿ ಕೂಗುಹಾಕಿದೆ. ಮರುಕ್ಷಣದಲ್ಲೇ ಮುಚ್ಚಿದ ಬಾಗಿಲು ತೆರೆಯಿತು. ಭವ್ಯಮೂರ್ತಿಯೊಂದು ಬಾಗಿಲ ಬಳಿ ಗೋಚರ

ವಾಯಿತು. ಅವರನ್ನು ನೋಡಿದೊಡನೆಯೇ ಸಾಕ್ಷಾತ್ ಪರಮೇಶ್ವರನನ್ನು ಕಂಡಂತೆ ಭಾಸವಾಯಿತು.

ಮ ಹಾ ತೇ ಜ ಸ್ವಿ, ಸ್ಫು ರ ದ್ರೂ ಪಿ : ಹ ಣೆ ಯ ಲ್ಲಿ ವಿಭೂತಿ, ಕೊರಳಿನಲ್ಲಿ ರುದ್ರಾಕ್ಷಿಮಾಲೆ. ನೋಡಿದೊಡನೆಯೇ ಪರಿಚಿತಮುಖವೆಂದು ಗೊತ್ತಾದರೂ, ಅವರಾರು? ನಾನೆಲ್ಲಿ ನೋಡಿದ್ದಿರಬಹುದು? ಎನ್ನುವುದು ಮಾತ್ರ ಮನಸ್ಸಿಗೆ ಹೊಳೆಯಲಿಲ್ಲ. " ಎನ್ನ ? ಯಾರ್ ನೀ?" ಎಂದು ಅವರು ಪ್ರಶ್ನೆಮಾಡಿದರು. " ಪಟ್ಣಂ ಸುಬ್ರಹ್ಮಣ್ಯಯ್ಯರ್ ವೀಡ್ ......" ಎಂದು ತಡವರಿಸುತ್ತ ನುಡಿಯಲೆತ್ನಿಸುತ್ತಿರುವಷ್ಟರಲ್ಲೇ ಎದುರಿಗಿದ್ದ ವ್ಯಕ್ತಿಯ ಮುಖ ಗಂಟಿಕ್ಕಿತು. ಮುಖದ ಗಾಂಭೀರ್ಯ ಅದೃಶ್ಯವಾಗಿ, ಕೋಪದ ಕಾವು ಕಂಡು ಬಂತು. ಮರುಮಾತಾಡದೆಯೇ ಬಾಗಿಲನ್ನು ಧಡೀರನೆ ಮುಚ್ಚಿಕೊಂಡು ಆ ವ್ಯಕ್ತಿ ಅದೃಶ್ಯವಾಯಿತು. ಪ್ರಪ್ರಥಮದ ಈ ವಿಚಿತ್ರ ಆತಿಥ್ಯದಿಂದ ನನ್ನ ಹಣೆಯಮೇಲೆ ಬೆವರುಹನಿ ಸಾಲಿಟ್ಟಿತು. ಮುಂದೆ ಹೇಗೆ ಈ ಅಪರಿಚಿತ ಸ್ಥಳದಲ್ಲಿ ಏಗುವುದು ಎಂಬ ದಿಗಿಲುಂಟಾಯಿತು. " ಪಟ್ಣಂ ಸುಬ್ರಹ್ಮಣ್ಯಯ್ಯರ್ " ಎಂಬ ಹೆಸರು ಕಿವಿಗೆ ಬಿದ್ದೊಡನೆಯೇ ಆ ವ್ಯಕ್ತಿ ವೃಶ್ಚಿಕದಷ್ಟರಾದವರಂತೆ ಚಕಿತರಾದರೇಕೆ? ಎಂಬ ಸಮಸ್ಯೆ ಬಗೆಹರಿಯದೆಯೇ ನನ್ನಲ್ಲಿಯೇ ನಿಂತಿತು. ಮನಸ್ಸನ್ನು ಮತ್ತೆ ಒಂದು ಸ್ಥಿಮಿತಕ್ಕೆ ತಂದುಕೊಂಡು ದೇವಸ್ಥಾನದ ಎಡಭಾಗದಲ್ಲಿದ್ದ ಮನೆಯ ಮುಂದೆ ಬಾಗಿಲನ್ನು ತಟ್ಟಿದೆ. ಮತ್ತೇನು ವಿಪತ್ತು ಕಾದಿದೆಯೋ ಎಂದು ಮನಸ್ಸಿಗೆ ಕಾತುರವಾಯಿತು. ಬಾಗಿಲನ್ನು ತೆರೆದುಕೊಂಡು ಈ ಬಾರಿ ಬಂದವರು ನನ್ನ ಗುರುಗಳೇ ಆಗಿದ್ದರು! ಯಾರು ನೀನು " ಎಂದು ಅವರು ಪ್ರಶ್ನೆಮಾಡುವಷ್ಟರಲ್ಲಿ ನಾನು ಹೆಗಲಮೇಲಿದ್ದ ಉತ್ತರೀಯವನ್ನು ಸೊಂಟಕ್ಕೆ ಸುತ್ತಿ ಅವರ ಪಾದಕಮಲಗಳಿಗೆ ಸಾಷ್ಟಾಂಗವೆರಗಿದೆ. ನನ್ನ ತಲೆಯಮೇಲೆ ಕೈಯ್ಯಾಡಿಸಿ " ಮೇಲೇಳು" ಎಂದು ನುಡಿದರು ಗುರುಗಳು. " ನನ್ನ ಹೆಸರು ವಾಸುದೇವ, ಮೈಸೂರು ನನ್ನ ಸ್ಥಳ. ತಮ್ಮಲ್ಲಿ ಶಿಷ್ಯವೃತ್ತಿಮಾಡಬೇಕೆಂಬ ಆಸೆಯಿಂದ ಅರಮನೆಯ ಸಹಾಯಪಡೆದು ಇಲ್ಲಿಗೆ ಬಂದಿದ್ದೇನೆ. ಈ ಪತ್ರವನ್ನು ಪರಾಂಬರಿಸಬೇಕು" ಎಂದು ಅರ್ಧ ಕನ್ನಡ ಅರ್ಧ ತಮಿಳು ಮಿಶ್ರವಾದ ಭಾಷೆಯಲ್ಲಿ ಆತ್ಮ ಪರಿಚಯಮಾಡಿಕೊಂಡು, ಮಹಾಸ್ವಾಮಿಯವರಿಂದ ತೆಗೆದು

ಕೊಂಡಿದ್ದ ಪತ್ರವನ್ನು ಅವರಿಗೊಪ್ಪಿಸಿದೆ. “ ಸಂತೋಷ. ಒಳಗೆ ಬಾ. ಸ್ನಾನಮಾಡು. ಊಟವಾಗಲಿ, ಅನಂತರ ಉಳಿದ ವಿಷಯವನ್ನು ಆಲೋಚಿಸೋಣ ” ಎಂದರು ಗುರುಗಳು. “ ಸ್ನಾನವಾಗಿದೆ ಗುರುಗಳೇ ” ಎಂದೆ. “ ಸರಿ ಹಾಗಾದರೆ, ಬಾ ಊಟ ಮಾಡೋಣ ” ಅಂದರು. ಭೋಜನದ ವೇಳೆಯಲ್ಲಿ ಸಾವಕಾಶವಾಗಿ ಮಾತುಕತೆ ನಡೆಯಿತು. “ ನಿನ್ನನ್ನು ಎಲ್ಲೋ ನೋಡಿದಹಾಗೆ ಜ್ಞಾಪಕ. ಪರಿಚಿತ ಮುಖ ” ಎಂದರು ಗುರುಗಳು. “ ಮೈಸೂರಿಗೆ ತಾವು ದಯಮಾಡಿಸಿದ್ದಾಗ್ಗೆ ಪಾಠಶಾಲೆಯಲ್ಲಿ ತಮ್ಮ ಕಛೇರಿಯಾದ ದಿನ ತಮ್ಮ ದರ್ಶನಲಾಭ ಪ್ರಾಪ್ತವಾಗಿತ್ತು ನನಗೆ. ನನ್ನನ್ನು ಶಿಷ್ಯನನ್ನಾಗಿ ಅಂಗೀಕರಿಸಿ ಕಾಪಾಡಬೇಕೆಂದು ಪ್ರಾರ್ಥಿಸಿಕೊಂಡಾಗ ‘ ಭಗವದಿಚ್ಛೆಯಿದ್ದರೆ ,ಯಾಕಾಗ ಬಾರದು ? ಎಂದು ಅಪ್ಪಣೆಕೊಡಿಸಿದ್ದಿರಿ ’ ಎಂದು ಪೂರ್ವವೃತ್ತಾಂತವನ್ನು ಜ್ಞಾಪಕಮಾಡಿಕೊಟ್ಟೆ. “ ಅಂತೂ ಇಬ್ಬರೂ ಹಳೆಯ ನೆಂಟರೇ ಹಾಗಾದರೆ ! ” ಎಂದು ನಕ್ಕರು. ನನ್ನ ಮಾತಾಪಿತೃಗಳು, ಸಂಸ್ಕೃತ ವ್ಯಾಸಂಗ, ಸಂಗೀತದಲ್ಲಿ ನನಗೆ ಅಭಿರುಚಿ ಹುಟ್ಟಿದ ಬಗೆ, ಅದುವರೆಗೆ ನನಗೆ ಸಂಗೀತದಲ್ಲಿ ನಡೆದಿದ್ದ ಪಾಠಪ್ರವಚನಗಳು ಇತ್ಯಾದಿ ವಿಷಯಗಳ ಬಗ್ಗೆ ಪ್ರಶ್ನೆಮಾಡಿ ನನ್ನಿಂದ ವಿವರಗಳನ್ನು ಪಡೆದುಕೊಂಡರು. ಊಟವಾದ ಮೇಲೆ ಮನೆಯ ಪಡಸಾಲೆಗೆ ಬಂದು ಆರಾಮ ಕುರ್ಚಿಯಲ್ಲಿ ಕುಳಿತು ತಾಂಬೂಲವನ್ನು ಹಾಕಲುಪಕ್ರಮಿಸಿದರು. ಪಕ್ಕದಲ್ಲಿ ನಾನು ಕೈಕಟ್ಟಿಕೊಂಡು ನಿಂತೆ: “ಕುಳಿತುಕೋ, ವಾಸು” ಎಂದರು. ಸ್ವಲ್ಪ ಹೊತ್ತಿನ ನಂತರ ಗುರುಗಳ ಅನುಗ್ರಹಕ್ಕೆ ಪಾತ್ರನಾಗುವ ಸುಕೃತ ನನ್ನಪಾಲಿ ಗುಂಟೇ ಎಂದು ಕೇಳಿದೆ. “ ಆಗಬಹುದು, ವಾಸು. ತಿಳಿದ ನಾಲ್ಕಕ್ಷರಗಳನ್ನು ಸಂತೋಷವಾಗಿ ಹೇಳಿಕೊಡುತ್ತೇನೆ. ನಿಮ್ಮ ಮಹಾರಾಜರಿಗೂ ಇಷ್ಟರಲ್ಲೇ ಪತ್ರ ಬರೆಯುತ್ತೇನೆ” ಎಂದರು. ‘ ಕೃತಾರ್ಥನಾದೆ ’ ಎಂದು ಗುರುಗಳಿಗೆ ದೀರ್ಘದಂಡ ಪ್ರಣಾಮಮಾಡಿದೆ. ನನಗಾದ ಆನಂದಕ್ಕೆ ಮೇರೆ ಮಿತಿಯಿರಲಿಲ್ಲ. ಉಲ್ಲಾಸದಿಂದ ಮೈಯುಬ್ಬಿತು.

ನಮ್ಮ ಗುರುಗಳ ಮನೆಯಲ್ಲಿ ಆಗಿದ್ದವರೆಂದರೆ ಅವರ ಅತ್ತೆ, ಪತ್ನಿ, ನಾದಿನಿ, ಇಷ್ಟೇ ಮಂದಿ. ಮಕ್ಕಳಿರಲಿಲ್ಲ. ಪರಮೇಶ್ವರಯ್ಯ ಮತ್ತು ಕೊಯಮುತ್ತೂರಿನ ಕೆಂಪೇಗೌಡರೆಂಬ ಇಬ್ಬರು ಶಿಷ್ಯರು. ಈ ಇಬ್ಬರ ಜೊತೆಗೆನಾನೂ ಸೇರಿದೆ. ಗುರುಸೇವೆಯನ್ನು ಮೂವರು ಹಂಚಿಕೊಂಡಿದ್ದೆವು.

ಗುರುಗಳ ಧೋತ್ರ, ಅವರ ಪತ್ನಿಯ ಸೀರೆಗಳನ್ನು ನದಿಗೆ ತೆಗೆದುಕೊಂಡು ಹೋಗಿ ಒಗೆದು ಮಡಿಮಾಡಿ ತರುವುದು, ತಾಮ್ರದ ಕೊಡಗಳನ್ನು ಶುಭ್ರವಾಗಿ ತೊಳೆದು ಕುಡಿಯುವ ನೀರನ್ನು ತರುವುದು, ದೇವರ ಪಾತ್ರೆಗಳನ್ನು ತೊಳೆದುಕೊಡುವುದು, ರಾತ್ರಿಯವೇಳೆ ಗುರುಗಳಿಗೆ ಹಾಸಿಗೆಯನ್ನು ಹಾಸಿಕೊಟ್ಟು ಅವರಿಗೆ ನಿದ್ದೆ ಬರುವವರೆಗೆ ಮೈ ಕೈ ಒತ್ತುವುದು ಇವು ನನ್ನ ಪಾಲಿನ ಕರ್ತವ್ಯಗಳಾಗಿದ್ದವು. ಸ್ವಭಾವತಃ ನಾನು ಸ್ವಲ್ಪ ಸೋಮಾರಿ. ಮೈಮುರಿದು ಕೆಲಸಮಾಡುವುದೆಂದರೆ ಅಷ್ಟಕ್ಕಷ್ಟೇ. ಮೊದ ಮೊದಲು ಈ ಕರ್ತವ್ಯಪಾಲನೆ ಶ್ರಮಸಾಧ್ಯವೆನ್ನಿಸಿತು. ಕಾಲಕ್ರಮೇಣ ಸೊಂಟ ಬಗ್ಗಿಸಿ ಕೆಲಸಮಾಡುವುದು ತನ್ನಷ್ಟಕ್ಕೆತಾನೇ ಅಭ್ಯಾಸವಾಯಿತು. ಒಂದೊಂದು ದಿನ ಕೆಂಪೇಗೌಡರ ಸಂಗಡ ಗುರುಗಳ ಮನೆಯ ದನಕರುಗಳನ್ನು ಮೇಯಿಸುವುದಕ್ಕೆ ಹುಲ್ಲುಗಾವಲಿಗೆ ಅಟ್ಟಿಕೊಂಡು ಹೋಗಬೇಕಾಗಿ ಬರುತ್ತಿತ್ತು. ಆದರೆ ಇದು ಬಹು ದಿವಸ ನಡೆಯಲಿಲ್ಲ. ಕಾರಣವೇನೆಂದರೆ, ಒಂದು ದಿನ ಗೌಡರೂ ನಾನೂ ದನಕರುಗಳನ್ನು ವಾಪಸ್ಸು ಅಟ್ಟಿಕೊಂಡು ಸಂಜೆ ಮನೆಗೆ ಬರುತ್ತಿರುವಾಗ್ಗೆ, ಗೌಡರು "ವಾಸು ! ನೀನು ಅಟ್ಟಿಕೊಂಡು ಹೋಗುತ್ತಿರು. ನಾನು ಸ್ವಲ್ಪ ಇಲ್ಲೇ ಹೋಗಿಬರುತ್ತೇನೆ" ಎಂದು ಬೇರೊಂದು ರಸ್ತೆಯನ್ನು ಹಿಡಿದರು. ಅತಿ ಪ್ರಯಾಸಪಟ್ಟು ದನಕರುಗಳನ್ನು ಜಾಗರೂಕತೆಯಿಂದ ಸಾಗಿಸಿಕೊಂಡು ಬರುತ್ತಿದ್ದೆ. ಮನೆ ಸೇರುವಷ್ಟರಲ್ಲಿ ಒಂದು ಅಚಾತುರ್ಯ ನಡೆಯಿತು. ದಾರಿಯಲ್ಲಿ ಬಿಸಲಿಗೆ ಹರವಿದ್ದ ತೊಗರಿಯನ್ನು ದನಗಳು ಮೇಯ್ದುಬಿಟ್ಟವು. ಮಾಲೀಕ ಇದನ್ನು ತಿಳಿದು ನನ್ನನ್ನು ಮೂದಲಿಸಿದ್ದು ಮಾತ್ರವೇ ಅಲ್ಲದೆ ನನ್ನ ಸಂಗಡಲೇ ಬಂದು ನಮ್ಮ ಗುರುಗಳಿಗೂ ದೂರು ಹೇಳಿದ. ನಡೆದ ಸಂಗತಿಯೆಲ್ಲವನ್ನೂ ಮುಚ್ಚುಮರೆಯಿಲ್ಲದೆ ತಿಳಿಸಿ "ನನಗೆ ಈ ಕೆಲಸ ಅಭ್ಯಾಸವಿಲ್ಲ ಗುರುಗಳೇ, ಕ್ಷಮಿಸಬೇಕು" ಎಂದೆ. ಅಂದಿನಿಂದ ನನಗೆ ದನ ಅಟ್ಟಿಕೊಂಡು ಹೋಗುವ ಕೆಲಸ ತಪ್ಪಿತು.

ಗುರುಗಳನ್ನಾಶ್ರಯಿಸಿ ಕೆಲವು ತಿಂಗಳುಗಳಾಗುತ್ತ ಬಂದರೂ ಇನ್ನೂ ನನಗೆ ಪಾಠ ಪ್ರಾರಂಭಮಾಡಿರಲಿಲ್ಲ. ನನಗೆ ವಿಧಾಯಕವಾಗಿದ್ದ ದಿನಚರಿಯೆಂದರೆ, ಬೆಳಗಿನ ಝಾವ ಎದ್ದು ಗುರುಗಳು ಸಾಧಕಮಾಡುವ ವೇಳೆ ತಂಬೂರಿ ಮೀಟುತ್ತ ಕುಳಿತಿರುವುದು, ಪರಮೇಶ್ವರಯ್ಯರಿಗೆ ಪಾಠ ನಡೆ

ಯುವ ವೇಳೆ ಕೇಳುತ್ತಿರುವುದು, ಗುರುಗಳು ಊಟವಾದಮೇಲೆ ಒಬ್ಬರೇ ಕುಳಿತು ಕೃತಿರಚನೆಯಲ್ಲಿ ತೊಡಗಿರುವಾಗ್ಗೆ ಪಕ್ಕದಲ್ಲಿರುವುದು, ಗುರುಗಳ ಕಛೇರಿಗಳಿಗೆ ಸಂಗಡ ಹೋಗಿ ಬರುವುದು, ಇಷ್ಟೆ. ಗುರುಗಳ ಅಪ್ಪಣೆ ಯನ್ನೇನೋ ಚಾಚೂ ತಪ್ಪದೇ ನಡೆಸುತ್ತಿದ್ದೆನಾದರೂ ಪಾಠ ಕಲಿಯ ಬೇಕೆಂಬ ಅಭಿಲಾಷೆ ಮಿತಿಮೀರುತ್ತ ಬಂದಿತ್ತು. ಎಂದಿನಿಂದ ವಿದ್ಯಾದಾನ ಮಾಡುತ್ತಾರೋ ಎಂದು ಚಾತಕಪಕ್ಷಿಯಂತೆ ಕಾದಿದ್ದೆ. ಎಂದು ಮಾಡುವಿರಿ ಎಂದು ಕೇಳಲು ಮಾತ್ರ ಸಾಹಸಮಾಡಿರಲಿಲ್ಲ. ನನ್ನ ಇಂಗಿತವನ್ನರಿ ಯಲು ಗುರುಗಳಿಗೆ ದೀರ್ಘಕಾಲವೇನೂ ಬೇಕಾಗಲಿಲ್ಲ. ಒಂದು ದಿನ ಮಧ್ಯಾಹ್ನ ಭೋಜನವಾದನಂತರ ಪಡಸಾಲೆಯಲ್ಲಿ ಕೂತಿರುವಾಗ್ಗೆ ಗುರು ಗಳೇ ವಿಷಯವನ್ನು ಪ್ರಸ್ತಾಪಿಸಿದರು.

" ವೃಥಾ ಕಾಲಹರಣವಾಗುತ್ತಿದೆಯೆಂದು ಯೋಚಿಸುತ್ತಿದ್ದೀಯಾ, ವಾಸು ? "

" ಇಲ್ಲ, ಗುರುಗಳೇ ".

" ನಿನಗೆ ವಿದ್ಯಾರ್ಜನೆಮಾಡಬೇಕೆಂದಿರುವ ಆಸೆ, ಆತುರ, ಎರಡೂ ನನಗೆ ತಿಳಿಯದೇ ಇಲ್ಲ. ಇಷ್ಟು ದಿನವೂ ವೃಥಾ ಕಾಲಹರಣವಾಯಿ ತೆಂದು ಭಾವಿಸಬೇಡ. ನಿನ್ನ ವ್ಯಾಸಂಗಕ್ಕೆ ಅಸ್ತಿಭಾರವನ್ನು ಸಿದ್ಧಗೊಳಿಸು ತ್ತಿದ್ದೆ. ಸಂಗೀತ ಕಲಿಯಬೇಕೆಂದವನಿಗೆ ಸಂಗೀತದ ಕೇಳ್ಮೆಯಿಂದಾಗುವ ಪ್ರಯೋಜನ ಅಷ್ಟಿಷ್ಟಲ್ಲ. ಏಕಾಗ್ರಚಿತ್ತತೆಯಿಂದ ಕೇಳಿದನಂತರ ಯಾವುದೇ ಕೀರ್ತನೆಯನ್ನಾಗಲೀ ವರ್ಣವನ್ನಾಗಲೀ ನಿಮಿಷಮಾತ್ರದಲ್ಲಿ ಕರಗತ ಮಾಡಿಕೊಳ್ಳಬಹುದು. ದೇವಾಲಯದ ಪ್ರಾಕಾರದ ಪ್ರದಕ್ಷಿಣೆ ಮಾಡಿ ಸಿದ್ದೇನೆ. ಇನ್ನುಳಿದಿರುವುದು ಗರ್ಭಗುಡಿಯ ಪ್ರವೇಶ, ಮೂಲವಿಗ್ರಹದ ದರ್ಶನ. ನಾಳೆಯಿಂದ ಆ ಕೆಲಸ ಪ್ರಾರಂಭಮಾಡುತ್ತೇನೆ, ವಾಸು" ಎಂದರು.

ಅಮೃತ ಧಾರೆಯೆರೆದಂತಾಯಿತು ನನಗೆ. " ತಮ್ಮ ಚಿತ್ತ. ಗುರುಗಳೆ ಅನುಗೃಹೀತೋಸ್ಮಿ" ಎಂದೆ.

ಮಾರನೆಯ ಬೆಳಗ್ಗೆ ಗುರುಗಳ ಅಪ್ಪಣೆಯ ಮೇರೆ, ಕಾವೇರಿಯಲ್ಲಿ ಸ್ನಾನಮಾಡಿ, ತ್ಯಾಗರಾಜರ ಸಮಾಧಿಗೆ ಹೋಗಿ ಭಕ್ತಿಕುಸುಮವನ್ನರ್ಪಿಸಿ ಹಿಂತಿರುಗಿದೆ. ಗುರುಗಳಿಗೆ ತ್ರಿಕರಣ ಪೂರ್ವಕವಾಗಿ ನಮಸ್ಕರಿಸಿದೆ.

"ಯಶೋವಂತನಾಗಿ ಬಾಳು" ಎಂದು ತೆರೆದ ಹೃದಯದಿಂದ ಆಶೀರ್ವದಿಸಿದರು. ಪಾಠ ಪ್ರಾರಂಭವಾಯಿತು. "ನನಗೆ ಬೇಗಡೆ ರಾಗ ಅಂದರೆ ಪಂಚಪ್ರಾಣ. ವೀರರಸ ಹಾಗೂ ಕರುಣಾರಸ ಪ್ರಧಾನವಾದ ಆ ರಾಗದಲ್ಲಿ ಒಂದು ರಾಜಠೀವಿಯಿದೆ, ಗಾಂಭೀರ್ಯವಿದೆ. ಮಧ್ಯಮ ನಡೆಗೆ ಎತ್ತಿದ ರಾಗ ಇದು. ನಿಮ್ಮ ಊರಿನಿಂದ ಪೂಜ್ಯ ಸದಾಶಿವರಾಯರು ಬಂದಿದ್ದಾಗಲೂ ಸಹ ಇದೇ ರಾಗವನ್ನೇ ಅವರೆದುರು ಆಲಾಪನೆಮಾಡಿ, 'ರಾಮನಾಮವೇ ಜೀವನಮು ಓ ಮನಸ' ಎಂಬ ಪಲ್ಲವಿಯನ್ನು ಹಾಡಿದೆ. 'ನಿಮಗಾಗಿಯೇ ಈ ಬೇಗಡೆ ರಾಗ ಜನ್ಮತಾಳಿದೆಯೋ, ಇಲ್ಲವೇ ಬೇಗಡೆ ರಾಗಕ್ಕಾಗಿಯೇ ನೀವು ಜನ್ಮತಾಳಿದ್ದೀರೋ ಅನ್ನುವ ಹಾಗೆ ನಿಮ್ಮ ಹಾಡುಗಾರಿಕೆ. ಬಹುಕಾಲ ನಿಮ್ಮಿಂದ ಇಂಥ ಉತ್ಕೃಷ್ಟ ಗಾನಮಧು ಇತರರಿಗೆ ದೊರೆಯುವಂತೆ ದೇವರು ಮಾಡಿಸಲಿ' ಎಂದು ಆಶೀರ್ವದಿಸಿದರು. ನನಗೆ ಇಷ್ಟು ಪ್ರಿಯವಾದ ಬೇಗಡೆ ರಾಗದಿಂದಲೇ ಇಂದು ನಿನಗೆ ಪಾಠ ಪ್ರಾರಂಭಮಾಡಬೇಕೆಂದಿದ್ದೇನೆ" ಎಂದು ನುಡಿದು ಅವರೇ ರಚಿಸಿದ 'ಮರಚಿಟ್ಲುಂಡೇ' ಎಂಬ ವರ್ಣವನ್ನು ಪ್ರಾರಂಭಿಸಿದರು. ವರ್ಣವೇನೋ ಮೂರು ನಾಲ್ಕು ದಿನಗಳಲ್ಲಿ ಕಂಠಪಾಠವಾಯಿತು. ಆದಾಗ್ಯೂ, ಸುಮಾರು ಮೂರು ತಿಂಗಳವರೆಗೆ ನನಗೆ ಬೇರೆ ಪಾಠವೇ ನಡೆಯಲಿಲ್ಲ. ಹಗಲೂ ರಾತ್ರಿ ಅದೇ ವರ್ಣದ ಸಾಧಕ ನಡೆಯಿತು. ಪ್ರತಿಯೊಂದಾವರ್ತವನ್ನೂ ಕಾಲ, ಮಧ್ಯಮಕಾಲ ಮತ್ತು ತ್ರಿಕಾಲಗಳಲ್ಲಿ ಹಾಡುವುದು ಮತ್ತೆ ಅದನ್ನೇ ತಳಕೆಳಕಾಗಿ ತ್ರಿಕಾಲ, ಮಧ್ಯಮಕಾಲ ಮತ್ತು ಕಾಲದಲ್ಲಿ ಹಾಡುವುದು— ಹೀಗೆ ಕೆಲವು ದಿನ ಸಾಧಕಮಾಡಿಸಿದರು. ಅನಂತರ ದಿನಕ್ಕೊಂದು ಆವರ್ತವನ್ನು ಹಾಡಿಸಿ ಅದರಲ್ಲಿರುವ ರಾಗ ಭಾವವನ್ನು ಹಾಡಿ ತೋರಿಸಿ, ಆ ಆವರ್ತದ ಸ್ವರ ಚೌಕಟ್ಟಿನಷ್ಟರಲ್ಲೇ ರಾಗಾಲಾಪನೆ ಮಾಡಿಸುತ್ತಿದ್ದರು. ಇಷ್ಟಾದಮೇಲೆ "ಇನ್ನು ಬೇಗಡೆ ರಾಗವನ್ನು ಮತ್ತೆ ಪಾಠ ಹೇಳಬೇಕಾಗಿಲ್ಲ. ಅದರ ಮರ್ಮವನ್ನೆಲ್ಲ ಬಿಡಿಸಿ ಹೇಳಿದ್ದೇನೆ. ನಿನಗೆ ಸಾಮರ್ಥ್ಯವಿರುವವರೆಗೆ ನೀನು ಅದನ್ನು ವೃದ್ಧಿಮಾಡಿಕೊಳ್ಳಬಹುದು" ಅಂತ ಹೇಳಿ ಮುಂದಿನ ಪಾಠವನ್ನು ಪ್ರಾರಂಭಿಸಿದರು. ಆಗ ಮಾಡಿದ ಈ ವಿಧದ ಖಚಿತವಾದ, ಕೂಲಂಕಷವಾದ ಅಭ್ಯಾಸಬಲವೇ ಈಗಲೂ ನನ್ನ ತಲೆ ಕಾಯುತ್ತಿರುವುದು ಎಂದರೆ ಖಂಡಿತವಾಗಿ ಅದು ಉತ್ಪ್ರೇಕ್ಷೆಯಾಗುವುದಿಲ್ಲ.

ಒಂದೊಂದು ವೇಳೆ ಗುರುಗಳಿಗೆ ದೇಹಾಲಸ್ಯವಾಗುತ್ತಿದ್ದಾಗ ಹಿರಿಯ ಶಿಷ್ಯ ಪರಮೇಶ್ವರಯ್ಯರನ್ನು ಕರೆದು ನನಗೆ ಸಾಧಕಮಾಡಿಸುವಂತೆ ಅಪ್ಪಣೆ ಮಾಡುತ್ತಿದ್ದರು. ಅಂಥ ಸಂದರ್ಭಗಳಲ್ಲಿ ಪರಮೇಶ್ವರರಿಗೆ ಎಂದೂ ಇಲ್ಲದ ಒಂದು ದರ್ಪ, ಬಿಗುಮಾನ ಬರುತ್ತಿತ್ತು. ನಾನು ಗುರು, ಈತ ಶಿಷ್ಯ ಅನ್ನುವ ತಾರತಮ್ಯವನ್ನು ಪ್ರತಿಯೊಂದು ಕ್ಷಣದಲ್ಲೂ ಅವರು ತೋರ್ಪಡಿಸುತ್ತಿದ್ದರು. ಇದನ್ನು ಕಂಡು ನನಗೆ ಒಳಗೇ ನಗುಬುಗ್ಗೆ ಚಿಮ್ಮುತ್ತಿತ್ತು. ನನ್ನ ಕೈಲಾದಷ್ಟು ನಾನೂ ಅವರ ಹುಚ್ಚಿಗೆ ಧೂಪ ಹಾಕುತ್ತಿದ್ದೆ. ಹೇಳಿಕೊಟ್ಟ ಪಾಠವನ್ನು ಬೇಕೆಂತಲೇ ತಪ್ಪುತ್ತಿದ್ದೆ, ಎಡವರಿಸುತ್ತಿದ್ದೆ. ಪರಮೇಶ್ವರರಿಗೆ ತಾಳ್ಮೆ ಮಾಯವಾಗುತ್ತಿತ್ತು. ನನಗೆ ಪ್ರಯೋಗಗಳ ಸುರಿಮಳೆಯಾಗುತ್ತಿತ್ತು. ತಲೆಯಲ್ಲಿ ಇಷ್ಟು ಜೇಡಿ ಮಣ್ಣು ತುಂಬಿರುವಾಗ ಯಾವ ವಿದ್ಯೆ ತಾನೇ ನಿನ್ನ ಮೆದುಳನ್ನು ಪ್ರವೇಶ ಮಾಡೀತು? ಮೈಸೂರಿಗೆ ಹೋಗಿ ಬೇರೆ ಯಾವುದಾದರೂ ಕಸಬನ್ನಾದರೂ ನೋಡು ಹೋಗು ಎನ್ನುತ್ತಿದ್ದರು. ಅವರು ಅಂದಷ್ಟು ನಾನು ಅಪದ್ಧವನ್ನೇ ಹೇಳುತ್ತಿದ್ದೆ. ಕೊನೆಗೆ ಅವರ ಸಹನೆ ಮೀರಿ 'ಸಾಕು ಪಾಠ ಇವತ್ತಿಗೆ. ಶ್ರುತಿ ಕೂಗು' ಎನ್ನುತ್ತಿದ್ದರು. ಇದೆಲ್ಲವನ್ನೂ ಗುರುಗಳು ಗೋಪ್ಯವಾಗಿಯೇ ಕಂಡುಕೊಂಡು ಮನಸ್ಸಿನಲ್ಲಿಯೇ ವಿನೋದಪಡುತ್ತಿದ್ದರು. ಒಂದು ದಿನ ನಾನು ಹೀಗೆಯೇ ಕುಚೋದ್ಯಮಾಡುತ್ತಿರುವಾಗ ಪರಮೇಶ್ವರರಿಗೆ ಮಿತಿಮೀರಿ ಕೋಪ ಬಂದು ಗುರುಗಳಿಗೆ ದೂರು ಹೇಳ ಹೋದರು. ಗುರುಗಳು ಮಂದಸ್ಮಿತರಾಗಿ ಅವರ ಸಂಗಡಲೇ ನಾನಿದ್ದ ಕೊಠಡಿಗೆ ಬಂದು, 'ಅಯ್ಯಾ, ಪರಮೇಶ್ವರ, ವಾಸು ಶುದ್ಧ ಮಡ್ಡಿ ಅಂತಲೋ ನಿನ್ನ ಭಾವನೆ? ನಿನ್ನ ಈ ಒಣ ದರ್ಪಕ್ಕೆ ಬಗ್ಗುವವನಲ್ಲ ಅವನು. ಅವನೊಡನೇಕೆ ನಿನಗೆ ಸರಸ? ಈಗ ನೋಡು, ಅದೇ ಪಾಠವನ್ನು ನಾನು ಹೇಳಿಸುತ್ತೇನೆ. ಎಲ್ಲಿ ವಾಸು, ಹಾಡು ಈಗ" ಅಂದರು. ನಾನು ಏನೂ ತಿಳಿಯದವನಂತೆ ತಲೆ ತಗ್ಗಿಸಿಕೊಂಡು, ಪರಮೇಶ್ವರರ ಕಡೆ ದೃಷ್ಟಿ ಹೊರಳಿಸದಂತೆ ಪಾಠವನ್ನು ಕ್ರಮವಾಗಿ ಒಪ್ಪಿಸಿದೆ. ಅಂದಿನಿಂದ ಗುರುಗಳ ಪ್ರಾತಿನಿಧ್ಯವನ್ನು ಪರಮೇಶ್ವರರು ವಹಿಸಿಕೊಳ್ಳಲು ಹಿಂಜರಿಯುತ್ತಿದ್ದರು. ಗುರುಗಳು ಎದ್ದು ಹೋದಮೇಲೆ ನನ್ನ ಕಡೆ ತಿರುಗಿ "ಭಲಾ ವಾಸು! ನೀನು ಉತ್ತಮ ಅಭಿನಯಕಾರನೂ ಆಗಿದ್ದೀಯೆ. ನನಗೇ ಟೋಪಿಯೇ" ಎಂದು ಮೂದಲಿಸಿದರು.

ಗುರುಗಳನ್ನು ನಾನು ಎಂದೂ 'ಈ ವರ್ಣವನ್ನು ಹೇಳಿಕೊಡಿ, ಆ ಕೃತಿಯನ್ನು ಕಲಿಸಿಕೊಡಿ' ಎಂದು ಕೇಳಿದವನೇ ಅಲ್ಲ. ಅವರು ಹೇಳಿಕೊಟ್ಟಿದ್ದನ್ನು ಮಾತ್ರ ತಲ್ಲೀನಮನಸ್ಕನಾಗಿ ಗ್ರಹಿಸುತ್ತಿದ್ದೆ. ಒಂದು ದಿನ ಗುರುಗಳೇ ನುಡಿದರು. "ವಾಸು, ನಾನು ಇದುವರೆಗೂ ಸಾಮಾನ್ಯ ವಾಗಿ ಬಳಕೆಯಲ್ಲಿರುವ ರಾಗಗಳನ್ನೇ, ಕೃತಿಗಳನ್ನೇ ನಿನಗೆ ಪಾಠಹೇಳಿ ಅಪರೂಪವಾದದ್ದನ್ನು ಹೇಳಿಕೊಡದೇ ಇರುವುದನ್ನು ನೋಡಿ ನಿನಗೆ ಸ್ವಲ್ಪ ಕುತೂಹಲವಿರಬಹುದು. ನನ್ನ ಅಭಿಮತ ಇದು: ಯಾರೂ ಕೇಳದೇ ಇದ್ದ ರಾಗವನ್ನೋ, ಕೃತಿಯನ್ನೋ ಹಾಡಿ, ಶ್ರೋತೃವರ್ಗದ ಮೆಚ್ಚುಗೆ ಯನ್ನು ಪಡೆಯುವುದು ಸುಲಭಸಾಧ್ಯ. ಪ್ರತಿಯೊಬ್ಬರೂ ಹಾಡುವ ರಾಗವನ್ನೇ, ಕೃತಿಯನ್ನೇ ಹಾಡಿ, ಯಾರೂ ತೋರದೇ ಇದ್ದ ಒಂದು ವೈಶಿಷ್ಟ್ಯವನ್ನೂ, ಸೊಬಗನ್ನೂ ತೋರಿಸುವುದು ವಿದ್ವತ್ತಿನ ಹಿರಿಮೆ" ಎಂದು. ಗುರುಗಳ ಸಿದ್ಧಾಂತ ನನಗೆ ನಾಟಿತು. ಅವರು ತೋರಿಕೊಟ್ಟ ಹಾದಿಯನ್ನೇ ಪಟ್ಟಾಗಿ ಹಿಡಿದು ಮುಂದುವರಿದೆ.

ಹೀಗೆ ನನ್ನ ಆಶಾನೌಕೆ ಸುಗಮವಾಗಿ ಸಾಗುತ್ತಿರುವಲ್ಲಿ ಸುಂಟರ ಗಾಳಿಯೊಂದೆದ್ದು ನೌಕೆಯನ್ನು ಮುಳುಗುವಂತೆ ಮಾಡುವುದರಲ್ಲಿತ್ತು. ನಾನು ರಾತ್ರಿವೇಳೆ ಮಲಗುತ್ತಿದ್ದುದು ಗುರುಗಳ ಮನೆಯ ಜಗುಲಿಯ ಮೇಲೆ. ಸೊಳ್ಳೆಯ ಕಾಟ ಹೇಳತೀರದು. ನಿದ್ದೆ ಮಾಡುವುದಕ್ಕೆ ಬಿಡು ತ್ತಿರಲಿಲ್ಲ. ಇದೂ ಒಂದು ಅನುಕೂಲಸಿಂಧುವೇ ಆಯಿತೆಂದು, ರಾತ್ರಿ ಬಲು ಹೊತ್ತು ಮೂಲೆಯಲ್ಲಿ ಮುದುರಿ ಕೂತುಕೊಂಡು ಅಂದಿನ ಪಾಠವನ್ನೆಲ್ಲ ಮನನ ಮಾಡಿಕೊಳ್ಳುತ್ತಿದ್ದೆ. ಹಾಗೆಯೇ, ಗುರುಗಳ ಮನೆಗೆ ಕಾವಲೂ ಇದ್ದಂತಾಗುತ್ತಿತ್ತು. ಸುಮಾರು ನಡುರಾತ್ರಿಯ ಹೊತ್ತಿಗೆ, ಗುರುಗಳು ಜಲಬಾಧೆಗೆ ಹೊರಗೆ ಬರುತ್ತಿದ್ದರು. 'ವಾಸು! ಈ ಸರಿಹೊತ್ತಿನಲ್ಲಿ ಏನು ಮಾಡುತ್ತಿದ್ದಿ? ನಿದ್ದೆ ಕೆಡಬೇಡ. ಮಲಗಿಕೊ' ಎಂದು ಹೇಳಿ ಹೋಗುತ್ತಿ ದ್ದರು. ಇದು ಸಾಮಾನ್ಯ ಪದ್ಧತಿಯಾಗಿತ್ತು. ಒಂದು ದಿನ ರಾತ್ರಿ ನನಗೆ ನಿದ್ದೆ ಬಲುಹೊತ್ತು ಬರಲಿಲ್ಲ. ಅಂದು ದೇವಸ್ಥಾನದಲ್ಲಿ ಮಹಾವೈದ್ಯ ನಾಥಯ್ಯರ್ ಅವರ ಕಛೇರಿ ಎಂದು ಯಾರೋ ಹೇಳಿದ್ದು ಜ್ಞಾಪಕದಲ್ಲಿತ್ತು. ಕಛೇರಿಗಾದರೂ ಹೋಗಿಬರಬಹುದೆಂದು ತೋಚಿತು. ಆದರೆ ಗುರುಗಳ ಅನುಮತಿ ಪಡೆದಿರಲಿಲ್ಲ. ಅವರ ಅಪ್ಪಣೆಯಿಲ್ಲದೆಯೇ ಎಲ್ಲಿಗೂ ಹೋಗುವ

ಹಾಗಿರಲಿಲ್ಲ. ಆದರೆ ಸಂಗೀತ ಕೇಳಬೇಕೆಂಬ ಆಸೆ ಬಲವಾಯಿತು. ಕೊನೆಗೆ ಹೊರಡಲು ನಿಶ್ಚಯಿಸಿದೆ. ದಿಂಬನ್ನು ತೆಗೆದು ಹಾಸಿಗೆಯ ಮೇಲೆ ಉದ್ದುದ್ದಕ್ಕಿಟ್ಟು ಅದರ ಮೇಲೆ ಹೊದಿಕೆಯನ್ನೆಳೆದು, ಸದ್ದಿಲ್ಲದೆ ಹೊರಟೆ. ಕಳ್ಳತನ ಮಾಡಿದವನಂತೆ ಮನಸ್ಸು ಕದಡಿತು. ಗುರುಗಳು ಗಮನಿಸಿದರೆ ಗತಿಯೇನೆಂದು ಮೈ ನಡುಗಿತು. ಹೇಗೋ ಮನಸ್ಸು ಬಿಗಿ ಹಿಡಿದು ದೇವಸ್ಥಾನವನ್ನು ಸೇರಿದೆ. ಜನಸಂದಣಿ ಹೇಳತೀರದು. ವೇದಿ ಕೆಯಮೇಲೆ ಕುಳಿತಿದ್ದ ವಿದ್ವಾಂಸರನ್ನು ಕಂಡೊಡನೆಯೇ ಮೈ ಝುಂ ಎಂದಿತು. ತಿರುವೆಯಾರಿಗೆ ಬಂದ ಮೊದಲನೆಯ ದಿನ ನಡೆದ ಘಟನೆ ಕಣ್ಮುಂದೆ ಬಂದು ನಿಂತಿತು. ಅಂದು ಅವರನ್ನು ಕಂಡಾಗ ಅವರ ನೆನಪು ಬಂದಿರಲಿಲ್ಲ. ಮೈಸೂರಿನಲ್ಲಿ ಒಮ್ಮೆ ಮಾತ್ರ ದೂರದಿಂದ ನೋಡಿದ್ದ ಕಾರಣ ಮುಖ ಪರಿಚಯ ಮಸಕು ಮಸಕಾಗಿತ್ತು. ಈಗ ಸಂಶಯ ನಿವೃತ್ತಿಯಾಯಿತು. ಅಂದು ನಮ್ಮ ಗುರುಗಳ ಹೆಸರನ್ನು ಕೇಳಿದೊಡ ನೆಯೇ ಇವರೇಕೆ ಹಾಗೆ ರೌದ್ರಾವತಾರ ತಾಳಿದರು ಎಂಬ ಸಮಸ್ಯೆ ಮತ್ತೆ ನನ್ನನ್ನು ಕಾಡತೊಡಗಿತು. ಆದರೆ, ಈ ಎಲ್ಲ ಭಾವನೆಗಳೂ ಕ್ಷಣಾರ್ಧ ದಲ್ಲಿ ಅಂತರ್ಧಾನವಾದವು. ಅಮೋಘವಾದ ಅವರ ಸಂಗೀತ ಮನವನ್ನು ಸಂಪೂರ್ಣವಾಗಿ ಸೂರೆಗೊಂಡಿತು. ನಾನು ಹೋದಾಗ್ಗೆ ಹಂಸಧ್ವನಿ ರಾಗಾಲಾಪನೆ ಮುಗಿಯುತ್ತ ಬಂದಿತ್ತು. 'ವಾತಾಪಿಗಣಪತಿಂ ಭಜೇಹಂ' ಎಂಬ ಕೃತಿಯನ್ನು ಬಲು ಹೊತ್ತು ಹಾಡಿದರು. ಹೂ ಬಾಣದಂತೆ ಮಿಂಚುತ್ತಿದ್ದ ಅವರ ಸ್ವರಕಲ್ಪನೆ ನನಗೆ ದಿಗ್ಭ್ರಮೆಯನ್ನುಂಟುಮಾಡಿತು. ಕಛೇರಿ ಮುಗಿಯುವತನಕ ಇರಬೇಕೆಂಬ ಆಸೆಯಿದ್ದರೂ ಗುರುಗಳು ಎಚ್ಚರ ಗೊಂಡು ನನ್ನ ಮೋಸವೆಲ್ಲಿ ಬಯಲಾಗುತ್ತದೆಯೋ ಎಂಬ ಭೀತಿ ನನ್ನನ್ನು ಅಲ್ಲಿಂದಟ್ಟಿತು. ಓಡೋಡಿ ಮನೆಗೆ ಬಂದೆ. ದಿಂಬಾಗಲೀ ಹೊದ್ದಿಕೆ ಯಾಗಲೀ ನಾನಿಟ್ಟಂತಿರಲಿಲ್ಲ. ದಿಂಬನ್ನು ತಲೆದೆಸೆಯಲ್ಲಿ ಸರಿಯಾಗಿಟ್ಟು ಹೊದ್ದಿಕೆಯನ್ನು ಕಾಲುದೆಸೆಗೆ ತಳ್ಳಲಾಗಿತ್ತು. 'ಸಿಕ್ಕಿ ಬಿದ್ದೆ' ಎಂದು ಎದೆ ಹೊಡೆದುಕೊಳ್ಳಲಾರಂಭಿಸಿತು. ಇನ್ನು ನಿದ್ದೆಯಾದರೂ ಹೇಗೆ ಬಂದೀತು? ಹಲವಾರು ಯೋಚನೆಗಳು ತಲೆಯನ್ನು ಕುಕ್ಕಿ ಘಾಸಿಮಾಡಿ ದವು. ಹೇಗೋ ಆ ರಾತ್ರಿ ಕಳೆದೆ. ಎಂದಿನಂತೆ ಗುರುಗಳು ಸಾಧಕ ಕ್ಕಾಗಿ ನನ್ನನ್ನೆಬ್ಬಿಸಲಿಲ್ಲ. ತಾವೇ ತಂಬೂರಿ ಹಾಕಿಕೊಂಡು ಹಾಡಲು

ಪಕ್ರಮಿಸಿದರು. ಗುರುಗಳಿಗೆ ಅಸಮಾಧಾನವಾಗಿದೆಂಬುದು ಅಂಗೈಯ್ಯಿನ ಹುಣ್ಣಿನಂತೆ ಖಚಿತವಾಯಿತು. 'ಏನೇ ಬರಲಿ, ಅನೃತ ನುಡಿಯಬಾರದು. ನಡೆದದ್ದನ್ನು ನಡೆದಹಾಗೆಯೇ ತಿಳಿಸಿ ಕ್ಷಮಾಪಣೆ ಬೇಡುವುದು' ಎಂದು ತೀರ್ಮಾನಿಸಿಕೊಂಡೆ. ಗುರುಗಳು ಸ್ನಾನ ಸಂಧ್ಯಾವಂದನೆ ಮುಗಿಸಿ ಕೊಂಡು "ವಾಸು" ಎಂದು ಒಳಗಿನಿಂದಲೇ ಒಂದು ಬಾರಿ ಕೂಗು ಹಾಕಿದರು. ಧ್ವನಿ ಗಡುಸಾಗಿತ್ತು. ನ್ಯಾಯಾಧೀಶನ ಮುಂದೆ ಅಪರಾಧಿ ನಿಲ್ಲುವಂತೆ ಕಂಪಿಸುತ್ತ ತಲೆತಗ್ಗಿಸಿ ನಿಂತೆ. "ಎಲ್ಲಿ ಹೋಗಿದ್ದಿ ರಾತ್ರಿ?" ಎಂದು ಗುಡುಗಿದರು. ನಡೆದ ಸಂಗತಿಯನ್ನು ಹೇಳಿದೆ. 'ಮಹಾವೈದ್ಯ ನಾಥಯ್ಯರ್' ಎಂಬ ಶಬ್ದ ಕಿವಿಗೆ ಬಿದ್ದೊಡನೆಯೆ ಕಣ್ಣು ಕೆಂಡಕಾರಲು ಪಕ್ರಮಿಸಿದವು. "ನಿನ್ನ ಶಿಷ್ಯವೃತ್ತಿ ಇಂದಿಗೆ ಮುಗಿಯಿತು. ಹಾಸಿಗೆ ಬಟ್ಟೆಗಳನ್ನು ಕಟ್ಟಿ ಹೊರಡಬಹುದು ನೀನಿನ್ನು. ಯಾರ ಸಂಗೀತ ನಿನ್ನನ್ನಾಕರ್ಷಿಸಿತೋ ಅವರ ಬಳಿಯೇ ಅಭ್ಯಾಸಮಾಡು ಹೋಗು", ಎಂದರು. ಕುಸಿದು ನೆಲಕ್ಕೆ ಬಿದ್ದೆ. ಕಣ್ಣೀರು ಪ್ರವಹಿಸಿತು. "ಕ್ಷಮಿಸ ಬೇಕು ಗುರುಗಳೇ! ಅಪರಾಧ ಇಷ್ಟು ಗುರುತರವಾದದ್ದೆಂದು ನಾನು ಎಣಿಸಿರಲಿಲ್ಲ. ತಮ್ಮಲ್ಲಿ ಪಾಠ ಕಲಿಯುವ ವೇಳೆ ಮತ್ತೊಬ್ಬ ವಿದ್ವಾಂಸರ ಸಂಗೀತವನ್ನು ಕೇಳಕೂಡದೆಂಬುದು ಗೊತ್ತಿರಲಿಲ್ಲ ನನಗೆ. ಇಂಥ ತಪ್ಪನ್ನು ಮತ್ತೊಮ್ಮೆ ಮಾಡುವುದಿಲ್ಲ. ಇದೊಂದು ಬಾರಿ ಮನ್ನಿಸಿ" ಎಂದು ಅವರ ಪಾದಗಳಮೇಲೆ ಬಿದ್ದು ಬೇಡಿಕೊಂಡೆ. ಗುರುಗಳ ಮುಖ ಮತ್ತೆ ಪ್ರಸನ್ನವಾಯಿತು. "ಏಳು ವಾಸು. ನನ್ನ ಅಭಿಪ್ರಾಯ ನಿನಗೆ ಅರ್ಥವಾಗಿರಲಿಕ್ಕಿಲ್ಲ. ಒಬ್ಬ ಗುರುವಿನ ಬಳಿ ಪಾಠ ಕಲಿತು, ಅವನ ಶೈಲಿ, ಅವನ ವೈಯಕ್ತಿಕ ಕಲಾವೈಶಿಷ್ಟ್ಯವನ್ನು ಶಿಷ್ಯನೊಬ್ಬ ಆರ್ಜಿಸಬೇಕಾದರೆ, ಅನುಕರಣ ಮಾಡಬೇಕಾದರೆ, ಶಿಷ್ಯನ ಔಪಾಸನೆ ಏಕಮುಖವಾಗಿರಬೇಕು. ಎದುರಿಗಿರುವ ವಸ್ತುವೊಂದನ್ನು ಚಿತ್ರಿಸ ಬೇಕಾದರೆ, ಪ್ರತಿಬಿಂಬಿಸಬೇಕಾದರೆ ಚಿತ್ರಗಾರ ತನ್ನ ದೃಷ್ಟಿಯೆಲ್ಲವನ್ನೂ ಆ ವಸ್ತುವಿನಲ್ಲಿ ಹೇಗೆ ಕೇಂದ್ರೀಕರಿಸುತ್ತಾನೆಯೋ, ಹಾಗೆಯೇ, ಸಂಗೀತ ವ್ಯಾಸಂಗಿಯೂ ಕೂಡ ತನ್ನ ಮನಸ್ಸೆಲ್ಲವನ್ನೂ ಗುರುವಿನ ವಿದ್ಯಾಮಂದಿರ ದಲ್ಲಿ ಸ್ಥಿರವಾಗಿ ನೆಲೆಸುವಂತೆ ಮಾಡಬೇಕು. ಹಾಗಿಲ್ಲದೆ ಹಲವಾರು ಕಡೆ ಮನಸ್ಸನ್ನು ಚಲಿಸಲು ಬಿಟ್ಟರೆ, ಕೊನೆಯಲ್ಲಿ, ನಾವು ಕಲಿಯುವ ವಿದ್ಯೆಯಲ್ಲಿ ಯಾವೊಂದು ವೈಯಕ್ತಿಕತೆಯೂ ಇರದೆ ಬೆರಕೆಯ ಮಾಲಾಗುತ್ತದೆ,

ಪುಷ್ಪದಿಂದ ಪುಷ್ಪಕ್ಕೆ ಹಾರಿ ಭ್ರಮರ ಮಧುವನ್ನು ಹೀರಿ ಕೂಡಿಡುತ್ತದೆ. ಮಧು ರುಚಿಕರವಾದದ್ದೇನೋ ನಿಜ. ಆದರೆ ಆ ರುಚಿಗೆ ಮೂಲ ಯಾವುದೆಂದು ಹೇಳಲು ಬಂದೀತೋ ? ಗುರುವಿನಿಂದ ಕಲಿಯಬೇಕಾದುದೆಲ್ಲವನ್ನೂ ಕಲಿತು, ಅವನ ಕಲಾಮೂರ್ತಿಯ ಪ್ರತಿಬಿಂಬವನ್ನು ಶಿಷ್ಯ ತನ್ನ ಹೃನ್ಮಂದಿರದಲ್ಲಿ ಪ್ರತಿಷ್ಠಿಸಿಕೊಂಡಮೇಲೆ, ಯಾವ ಸಂಗೀತವನ್ನು ಕೇಳಿದರೂ ಶಿಷ್ಯನ ಕಲಾವ್ಯೆಯಕ್ತಿತೆಗೆ ಧಕ್ಕೆ ತಾಕುವುದಿಲ್ಲ. ಈ ದೃಷ್ಟಿಯಿಂದ ನಾನು ಹಾಗೆ ಹೇಳಿದೆನೇ ಹೊರತು, ಮಹಾವೈದ್ಯನಾಥಯ್ಯರ್ ವಿದ್ವಾಂಸರಲ್ಲ, ಅವರ ಸಂಗೀತವನ್ನು ನೀನು ಕೇಳಬಾರದು ಅನ್ನುವ ದೃಷ್ಟಿಯಿಂದಲ್ಲ ವಾಸು, ತಿಳಿಯಿತೇ ? " ಎಂದರು. " ತಿಳಿಯಿತು ಗುರುಗಳೇ, " ಎಂದೆ. ಆನೆಗಾತ್ರ ಬಂದ ಆತಂಕ ಆವಿಯಂತೆ ಹಗುರವಾಯಿತಲ್ಲ ಎಂದು ಮನಸ್ಸಿಗೆ ನೆಮ್ಮದಿಯಾಯಿತು. ಅವತ್ತಿನ ಪಾಠ ಎಂದಿನಂತೆ ಜರುಗಿತು.

ಅಂದು ಮಧ್ಯಾಹ್ನ ಊಟವಾದ ಮೇಲೆ ಗುರುಗಳು ನನ್ನನ್ನು ಅವರ ಕೊಠಡಿಗೆ ಕರೆದುಕೊಂಡು ಹೋದರು. ಬೀರುವಿನಿಂದ ಎರಡು ಮೂರು ಪುಸ್ತಕಗಳನ್ನು ಈಚೆಗೆಳೆದು ನನ್ನಮುಂದಿಟ್ಟು ನುಡಿದರು : " ವಾಸು ! ಈ ಪುಸ್ತಕಗಳನ್ನು ನೋಡಿದರೆ ನನಗೂ ವೈದ್ಯನಾಥಯ್ಯರಿಗೂ ಬದ್ಧವೈರವಿದೆಯೆಂದು ಯಾರಿಗಾದರೂ ಅನ್ನಿಸದಿರದು. ಆದರೆ ವಾಸ್ತವವಾಗಿ ನಮ್ಮಿಬ್ಬರಿಗೂ ಯಾವ ವಿಧವಾದ ಹಗೆತನವೂ ಇಲ್ಲ. ಇರುವ ವಾದ ಪ್ರತಿವಾದಗಳೆಲ್ಲ ವಿದ್ಯಾಸಂಬಂಧವಾಗಿ ಅಷ್ಟೆ. ವೈದ್ಯನಾಥಯ್ಯರವರು ತಮ್ಮ ವೈಭವವನ್ನೆಲ್ಲ ಗ್ರಂಥರೂಪದಲ್ಲಿ ಬರೆದು " ವಿಜಯ ಸಂಗ್ರಹ " ಎಂಬ ಈ ಪುಸ್ತಕವನ್ನು ಪ್ರಕಟಿಸಿದರು. ಅದಕ್ಕೆ ಉತ್ತರ ರೂಪದಲ್ಲಿ ನಾನು ಇಗೋ ಈ ' ವಿಜಯಸಂಗ್ರಹ ಖಂಡನ ' ಎಂದು ಬರೆದೆ. ಮತ್ತೆ ಅವರು ' ವಿಜಯ ಸಂಗ್ರಹ ಖಂಡನ ದಂಡನ ' ಎಂದು ಪ್ರಕಟಿಸಿದ್ದಾರೆ. ಈಗ ನನ್ನ ಸರದಿ. ಏನು ಮಾಡಬೇಕೆಂಬುದು ಇನ್ನೂ ಬಗೆ ಹರೆದಿಲ್ಲ " ಎಂದರು. " ಮುಂದಿನ ಹೆಜ್ಜೆ ಕಂಡಹಾಗೆಯೇ ಇದೆಯಲ್ಲ ಗುರುಗಳೇ ! ವಿಜಯ ಸಂಗ್ರಹ ಖಂಡನ ದಂಡನ ಮುಂಡನ ! " ಎಂದೆ. ಗುರುಗಳಿಗೆ ಒಪ್ಪಿತು. " ಸರಿಯಾದ ಸಲಹೆ ವಾಸು. ಇನ್ನು ನನ್ನ ಸವಾಲನ್ನು ಸಿದ್ಧಗೊಳಿಸುತ್ತೇನೆ. ಅದಿರಲಿ. ಇಷ್ಟೆಲ್ಲ ನಿನಗೆ ತಿಳಿಸಿದ್ದರ ಕಾರಣ ಇಷ್ಟೇ ವಾಸು.

ಇವೆಲ್ಲ ಭಿನ್ನಾಭಿಪ್ರಾಯಗಳಿಗೂ, ವಾದ ವಿವಾದಗಳಿಗೂ, ನಮ್ಮಿಬ್ಬರ ಗೌರವ ವಿಶ್ವಾಸಗಳಿಗೂ ಯಾವ ಸಂಬಂಧವೂ ಇರುವುದಿಲ್ಲ" ಎಂದರು.

ಹಿಂದಿನ ದಿನ ರಾತ್ರಿ ಕೇಳಿದ್ದ ವೈದ್ಯನಾಥಯ್ಯರ್ ಅವರ ಸಂಗೀತ ನನ್ನ ಕಿವಿಯಲ್ಲಿ ಪ್ರತಿಧ್ವನಿಸುತ್ತಲೇ ಇತ್ತು. ನಮ್ಮ ಗುರುಗಳ ಸಂಗೀತ ವನ್ನೂ ವೈದ್ಯನಾಥಯ್ಯರ್ ಅವರ ಸಂಗೀತವನ್ನೂ ಪರಸ್ಪರ ಹೋಲಿಸಿ ಕೊಂಡೆ. ವೈದ್ಯನಾಥಯ್ಯರ್ ಅವರದು ಕಂಚಿನಂತಹ ಶಾರೀರ. ಅತಿ ದ್ರುತದಲ್ಲಿ ನುಡಿಯುತ್ತಿತ್ತು. ತ್ರಿಸ್ಥಾಯಿಗಳಲ್ಲೂ ಶಾರೀರಸೌಕರ್ಯ ಒಂದೇ ವಿಧವಾಗಿತ್ತು. ಸಾಮಾನ್ಯವಾಗಿ ಇತರ ವಿದ್ವಾಂಸರಿಗೆ ತ್ರಿಕಾಲ ವೆಂಬುದು ಮಹಾವೈದ್ಯನಾಥಯ್ಯರ್ ಅವರಿಗೆ ಕಾಲವಾಗಿರುತ್ತಿತ್ತು. ಅಷ್ಟು ದ್ರುತದಲ್ಲಿ ಹಾಡಿದರೂ ಸ್ವರ ಮತ್ತು ಅಕಾರ ಉಚ್ಚಾರಣೆಗಳು ಬಿಡಿಮುತ್ತಿನಂತೆ ಸ್ಫುಟವಾಗಿರುತ್ತಿದ್ದವು. ನಮ್ಮ ಗುರುಗಳ ಶಾರೀರದಲ್ಲಿ ಘನತೆ ಹೆಚ್ಚು. ಹೆಚ್ಚು ನುಡಿಯುತ್ತಿರಲಿಲ್ಲ. ಅದಕ್ಕೋಸ್ಕರವೇ ಅವರು ತಮ್ಮ ಶಾರೀರಧರ್ಮಕ್ಕನುಗುಣವಾಗುವಂತೆ ಅತಿವಿಳಂಬ ಅತಿದ್ರುತ ಕಾಲಗಳಲ್ಲಿ ಹಾಡುವುದನ್ನು ಬಿಟ್ಟು ಮಧ್ಯಮ ನಡೆಯಲ್ಲಿಯೇ ಹಾಡುವು ದನ್ನು ಕರಗತಮಾಡಿಕೊಂಡು ವಿಖ್ಯಾತರಾದರು. ನನಗೆ ಪಾಠ ಹೇಳಿ ಕೊಡುವಾಗ ಅನೇಕಾವರ್ತಿ ಶಾರೀರ ಸಂಪತ್ತಿನ ವಿಚಾರದಲ್ಲಿ ಅವರು ತಿಳಿಸಿದ ಸಂಗತಿ ಈಗಲೂ ನೆನಪಿನಲ್ಲಿದೆ. "ಒಬ್ಬನ ಶಾರೀರ ಇನ್ನೊಬ್ಬನ ಶಾರೀರವಂತಿರುವುದಿಲ್ಲ. ಆದ್ದರಿಂದ ಕಣ್ಣು ಮುಚ್ಚಿಕೊಂಡು ಒಬ್ಬನ ಸಂಗೀತ ವನ್ನು ಇನ್ನೊಬ್ಬ ಅನುಕರಿಸುವುದರಲ್ಲಿ ಅರ್ಥವಿಲ್ಲ. ಬಂಗಾರವನ್ನು ಹದಮಾಡಿ ಅವರವರಿಗೆ ಬೇಕಾದ ಆಭರಣಗಳನ್ನು ಅವರವರು ಮಾಡಿ ಕೊಳ್ಳುವಂತೆ ತನ್ನ ಶಾರೀರದ ಶಕ್ತಿಸಾಮರ್ಥ್ಯಗಳನ್ನೂ ಲಕ್ಷಣಗಳನ್ನೂ ಗಮನದಲ್ಲಿಟ್ಟುಕೊಂಡು ತನ್ನ ಸಂಗೀತವನ್ನು ಅಳವಡಿಸಿಕೊಳ್ಳುವುದು ಬುದ್ಧಿವಂತನ ಲಕ್ಷಣ. ವೈದ್ಯನಾಥಯ್ಯರ್ ದ್ರುತದಲ್ಲಿ ಹಾಡುತ್ತಾರಲ್ಲ ಎಂದು ನಾನೂ ಆಕಾಲದಲ್ಲಿ ಹಾಡಲು ಸಾಧ್ಯವೇ? ನಾನು ಮಧ್ಯಮ ಕಾಲದಲ್ಲಿ ಹಾಡುವಂತೆ ಅವರು ಹಾಡಲು ಸಾಧ್ಯವೋ? ಎರಡೂ ಸಾಧ್ಯ ವಿಲ್ಲ. ಕಾರಣ ಇಷ್ಟೆ. ನಮ್ಮಿಬ್ಬರ ಶಾರೀರ ಧರ್ಮಗಳೇ ಬೇರೆ ಬೇರೆ. ಆದ್ದ ರಿಂದ ನಮ್ಮಿಬ್ಬರ ಶೈಲಿಗಳೇ ಬೇರೆಬೇರೆಯಾಗಿರುವುದು ಕೇವಲ ಸ್ವಾಭಾ ವಿಕ ಹಾಗೂ ಅನಿವಾರ್ಯ. ಗುರುವಿನ ಶಾರೀರಧರ್ಮ ಮತ್ತು ಶಿಷ್ಯನ ಶಾರೀರಲಕ್ಷಣ ಎರಡೂ ಒಂದೇ ವಿಧವಾಗಿದ್ದರೆ ಶಿಷ್ಯನಿಗೆ ಧಾರೆಯೆರೆಯುವ

ವಿದ್ಯೆ ಮೂಲದ ಪ್ರತಿಚ್ಛಾಯೆಯಂತಿರುತ್ತದೆ' ಎಂದು ಹೇಳುತ್ತಿದ್ದರು. ಮಹಾವೈದ್ಯನಾಥಯ್ಯರ್ ಅವರ ಸಂಗೀತವನ್ನು ಮಿಂಚಿನ ವೇಗದಲ್ಲಿ ಧಾವಿಸುವ ಜೂಜಿನ ಕುದುರೆಗೆ ಹೋಲಿಸಬಹುದಾದರೆ, ನಮ್ಮ ಗುರುಗಳ ಸಂಗೀತವನ್ನು ಸಕಲ ರಾಜಮರ್ಯಾದೆಯೊಡಗೂಡಿ ಗಾಂಭೀರ್ಯದ ಗಣಿಯಾಗಿ ಮಂದಗಮನದಲ್ಲಿ ಬರುವ ಪಟ್ಟದ ಆನೆಗೆ ಹೋಲಿಸ ಬಹುದಾಗಿತ್ತು.

ಶಾರೀರಧರ್ಮವನ್ನು ಕಾಪಾಡಿಕೊಳ್ಳುವ ವಿಷಯದಲ್ಲೂ ಸಹ ನಮ್ಮ ಗುರುಗಳಿಗೂ ವೈದ್ಯನಾಥಯ್ಯರಿಗೂ ಅಜಗಜಾಂತರ. ಮಂಗಳಾರತಿ ಯನ್ನು ತೆಗೆದುಕೊಂಡರೆ ಉಷ್ಣ, ತೀರ್ಥವನ್ನು ತೆಗೆದುಕೊಂಡರೆ ಶೀತ ವಾದೀತೆನ್ನುವಷ್ಟು ಜಾಗರೂಕತೆಯಿಂದ ವರ್ತಿಸುತ್ತಿದ್ದರು, ವೈದ್ಯನಾಥ ಯ್ಯರ್ ಅವರು. ಪ್ರತಿನಿತ್ಯ ಮೆಣಸಿನ ಸಾರು ಅನ್ನವನ್ನು ಭೋಜನ ಮಾಡುತ್ತಿದ್ದರು. ಮಧ್ಯಾಹ್ನದವೇಳೆ ನಿದ್ದೆಮಾಡುವುದನ್ನೂ, ಮತ್ತು ಸ್ತ್ರೀ ಸಂಭೋಗವನ್ನೂ ವರ್ಜ್ಯಮಾಡಿದ್ದರು. ಇವೆಲ್ಲದಕ್ಕೂ ವಿರುದ್ಧ ನಮ್ಮ ಗುರುಗಳು. ಹೊಟ್ಟೆಗಿಲ್ಲದೆ ಉಪವಾಸದಿಂದ ಪ್ರಾಣಬಿಟ್ಟು ಕಲಿ ಯುವ ಸಂಗೀತದಿಂದ ಪ್ರಯೋಜನವೇನು ಎಂಬುದೇ ಅವರ ತರ್ಕ. ಅಚ್ಚುಕಟ್ಟಾಗಿ, ಸ್ವೇಚ್ಛೆಯಾಗಿ, ಎಣ್ಣೆ ತುಪ್ಪವೆಂಬ ಭೇದಭಾವವಿಲ್ಲದೆ ಭೋಜನಮಾಡಿ, ಮಧ್ಯಾಹ್ನ ಮನಸಾರ ನಿದ್ದೆ ಹೋಗಿ, ಸಂಜೆ ಕಛೇರಿಗೆ ಹೋಗಿ ಜಯಭೇರಿ ಹೊಡೆದು ಬರುತ್ತಿದ್ದ ಭೂಪರು ನಮ್ಮ ಗುರುಗಳು. "ನಾವು ಹೇಳಿದಂತೆ ಶಾರೀರ ಕೇಳಬೇಕೋ? ಶಾರೀರ ಹೇಳಿದಂತೆ ನಾವು ಕೇಳಬೇಕೋ ವಾಸು?", ಎಂದು ನಗುತ್ತಿದ್ದರು. ಈ ವಾದ ಸರಣಿ ನನಗೆ ಬಲು ಹಿಡಿಸಿತು. ಇನ್ನ್ಯಾವುದರಲ್ಲಿಲ್ಲದಿದ್ದರೂ ಈ ಭಾಗದಲ್ಲಿ ಮಾತ್ರ ನಮ್ಮ ಗುರುಗಳ ಮೇಲ್ಪಂಕ್ತಿಯನ್ನು ಮನಃಪೂರ್ವಕವಾಗಿ ಈಗಲೂ ಅನುಸರಿಸುತ್ತ ಬಂದಿದ್ದೇನೆ!

ಆ ಊರಿನ ಜನರು ಬಹು ರಸಿಕರು, ಜಾಣರು. ಈ ಇಬ್ಬರು ದಿಗ್ದಂತಿಗಳ ಪಾಂಡಿತ್ಯದ ಸಾರವನ್ನೂ ಹೀರುವ ಉಪಾಯವನ್ನು ಕಂಡು ಹಿಡಿದುಕೊಂಡಿದ್ದರು. ಪ್ರಣತಾರ್ತಿಹರ ದೇವಾಲಯದ ಪ್ರಾಕಾರದಲ್ಲಿ ಇಬ್ಬರ ಸಂಗೀತವನ್ನೂ ಏಕಕಾಲದಲ್ಲಿ ಏರ್ಪಡಿಸುತ್ತಿದ್ದರು. ಈಶ್ವರನ ದೇವಾಲಯದ ಮುಂದೆ ಒಬ್ಬರದು. ಅಮ್ಮನವರ ದೇವಾಲಯದ ಮುಂದೆ ಇನ್ನೊಬ್ಬರದು. ಒಬ್ಬರ ಸಂಗೀತಕ್ಕೆ ಕರತಾಡನವಾಯಿತೆಂದರೆ ಸರಿ,

ಇನ್ನೊಬ್ಬರಿಗೆ ಉತ್ಸಾಹ ಇಮ್ಮಡಿಯಾಗುತ್ತಿತ್ತು. ಸಭಿಕರ ಮೆಚ್ಚುಗೆಯನ್ನು ಪಡೆಯಬೇಕೆಂಬ ಛಲ ಹುಟ್ಟುತ್ತಿತ್ತು. ತಮ್ಮ ವಿದ್ವತ್ತಿನ ಆಳವನ್ನು ಮುಟ್ಟುತ್ತಿದ್ದರು. ಶ್ರೋತೃಗಳಿಗೆ ಔತಣ ನೀಡುತ್ತಿದ್ದರು.

ನಮ್ಮ ಗುರುಗಳ ಸಂಗಡ ನಾನು ಕಛೇರಿಗಳಿಗೆ ಹೋಗುತ್ತಿದ್ದಾಗ, ಸುಮ್ಮನೆ ಕುಳಿತು ಕೇಳಿ ಆನಂದಿಸುವ ಹಾಗಿರಲಿಲ್ಲ. ಕಛೇರಿಗಳಿಗೆ ಹೋಗುವ ಮುಂಚೆಯೇ ಗುರುಗಳು ಕೆಲವು ವಿಷಯಗಳನ್ನು ಗಮನಿಸಬೇಕೆಂದು ಅಪ್ಪಣೆಮಾಡುತ್ತಿದ್ದರು. ಹಾಡುಗಾರಿಕೆಗೂ ಪಕ್ಕವಾದ್ಯಕ್ಕೂ ಸಾಮರಸ್ಯವಿತ್ತೆ ? ಸ್ವರ ಹಾಡುವಾಗ ವಿಷಮ ಆವರ್ತಗಳೇನಾದರೂ ಇದ್ದವೇ ? ಪಲ್ಲವಿಯನ್ನು ನೆರವುವಾಗ ಅಕ್ಷರಗಳ ಸ್ಥಳಪಲ್ಲಟವೇನಾದರೂ ಆದವೇ ? ಹಾಡುವಾಗ ಸಾಹಿತ್ಯದ ಲೋಪದೋಷಗಳೇನಾದರೂ ಇದ್ದವೇ ? ಈ ಎಲ್ಲ ವಿವರಗಳನ್ನೂ ಗಮನವಿಟ್ಟು ಕೇಳಿ ಗುರುಗಳಿಗೆ ವರದಿಮಾಡಬೇಕಾಗಿತ್ತು. ಹೀಗಾಗಿ, ಕಛೇರಿಗಳನ್ನು ಕೇಳುವ ಸಮಯದಲ್ಲೂ ಕೂಡ ಒಂದು ರೀತಿಯ ಶಿಕ್ಷಣಕೊಡುತ್ತಿದ್ದರು. ನಮ್ಮ ಗುರುಗಳ ಕಛೇರಿಯಲ್ಲಿ ನೆರವಲು ಮತ್ತು ಮಧ್ಯಮಕಾಲಗಳು ಅತ್ಯಂತ ರಸವತ್ತಾದ ಭಾಗಗಳೆನ್ನಬಹುದು. ಕಛೇರಿ ವರ್ಣದ ಪ್ರಾರಂಭವಾಗುತ್ತಿತ್ತು. ಅನಂತರ ಒಂದೆರಡು ಮಧ್ಯಮಕಾಲದ ಕೃತಿಗಳು, ಅದಾದಮೇಲೆ ಘನರಾಗಗಳು ಮತ್ತು ಮಧ್ಯಮಕಾಲ, ಅನಂತರ ಯಾವ ರಾಗದಲ್ಲಿ ವರ್ಣವನ್ನು ಹಾಡುತ್ತಿದ್ದರೋ ಆ ರಾಗವನ್ನೇ ವಿಸ್ತಾರಮಾಡಿ, ಪಲ್ಲವಿ ಹಾಡಿ, ನೆರವಲ್ ಮಾಡಿ, ಸ್ವರ ಹಾಡಿ, ಕಛೇರಿಯನ್ನು ಮುಗಿಸುತ್ತಿದ್ದರು. ಸ್ವರಕಲ್ಪನೆಗಾಗಿ, ತಾಳ ವಾದ್ಯಗಳ ತನಿಗಾಗಿ, ಹೆಚ್ಚುಕಾಲವನ್ನು ಕಳೆಯುತ್ತಿರಲಿಲ್ಲ. ಸ್ವರಕಲ್ಪನೆ ತಾತ್ಕಾಲಿಕ ಮನೋಧರ್ಮದ್ದಾಗಿರುತ್ತಿತ್ತು. ಅದಕ್ಕಾಗಿ ಎಂದೂ ಪೂರ್ವಸಿದ್ಧತೆಗಳನ್ನು ಮಾಡಿಕೊಂಡು ಮುಕ್ತಾಯ ಸ್ವರಗಳನ್ನು ಹಾಡುತ್ತಿರಲಿಲ್ಲ. ನೂರೆಂಟು ತಾಳಗಳಲ್ಲಿ, ನಡೆಗಳಲ್ಲಿ ಪಲ್ಲವಿಯನ್ನು ಹಾಡುವ ಸಾಮರ್ಥ್ಯವಿದ್ದಾಗ್ಯೂ, ಕಛೇರಿಗಳಲ್ಲಿ ಸಾಮಾನ್ಯವಾಗಿ ಸುಲಭ ತಾಳಗಳ ಪಲ್ಲವಿಗಳನ್ನು ಬಿಟ್ಟು ಬೇರೆ ಹಾಡುತ್ತಿರಲಿಲ್ಲ. ಪಕ್ಕವಾದ್ಯ ನುಡಿಸುವ ವಿದ್ವಾಂಸರಿಗೆ ತೊಡಕಾಗುವ ಯಾವ ರೀತಿಯ ಸಮಸ್ಯೆಯನ್ನೂ ಕಛೇರಿಯಲ್ಲಿ ತಂದೊಡ್ಡುತ್ತಿರಲಿಲ್ಲ.

ಕೃತಿ, ವರ್ಣ ರಚನೆ ಮಾಡುವಾಗಲೂ ಸಹ ನನ್ನನ್ನು ಸಂಗಡಲೇ ಇರುವಂತೆ ಹೇಳಿ ಮಾರ್ಗದರ್ಶಕರಾಗಿದ್ದರು ನನ್ನ ಗುರುಗಳು. ಕೃತಿಯ

ಸಾಹಿತ್ಯರಚನೆಯಾದಮೇಲೆ, " ವಾಸು ! ಈ ಸಾಹಿತ್ಯವನ್ನು ಒಂದಾವರ್ತಿ ನೋಡಪ್ಪ. ದೋಷಗಳೇನಾದರೂ ಇವೆಯೇ ಹೇಳು, " ಎನ್ನುತ್ತಿದ್ದರು. ಸಂಕೋಚದಿಂದ ನಾನು ಸುಮ್ಮನಿದ್ದರೆ, "ಸಂಕೋಚಕ್ಕೆ ಕಾರಣವಿಲ್ಲ. ವಾಸು. ನೀನು ಸಂಸ್ಕೃತ ವ್ಯಾಸಂಗಮಾಡಿ ಪಾಂಡಿತ್ಯ ಪಡೆದಿದ್ದೀಯೆ. ವಿದ್ಯೆಗೆ ಎಲ್ಲಿದ್ದರೂ ಪುರಸ್ಕಾರ ಕೊಡಲೇಬೇಕು. ನೋಡು ಒಂದಾವರ್ತಿ ಈ ಸಾಹಿತ್ಯವನ್ನು " ಎಂದು ಒತ್ತಾಯಮಾಡುತ್ತಿದ್ದರು. ಒಂದು ಬಾರಿ ಆಶ್ಚರ್ಯಕರವಾದ ಸಂಗತಿಯೊಂದು ನಡೆಯಿತು. ಸಾಹುಕಾರನೊಬ್ಬನಿಗೆ ನಮ್ಮ ಗುರುಗಳು ಒಂದು ಸಹಸ್ರರೂಪಾಯಿ ಸಾಲವನ್ನು ತೀರಿಸಬೇಕಾಗಿತ್ತು. ಇವರ ಕೈಯಲ್ಲಿ ಕಾಸಿರಲಿಲ್ಲ. ಬರಬೇಕಾದ ಹಣ ಸಕಾಲದಲ್ಲಿ ಬರದೆ ಪೇಚಾಟಕ್ಕಿಟ್ಟುಕೊಂಡಿತು. ಸಾಹುಕಾರನ ತಗಾದೆ ಹೆಚ್ಚುತ್ತ ಬಂತು. ಕೊನೆಗೊಂದು ದಿನ ಆ ಸಾಹುಕಾರ ಮನೆಯ ಬಾಗಿಲ ಮುಂದೆ ಬಂದು ಬೇರೂರಿದ. ಗುರುಗಳಿಗೆ ಕೈ ಮೀರಿದಂತಾಗಿ ಕಣ್ಣುಗಳಲ್ಲಿ ನೀರುಕ್ಕಿ ಬಂತು. ತಮ್ಮ ಸಂಕಟವನ್ನು ನನ್ನಲ್ಲಿ ತೋಡಿಕೊಂಡರು. ದೇವರ ಮನೆಗೆ ಹೋಗಿ ದೀರ್ಘದಂಡ ಪ್ರಣಾಮಮಾಡಿ, " ಇಂತಕಂಟಿ ಕಾವಲೆನಾ ಈ ಕಷ್ಟಮು ಸಾಲದಾ ರಾಮಾ '' ಎಂಬ ಕನ್ನಡರಾಗದ ಕೃತಿಯನ್ನು ದೇವರಿಗರ್ಪಿಸಿದರು. ಆ ಸಮಯಕ್ಕೆ ಸರಿಯಾಗಿ ಇವರಿಗೆ ಬರಬೇಕಾಗಿದ್ದ ಹಣ ಒದಗಿ ಬಂತು. ಸಾಲಗಾರನಿಗೆ ಕೊಡಬೇಕಾಗಿದ್ದ ಮೊಬಲಗನ್ನು ತೀರಿಸಿ ಸಂಕಟದಿಂದ ವಿಮುಕ್ತರಾದರು. ಆಪದ್ಬಾಂಧವನ ಅನುಗ್ರಹವನ್ನು ದೊರಕಿಸಿಕೊಟ್ಟ ಈ ಕೃತಿಯನ್ನು ಅಂದೇ ನನಗೆ ಪಾಠ ಮಾಡಿಸಿದರು. ಇವತ್ತಿಗೂ ನನಗೆ ಆ ಕೃತಿಯನ್ನು ಹಾಡುವ ವೇಳೆಯಲ್ಲಿ ಹಿನ್ನೆಲೆಯ ಚಿತ್ರದ ನೆನಪಾಗಿ ಮೈ ರೋಮಾಂಚನವಾಗುತ್ತದೆ !

ತನ್ನ ಶಿಕ್ಷಣದ ಅಂತ್ಯಭಾಗದಲ್ಲಿ ಗುರುಗಳ ಸಂಗಡ ಹಾಡುವ ಸುಯೋಗವೂ ಪ್ರಾಪ್ತವಾಯಿತು. ಇಷ್ಟುಹೊತ್ತಿಗೆ ಯಾವ ಕಛೇರಿಯನ್ನಾದರೂ ಕೇಳಬಹುದೆಂಬ ಅನುಮತಿ ದೊರೆತಿತ್ತು. ಕಛೇರಿಗಳನ್ನು ಕೇಳಿ ಬಂದು ಅವುಗಳ ವಿಶೇಷ ಲಕ್ಷಣಗಳನ್ನು ಗುರುಗಳಿಗೆ ಅರುಹಬೇಕಾಗಿತ್ತು. ನಾನು ಹಲವಾರು ವಿದ್ವಾಂಸರುಗಳ ಕಛೇರಿಗಳನ್ನು ಕೇಳಿದಾಗ್ಯೂ, ನನ್ನ ಮೇಲೆ ಪ್ರಭಾವ ಬೀರಿದ ಮಹಾವ್ಯಕ್ತಿಗಳೆಂದರೆ— ನಮ್ಮ ಗುರುಗಳನ್ನುಳಿದು—ಮಹಾವೈದ್ಯನಾಥಯ್ಯರ್ ಮತ್ತು ತಿರುಕ್ಕೋಡ್ ಕಾವಲ್ ಕೃಷ್ಣಯ್ಯರ್ ಅವರು. ಕೃಷ್ಣಯ್ಯರ್ ಅವರ ಪರಿ

ಚಯವನ್ನು ಮಾಡಿಕೊಂಡು ಅವರ ಮನೆಗೆ ಹೋಗಿ ಬರಲು ಅವರ ಅನುಮತಿಯನ್ನೂ ಪಡೆದುಕೊಂಡೆ. ಅವರ ಕಛೇರಿಗಳನ್ನು ಎಷ್ಟು ಕೇಳಿದರೂ, ಏಕೋ ಏನೋ ಮನಸ್ಸಿಗೆ ತೃಪ್ತಿಯೇ ಆಗುತ್ತಿರಲಿಲ್ಲ. ಮನೆಯಲ್ಲಿ ಅವರು ಆರಾಮವಾಗಿ ಕುಳಿತು ತಮ್ಮಷ್ಟಕ್ಕೆ ತಾವೇ ಆತ್ಮಾನಂದಕ್ಕಾಗಿ ನುಡಿಸುವ ವೇಳೆ ಅವರ ಸಂಗೀತವನ್ನು ಸವಿಯಬೇಕೆಂಬ ಬಯಕೆ ನನಗೆ ಬಲವಾಯಿತು. ಆದರೆ ಬಹುಕಾಲ ಈ ಯೋಗ ಲಭಿಸಲಿಲ್ಲ. ಅವರ ಸಾಧಕ ಅತಿ ಗೋಪ್ಯ. ಪಿಟೀಲಿಗೆ ಪೀಳ್‌ಕುದುರೆಯನ್ನು ಸಿಕ್ಕಿಸಿ ಸಣ್ಣನಾದದಲ್ಲಿ ಅಭ್ಯಾಸಮಾಡುತ್ತಿದ್ದರು. ಒಂದು ದಿನ ರಾತ್ರಿ ಪುಣ್ಯವಶಾತ್ ಅವರು ನುಡಿಸುತ್ತಿದ್ದುದನ್ನು ಕೇಳುವ ಮಹದವಕಾಶವೊಂದು ದೊರಕಿತು. ಸದ್ದಿಲ್ಲದೆ ಅವರು ನುಡಿಸುತ್ತಿದ್ದ ಹೊರಗಡೆ ಕಿಟಕಿಯ ಬಳಿ ಕುಳಿತೆ. ನಾದವಾಹಿನಿ ನಿರಾತಂಕವಾಗಿ ಪ್ರವಹಿಸುತ್ತಿತ್ತು. ದೇವಲೋಕದ ಗಾನ ಅಂದಿನದು. ಕಾಂಭೋದಿ ರಾಗವನ್ನು ನುಡಿಸಿ ' ಏರಾನಾತೋತ್ಸಲಮು ಜೇಸೇವುರ ಶ್ರೀ ಕೃಷ್ಣ " ಎಂಬ ಪಲ್ಲವಿಯನ್ನು ನೆರವಿದರು. ಎಷ್ಟು ಘಂಟೆಗಳ ಕಾಲ ಕೇಳುತ್ತಿದ್ದನೆಂಬುದರ ಅರಿವೇ ನನಗಿರಲಿಲ್ಲ. ಇದ್ದಕ್ಕಿದ್ದ ಹಾಗೆಯೇ ಪಿಟೀಲು ಶಬ್ದ ನಿಂತಾಗಲೇ ನನಗೆ ಎಚ್ಚರವಾದದ್ದು. ನಿಂತುಹೋಯಿತಲ್ಲ ಈ ಅಮೋಘವಾದನ ಎಂದು ಮನಸ್ಸಿಗೆ ಸಂಕಟವಾಯಿತು. ಇಷ್ಟರಲ್ಲಿ ಕಿಟಕಿಯ ಬಾಗಿಲನ್ನು ತೆರೆಯುವ ಶಬ್ದವಾಯಿತು. ಕಣ್ಣಿಗೆ ಬಿದ್ದರೆ ಅವರೆಲ್ಲಿ ಅಸಮಾಧಾನಪಟ್ಟುಕೊಳ್ಳುವರೋ ಎಂದು ನಾನು ಹೊರಡಲನುವಾದೆ. ಕಿಟಕಿಯನ್ನು ತೆರೆದು ಕೃಷ್ಣಯ್ಯರ್ ಅವರು ತಾಂಬೂಲದ ಚರಟವನ್ನು ಉಗುಳಿದರು. ಅದಷ್ಟೂ ನನ್ನ ತಲೆಯಮೇಲೆ ಬಿದ್ದಿತು. ಇದು ಕೃಷ್ಣಯ್ಯರ್ ಅವರಿಗೆ ತಿಳಿಯಿತು. ಕೂಡಲೇ ಹೊರಗೆ ಬಂದು, ನನ್ನನ್ನು ಗುರ್ತಿಸಿ, " ಅಪಚಾರವಾಯಿತು, ಮನ್ನಿಸಬೇಕು " ಎಂದರು. " ಇಂದು ಶಾರದಾನುಗ್ರಹವಾಯಿತು ನನಗೆ. ನನ್ನ ಪೂರ್ವಪುಣ್ಯದ ಫಲವಿದು " ಎಂದೆ ನಾನು. " ನಮ್ಮ ಮನೆಯ ಬಾಗಿಲು ಸದಾ ನಿಮಗೆ ತೆರದದ್ದೇ ಆಗಿರುವಲ್ಲಿ, ಹೀಗೇಕೆ ಹೊರಗೆ ನಿಂತು ಕೇಳುತ್ತಿದ್ದಿರಿ ? ಒಳಗೆ ಬನ್ನಿ " ಎಂದು ಹೇಳಿ ಕರೆದುಕೊಂಡು ಹೋಗಿ ಮತ್ತೆ ಅದೇ ಪಲ್ಲವಿಯನ್ನು ನುಡಿಸಲು ಪ್ರಾರಂಭಮಾಡಿದರು. ಇಬ್ಬರಿಗೂ ಸ್ಮೃತಿ ತಪ್ಪಿತು. ಕಿಟಕಿಯ ಸಂದಿನಿಂದ ರವಿಕಿರಣಗಳು ಇಣುಕಿನೋಡಿದಾಗ ಇಬ್ಬರೂ ಮೂಕರಂತೆ ಮೇಲೆದ್ದೆವು. ಬ್ರಹ್ಮಾನಂದದ ಅಮಲಿನಲ್ಲಿ

ಒಬ್ಬರ ಬಾಯಲ್ಲೂ ಮಾತೇ ಹೊರಡಲಿಲ್ಲ. ಶಾರದಾದೇವಿಯ ವರಪುತ್ರರಿಗೆ ಭಕ್ತಿಯಿಂದ ನಮಸ್ಕರಿಸಿ ಹೊರಬಿದ್ದೆ. ಈ ವಿಧದ ಅಮೃತಬಿಂದುವಿನ ಪಾನವೇ ನನ್ನ ದೀರ್ಘಾಯುಸ್ಸಿಗೆ ಕಾರಣವಿರಬಹುದೆಂದು ನನಗೆ ಅನೇಕ ವೇಳೆ ಅನ್ನಿಸಿದೆ.

ಕೃಷ್ಣಯ್ಯರ್ ಅವರ ಪಿಟೀಲು ಪಕ್ಕವಾದ್ಯದ ವಿಶೇಷವೇನೆಂದರೆ ನಮ್ಮ ಗುರುಗಳ ಸಂಗಡ ನುಡಿಸುವಾಗ, ಅವರಷ್ಟೇ ಗಂಭೀರ, ವಿಳಂಬ, ತೂಕದಿಂದ ಅವರ ವಿನಿಕೆಯನ್ನನುಸರಿಸುತ್ತಿದ್ದರು. ವೈದ್ಯನಾಥಯ್ಯರ್ ಅವರ ಸಂಗಡ ಕುಳಿತಾಗ ಅವರಷ್ಟೇ ದ್ರುತದಲ್ಲಿ ಸ್ಫುಟವಾಗಿ ನುಡಿಸುತ್ತಿದ್ದರು. ಒಂದೊಂದುವೇಳೆ ಇವರಿಬ್ಬರ ಸಂಗೀತವನ್ನೂ ಮೀರಿಸುವ ವೈಖರಿಯಿಂದ ಶ್ರೋತೃಗಳನ್ನು ಬೆರಗುಮಾಡುತ್ತಿದ್ದರು.

ಆಗ್ಗೆ, ಸಂಗೀತ ಕಛೇರಿಗಳಿಗೆ ಕೊಡುತ್ತಿದ್ದ ಸಂಭಾವನೆ ಅಲ್ಪ. ಸಾಮಾನ್ಯವಾಗಿ ಕಛೇರಿಗೆ ಇಷ್ಟೇ ಹಣಕೊಡಬೇಕೆಂದು ವಿದ್ವಾಂಸರು ಕೇಳುತ್ತಿರಲಿಲ್ಲ. ಕೊಟ್ಟಷ್ಟನ್ನು ಸಂತೋಷದಿಂದ ಸ್ವೀಕರಿಸುತ್ತಿದ್ದರು. ಶೇಷಣ್ಣನವರಂತಹ ಮಹಾವಿದ್ವಾಂಸರು ಐದು ರೂಪಾಯಿಗಳಿಗೆಲ್ಲ ಒಂದು ಕಛೇರಿಯನ್ನು ಮಾಡಿದ್ದನ್ನು ನಾನು ಚೆನ್ನಾಗಿ ಬಲ್ಲೆ. ಇಂತಹ ಸನ್ನಿವೇಶದಲ್ಲಿ ತಮ್ಮ ಸಂಗೀತಕಛೇರಿಗಳ ಮೂಲಕ ಒಂದು ಲಕ್ಷ ರೂಪಾಯಿಗೂ ಹೆಚ್ಚಾಗಿ ಕೃಷ್ಣಯ್ಯರ್ ಅವರು ಆಸ್ತಿಮಾಡಿದ್ದರೆಂದರೆ ಅವರು ಎಷ್ಟು ಕಛೇರಿಗಳನ್ನು ಮಾಡಿರಬೇಕು, ಎಷ್ಟು ದುಡಿದಿರಬೇಕು ಎಂಬುದನ್ನು ವಾಚಕರೇ ಊಹಿಸಿಕೊಳ್ಳಬಹುದು. ಅಷ್ಟು ಕಷ್ಟಪಟ್ಟು ಸಂಪಾದಿಸಿದ ತಮ್ಮ ಹಣದ ಮೇಲೆ ಕೃಷ್ಣಯ್ಯರಿಗೆ ಹೆಚ್ಚಿನ ಅಭಿಮಾನವಿದ್ದದ್ದು ನ್ಯಾಯವಾದದ್ದೇ. ಆದರೆ, ಒಂದೊಂದು ವೇಳೆ, ಇವರ ನಡವಳಿಕೆ ಸುತ್ತುಮುತ್ತಿನ ಜನಕ್ಕೆ ಆಶ್ಚರ್ಯವನ್ನುಂಟುಮಾಡುತ್ತಿತ್ತು. ನನ್ನ ಗುರುಕುಲವಾಸವನ್ನು ಮುಗಿಸಿಕೊಂಡು ಮೈಸೂರಿಗೆ ಹಿಂತಿರುಗಿದನಂತರ ನಡೆದ ಪ್ರಸಂಗವೊಂದು ಯಾರಿಗಾದರೂ ನಗುವನ್ನು ತಾರದೇ ಇರದು. ಚಾಮರಾಜ ಒಡೆಯರ ಸಮ್ಮುಖದಲ್ಲಿ ಕೃಷ್ಣಯ್ಯರ್ ಅವರ ತನಿ ಪಿಟೀಲು ಕಛೇರಿಯೊಂದು ಒಮ್ಮೆ ಏರ್ಪಾಡಾಗಿತ್ತು. ಕಛೇರಿಯಾದಮೇಲೆ ಪ್ರಭುಗಳು ವಿದ್ವಾಂಸರಿಗೆ ಅಮೂಲ್ಯವಾದ ಖಿಲ್ಲತ್ತುಗಳನ್ನೂ ಒಂದು ಸಹಸ್ರ ರೂಪಾಯಿಗಳನ್ನೂ ದಯಪಾಲಿಸಿದರು. ಆಗ್ಗೆ ನೋಟಿನ ಚಲಾವಣೆ ಈಗಿನಷ್ಟಿರಲಿಲ್ಲವಾದ್ದರಿಂದ ಒಂದು ಸಹಸ್ರ ಬೆಳ್ಳಿಯ ನಾಣ್ಯ

ಗಳನ್ನು ತಟ್ಟೆಯಲ್ಲಿ ಜೋಡಿಸಲಾಗಿತ್ತು. ಹಣದ ರಾಶಿಯನ್ನು ಕಂಡೊಡನೆಯೇ ಕೃಷ್ಣಯ್ಯರ್ ಅವರಿಗೆ ಬ್ರಹ್ಮಾನಂದವಾಯಿತು. ತಮ್ಮ ಸಂತೋಷದ ಭರದಲ್ಲಿ ತಾವು ರಾಜಸಮ್ಮುಖದಲ್ಲಿರುವುದರ ಅರಿವೂ ಇರಲಿಲ್ಲ ಅವರಿಗೆ. ಪ್ರತಿಯೊಂದು ರೂಪಾಯಿ ನಾಣ್ಯವನ್ನೂ ಬೆರಳಿನಿಂದ ಮೇಲಕ್ಕೆ ಠಣ್ ಎಂದು ಹಾರಿಸಿ ನೋಡಿ, ಸರಿಯಾಗಿದೆಯೋ ಇಲ್ಲವೋ ಎಂಬುದನ್ನು ಪರೀಕ್ಷಿಸತೊಡಗಿದರು. ಎರಡು ನಾಣ್ಯಗಳ ಶಬ್ದದಲ್ಲಿ ಏನೋ ಅನುಮಾನ ಬರಲು, ಈ ಎರಡು ರೂಪಾಯಿಗಳ ಬದಲು ಬೇರೆ ರೂಪಾಯಿಗಳನ್ನು ಕೊಡಿಸಿಕೊಡಬೇಕು ಪ್ರಭು," ಎಂದು ಪ್ರಾರ್ಥಿಸಿಕೊಂಡರು! ಪ್ರಭುಗಳಿಗೆ ಹುಚ್ಚು ಹುಚ್ಚು ನಗು ಬಂತು.

ಒಂದು ಬಾರಿ ಮದ್ರಾಸಿನ ತೊಂಡಮುಂಡಲಂ ಹೈಸ್ಕೂಲಿನಲ್ಲಿ ನಡೆದ ಅನಂತರಾಮ ಭಾಗವತರ ಸಂಗೀತಕ್ಕೆ ಕೃಷ್ಣಯ್ಯರ್ ಪಿಟೀಲು ನುಡಿಸುತ್ತಿದ್ದರು. ನಾಲ್ಕಾರು ಕೀರ್ತನೆಗಳಾದಮೇಲೆ ಕಾಂಭೋಧಿ ರಾಗಾಲಾಪನೆ ಪ್ರಾರಂಭವಾಯಿತು ಅಮೋಘವಾದ ಹಾಡುಗಾರಿಕೆ, ಅದಕ್ಕೆ ಮೆರಗು ಕೊಡುವಂತಹ ಪಿಟೀಲು ಪಕ್ಕವಾದ್ಯ! ಸಭಿಕರೆಲ್ಲರೂ ಆನಂದದಲ್ಲಿ ಮೈ ಮರೆತಿದ್ದರು. ರಾಗಾಲಾಪನೆ ಮುಗಿಯಿತು. ಪಲ್ಲವಿ ಪ್ರಾರಂಭಮಾಡಿ ನಾಲ್ಕಾವರ್ತ ಹಾಡಿ ಪಕ್ಕವಾದ್ಯಕ್ಕೆ ಬಿಟ್ಟರು ಅನಂತರಾಮ ಭಾಗವತರು. ಈ ಸಮಯಕ್ಕೆ ಸರಿಯಾಗಿ ಪಿಟೀಲಿನ ಒಂದು ತಂತಿ ಆಕಸ್ಮಿಕವಾಗಿ ಕಿತ್ತುಹೋಯಿತು. ಪಲ್ಲವಿಯನ್ನು ನುಡಿಸಲು ಸಾಮರ್ಥ್ಯಸಾಲದೆ ತಂತಿ ಕಿತ್ತು ಉಪಾಯ ಮಾಡಿದ್ದಾರೆಂಬ ಭಾವದಿಂದ ಕೂಡಿದ ದುಷ್ಟ ನಗೆಯೊಂದು ಭಾಗವತರ ತುಟಿಯಮೇಲೆ ಮೂಡಿತು. ಮೈಯೆಲ್ಲ ಬೆಂಕಿಯಾಯಿತು ಕೃಷ್ಣಯ್ಯರ್ ಅವರಿಗೆ ಕಿತ್ತು ಹೋಗಿದ್ದ ತಂತಿಯನ್ನು ಪುನಃ ಕಟ್ಟಲೇ ಇಲ್ಲ. "ಸಾಕು ಒಂದೇ ತಂತಿ ನಿಮ್ಮ ಪಲ್ಲವಿಯನ್ನು ನುಡಿಸುವುದಕ್ಕೆ ಎಂದು ಹೇಳಿ ಉಳಿದ ಮೂರು ತಂತಿಗಳಲ್ಲಿ ಎರಡನ್ನು ಮುಟ್ಟದೆಯೇ "ಮುಂದೆ ಸಾಗಲಿ ತಮ್ಮ ವಿಸಿಕೆ," ಎಂದು ಹೇಳಿ, ಒಂದೇ ತಂತಿಯಲ್ಲಿ ಅಂದಿನ ಉಳಿದ ಕಛೇರಿಯೆಲ್ಲವನ್ನೂ ನಿರ್ವಹಿಸಿಬಿಟ್ಟರು ಈ ಮಹಾ ವಿದ್ವಾಂಸರು.

ಕೃಷ್ಣಯ್ಯರ್ ಅವರಲ್ಲಿ ಮತ್ತೊಂದು ಮಹಾ ಸಾಮರ್ಥ್ಯವಿತ್ತು. ಒಂದೊಂದುವೇಳೆ ಅವರು ಕಛೇರಿಗೆ ಬರಲು ತಡವಾಗಿ ಹಾಡಿಕೆ ಪ್ರಾರಂಭವಾಗಿರುತ್ತಿತ್ತು. ಆಗ ಅಯ್ಯರ್ ಅವರು ಪೆಟ್ಟಿಗೆಯಿಂದ ಪಿಟೀಲನ್ನು

ತೆಗೆದು ಶ್ರುತಿಮಾಡುವ ಗೋಜಿಗೇ ಹೋಗದೆ, ತಂತಿಯ ಮೇಲೆ ಬೆರಳಿಟ್ಟು ಆಧಾರ ಶ್ರುತಿಯನ್ನು ನೋಡಿಕೊಂಡು, ಅದನ್ನನುಸರಿಸಿ ಕಛೇರಿಗೆ ನುಡಿಸಲು ಪ್ರಾರಂಭಿಸಿಬಿಡುತ್ತಿದ್ದರು. ಹಾಡುತ್ತಿದ್ದ ವರ್ಣವೋ ಕೀರ್ತನೆಯೋ ಮುಗಿದ ಬಳಿಕ ವಾದ್ಯವನ್ನು ಸರಿಯಾಗಿ ಶ್ರುತಿಗೆ ಸೇರಿಸಿಕೊಳ್ಳುತ್ತಿದ್ದರು. ವಾದ್ಯದಮೇಲೆ ಅಂಥ ಹತೋಟಿ ಅಯ್ಯರ್ ಅವರದು!

ಮಹಾ ವೈದ್ಯನಾಥಯ್ಯರ್ ಅವರ ಮನೆಗೆ ಒಂದೆರಡು ಬಾರಿ ಹೋಗಿ ಬರುವ ಸುಯೋಗವೇನೋ ದೊರೆತಾಗ್ಯೂ, ಕೃಷ್ಣಯ್ಯರ್ ಅವರೊಡನೆ ಬೆಳೆದಷ್ಟು ಸಲಿಗೆ ವೈದ್ಯನಾಥಯ್ಯರ್ ಅವರೊಡನೆ ಬೆಳೆಯಲಿಲ್ಲ. ಸ್ವಭಾವತಃ ವೈದ್ಯನಾಥಯ್ಯರ್ ಮಿತಭಾಷಿಗಳು. ಅವರಿಗೆ ಸಂಬಂಧಿಸಿದ ವ್ಯವಹಾರಗಳನ್ನೆಲ್ಲ ಸಾಮಾನ್ಯವಾಗಿ ಅವರ ಅಣ್ಣಂದಿರೇ ನಿರ್ವಹಿಸುತ್ತಿದ್ದರು. ಅಣ್ಣ ಹೇಳಿದ್ದಕ್ಕೆ ತಮ್ಮ ಪ್ರತಿಯಾಡುತ್ತಿರಲಿಲ್ಲ. ಅಷ್ಟು ಗೌರವ ಮತ್ತು ಭಕ್ತಿ. ವೈದ್ಯನಾಥಯ್ಯರ್ ಅವರ ಕಛೇರಿಯೊಂದರಲ್ಲಿ ನಡೆದ ಸಂಗತಿಯೊಂದು ಇವತ್ತಿಗೂ ನನ್ನ ಸ್ಮೃತಿಪಥದಲ್ಲಿ ಅಚ್ಚಳಿಯದೇ ನಿಂತಿದೆ. ಧನಿಕರೊಬ್ಬರ ಮನೆಯಲ್ಲಿ ವೈದ್ಯನಾಥಯ್ಯರ್ ಅವರ ಕಛೇರಿ ಗೊತ್ತಾಗಿತ್ತು. ತುಂಬಿದ ಸಭೆ. ವಿದ್ವಾಂಸರಿಗೆ ಸಲ್ಲಬೇಕಾಗಿದ್ದ ಅಮೂಲ್ಯ ವಸ್ತ್ರಾಭರಣಗಳು ಸಭಿಕರೆಲ್ಲರಿಗೂ ಕಾಣಿಸುವಂತೆ ಹಜಾರದ ಮಧ್ಯ ಭಾಗದಲ್ಲಿ ಕಂಗೊಳಿಸುತ್ತಿದ್ದವು. ವೈದ್ಯನಾಥಯ್ಯರ್ ಅವರ ಅಣ್ಣನವರೂ ಸಭೆಯಲ್ಲಿ ಹಾಜರಿದ್ದರು. ಭೈರವಿರಾಗದಲ್ಲಿ ರೂಪಕತಾಳದ "ಚಿಂತಯಮಾಕಂದಮೂಲ ಕಂದಂ" ಎಂಬ ಕೃತಿಯಿಂದ ಕಛೇರಿ ಆರಂಭವಾಯಿತು. ಕೀರ್ತನೆಯ ಅನುಪಲ್ಲವಿ—ಅಖಂಡ ಸಚ್ಚಿದಾನಂದಂ—ಎಂಬ ಜಾಗದಲ್ಲಿ ಅದ್ಭುತವಾಗಿ ಕೆಲಸಮಾಡಿ ಸುಮಾರು ಒಂದು ಒಂದೂವರೆ ಘಂಟೆಯಕಾಲ ಹಾಡಿ ಸಭೆಯಮೇಲೆ ಸಮ್ಮೋಹನಾಸ್ತ್ರ ಬೀರಿದರು. ಈ ಕೃತಿ ಮುಗಿದಮೇಲೆ, ಕಛೇರಿಯನ್ನೇರ್ಪಡಿಸಿದ್ದ ಆ ಧನಿಕನಿಗೆ ಯಾವುದೋ ಕೃತಿಯೊಂದನ್ನು ಕೇಳಬೇಕೆಂಬ ಅಭಿಲಾಷೆಯಾಯಿತು. ಚೀಟಿಯೊಂದರಲ್ಲಿ ತನ್ನ ಕೋರಿಕೆಯನ್ನು ಸೂಚಿಸಿ ವೈದ್ಯನಾಥಯ್ಯರ್ ಅಣ್ಣನವರ ಕೈಯ್ಯಲ್ಲಿಟ್ಟ. ಮಡಚಿದ ಕಾಗದವನ್ನು ತೆರೆದು ಓದಿಕೊಂಡೊಡನೆಯೇ ಅವರ ಮುಖ ರಕ್ತವರ್ಣ ತಾಳಿತು. "ತಂಬೂರಿಗೆ ಮುಸುಕು ಹಾಕಿ ಮೇಲೇಳು" ಎಂದು ತಮ್ಮನಿಗೆ ಆಜ್ಞಾಪಿಸಿದರು. ಮರುಮಾತಾಡದೆ 'ತಥಾಸ್ತು' ಎಂದರು ವೈದ್ಯನಾಥಯ್ಯರ್. ಧನಿಕ ತಬ್ಬಿಬ್ಬಾದ. ಸಭಿಕ

ರೆಲ್ಲರೂ ಚಕಿತರಾದರು. "ಅಪಚಾರವೇನಾಯಿತು?", ಎಂದು ಧನಿಕ ಮೊರೆಯಿಟ್ಟ. "ಇನ್ನು ಕಛೇರಿ ಮಾಡುವ ಕಾಲ ಹೋಯಿತು. ಭಾವಾವೇಶಪೂರಿತನಾಗಿ ತನಗೆ ತೋರಿದ್ದನ್ನು ಹಾಡುವ ಸ್ವಾತಂತ್ರ್ಯವನ್ನು ಕಳೆದುಕೊಂಡು ಶ್ರೋತೃಗಳ ಇಷ್ಟಾನಿಷ್ಟಗಳಿಗೆ ತನ್ನ ಮನೋಧರ್ಮವನ್ನು ಹೊಂದಿಸಿಕೊಳ್ಳಬೇಕಾದ ಕಾಲಬಂದಮೇಲೂ ಸಂಗೀತ ಕಛೇರಿಗಳನ್ನು ಮಾಡುವುದು ವಿದ್ವಾಂಸನೆನಿಸಿಕೊಂಡವನಿಗೆ ಉಚಿತವಲ್ಲ. ಇನ್ನು ಮೇಲೆ ನಿನ್ನ ಸಂಗೀತ ಕೇವಲ ನಿನ್ನ ಆತ್ಮಾನಂದಕ್ಕಾಗಿ ಮತ್ತು ಆತ್ಮೋದ್ಧಾರಕ್ಕಾಗಿಯೇ ಹೊರತು ಪ್ರದರ್ಶನಕ್ಕಲ್ಲ" ಎಂದು ಹೇಳಿ ತಮ್ಮನನ್ನು ಕರೆದುಕೊಂಡು ಸಭಾಪರಿತ್ಯಾಗಮಾಡಿ ಹೊರಟೇಬಿಟ್ಟರು. ವೈದ್ಯನಾಥಯ್ಯರ್ ಅವರ ಕಛೇರಿ ಅದೇ ಕಡೆಯಾಯಿತು!

ಮೂರೂ ಸೇರಿದರೆ ಪೂರ್ವಸುಕೃತವೆಂಬ ನಾಣ್ಣುಡಿಯಂತೆ, ಗಾನಕೇಸರಿಗಳಂತೆ ವೈಭವದಿಂದ ಮೆರೆದ ನಮ್ಮ ಗುರುಗಳು, ವೈದ್ಯನಾಥಯ್ಯರ್ ಹಾಗೂ ಕೃಷ್ಣಯ್ಯರ್ ಇವರುಗಳ ವರ್ಣನಾತೀತವಾದ ಗಾನಪ್ರತಿಭೆಯ ಪರಿಚಯವನ್ನು ಮಾಡಿಕೊಳ್ಳುವ ಸುಯೋಗ ಲಭಿಸಿದ್ದು ನನ್ನ ಬಹು ಜನ್ಮಗಳ ಪುಣ್ಯಫಲ. ಇದರ ಫಲವೆಲ್ಲ ನನ್ನ ಪ್ರಭು ಚಾಮರಾಜೇಂದ್ರ ಒಡೆಯರಿಗೆ ಸೇರಿದ್ದು. ನನ್ನ ಜೀವಿತಕ್ಕೆ ಒಂದು ಸ್ವರೂಪವನ್ನು ಕೊಟ್ಟು ಕಾಪಾಡಿದವನೇ ಆ ಪುಣ್ಯಪುರುಷ.

ನಕ್ಕು ನಲಿದಾಡಿದ, ಒಲವಿನ ಗಣಿಯಾದ ತವರುಮನೆಯ ಹೊಸ್ತಿಲನ್ನು ಮೊಟ್ಟಮೊದಲು ದಾಟುತ್ತಿರುವ ತರುಣಿಯ ಹೃದಯದಂತಾಗಿತ್ತು. ನನ್ನ ಪರಿಸ್ಥಿತಿ, ಗುರುಗಳ ಆಶೀರ್ವಾದ ಪಡೆದು ನಾನು ಮೈಸೂರಿಗೆ ಹಿಂತಿರುಗಲು ಅಣಿಯಾದಾಗ. ಹಿಂದಿನ ದಿನ ರಾತ್ರಿ ನನ್ನ ಗುರುಗಳೂ ನಾನೂ ಬಹು ಹೊತ್ತು ಮಾತುಕತೆಯಾಡಿದೆವು. ಮೈಸೂರಿನಲ್ಲಿ ತಾವು ಕಳೆದ ಸಂತೋಷದ ಸನ್ನಿವೇಶಗಳನ್ನೆಲ್ಲ ಗುರುಗಳು ಸ್ಮರಣೆಗೆ ತಂದುಕೊಂಡರು. ಮೈಸೂರು ಸಂಸ್ಥಾನಕ್ಕೆ ಬಂದಾಗ್ಗ ಅವರು ಮೊಟ್ಟಮೊದಲು ಬೆಂಗಳೂರಿನಲ್ಲಿ ಆರ್ಕಾಟ್ ಶ್ರೀನಿವಾಸಾಚಾರ್ಯರನ್ನು ಭೇಟಿಮಾಡಲು ಹೋದರಂತೆ. ಶ್ರೀನಿವಾಸಾಚಾರ್ಯರು ಆಗ ತಾನೇ ಆಫೀಸಿಗೆ ಹೊರಟ್ಟಿದ್ದರಂತೆ. ಬಂಗಲೆಯ ಮುಂದೆ ನಿಂತಿದ್ದ ಕುದುರೆಯ ಸಾರೋಟಿನಲ್ಲಿ

ಒಂದು ಕಾಲನ್ನಿಟ್ಟಿದ್ದರು. ಇನ್ನೊಂದು ಕಾಲನ್ನಿಟ್ಟು ಹೊರಡುವಷ್ಟರಲ್ಲಿ ನಮ್ಮ ಗುರುಗಳು ನಿಂತಿದ್ದುದು ಅವರ ಕಣ್ಣಿಗೆ ಬಿತ್ತು. "ಯಾರು ತಾವು?" ಎಂದು ಪ್ರಶ್ನಿಸಿದರು. "ಪಟ್ಣಂ ಸುಬ್ರಹ್ಮಣ್ಯ ಎನ್ನುತ್ತಾರೆ ನನ್ನನ್ನು" ಎಂದು ಗುರುಗಳು ಉತ್ತರ ಕೊಟ್ಟರು. "ಓಹೋ! ನೀವೇಯೋ ಆ ವಿಖ್ಯಾತ ವಿದ್ವಾಂಸರು? ಬಹಳ ಸಂತೋಷ ತಮ್ಮ ಸಂದರ್ಶನ ವಾದದ್ದು. 'ಏನಾದರೂ ಕೊಂಚ ಆಗಬಹುದಲ್ಲ?'' ಎಂದರಂತೆ ನಿಂತಿದ್ದ ಹಾಗೆಯೇ. 'ಅವಶ್ಯಕವಾಗಿ ಆಗಬಹುದು' ಎಂದು ಮಧ್ಯಮಾವತಿ ರಾಗ ವನ್ನು ಸ್ವಲ್ಪ ಹಾಡಿ ಎರಡಾವರ್ತ ತಾನವನ್ನು ಹಾಡಿದರಂತೆ. ಶ್ರೀನಿ ವಾಸಾಚಾರ್ಯರಿಗೆ ಬ್ರಹ್ಮಾನಂದವಾಯಿತು. ತಮ್ಮ ಗುಮಾಸ್ತರನ್ನು ಕರೆದು, "ಈ ಕಾಗದ ಪತ್ರಗಳನ್ನು ತೆಗೆದುಕೊಂಡು ಹೋಗಿ ನನ್ನ ಮೇಜಿನಮೇಲಿರಿಸಿ ಆಫೀಸಿಗೆ ಹೋಗಿ ಇವತ್ತು ನಾನು ಬರುವುದಿಲ್ಲವೆಂದು ತಿಳಿಸಿ ಬನ್ನಿ'' ಎಂದರಂತೆ. ಗುರುಗಳಿಗೆ ಅಂದು ಅಲ್ಲಿಯೇ ಆತಿಥ್ಯ ನಡೆಯಿತು. ಸಂಜೆ ಅಮೋಘವಾದ ಕಛೇರಿ ಜರುಗಿತು. ಯಥೇಚ್ಛ ವಾಗಿ ಸನ್ಮಾನಮಾಡಿದರಂತೆ. "ಇಷ್ಟು ಘನವಿದ್ವಾಂಸರನ್ನು ಇವತ್ತು ಬೆಳಗ್ಗೆ ಆಫೀಸಿಗೆ ಹೊರಟು ಬೀದಿಯಲ್ಲಿ ನಿಂತಿದ್ದ ಹಾಗೆಯೇ ಸ್ವಲ್ಪ ಹಾಡಿ, ಅಂತಂದಾಗ; ಕೊಂಚವೂ ಹಿಂದುಮುಂದು ನೋಡದೆ ಹಾಡಿದ ರಲ್ಲ! ಎಷ್ಟು ಸರಳಸಂಪನ್ನರು!'' ಎಂದು ಸಭೆಯಲ್ಲಿ ಗುರುಗಳನ್ನು ಬಹುವಾಗಿ ಕೊಂಡಾಡಿದರಂತೆ! ಈ ಘಟನೆಯನ್ನು ಜ್ಞಾಪಿಸಿಕೊಂಡು; "ಮೈಸೂರಿಗೆ ಹಿಂತಿರುಗಿದಾಗ ನನ್ನ ವಿಶ್ವಾಸ ಪ್ರಣಾಮಗಳನ್ನು ಆ ಮಹ ನೀಯರಿಗೆ ತಿಳಿಸು" ಎಂದು ಗುರುಗಳು ನನಗೆ ಅಪ್ಪಣೆಮಾಡಿದರು. ವೀಣೆ ಶೇಷಣ್ಣ, ಸುಬ್ಬಣ್ಣನವರ ಪಾಂಡಿತ್ಯ, ಔದಾರ್ಯಗಳನ್ನು ಹೊಗಳಿದರು. ಮೈಸೂರು ಮೊದಲಿಂದಲೂ ಕಲೆಯ ಬೀಡಾಗಿದೆ. ನಿಮ್ಮ ನಾಡಿಗೆ ನಾನು ಭಕ್ತಿಯಿಂದ ನೀಡುವ ಕಾಣಿಕೆಯೋ ನೀನು. ಕೀರ್ತಿವಂತನಾಗು" ಎಂದು ಆಶೀರ್ವದಿಸಿದರು. "ನಿಮ್ಮೂರು ಎಲ್ಲ ದೃಷ್ಟಿಯಿಂದಲೂ ಸರಿ, ವಾಸು. ಒಂದು ಮಾತ್ರ ಭಯಂಕರ" ಎಂದರು ಗುರುಗಳು. ಬೆರಗಾದೆ ನಾನು "ಆ ಕರಿಯ ಅಂಗಿಯೊಳಗೆ ಮೈಯನ್ನು ಬಲವಂತವಾಗಿ ತುರುಕಿ, ಸೊಂಟಕ್ಕೆ ಬಿಗಿದು ಕಟ್ಟಿ, ತಲೆಯಮೇಲೆ ಕೊಡದ ಗಾತ್ರ ಪೇಟವನ್ನಿಟ್ಟು ಯಜ್ಞಪಶುವಿನಂತೆ ಹಿಡಿದುಕೊಂಡು ಹೋಗಿ ದೊರೆಗಳ ಮುಂದೆ ಕೂಡಿಸಿ

‘ ಹಾಡು ’ ಎನ್ನುತ್ತಾರಲ್ಲ; ಅದು ಅತಿ ಭಯಂಕರ ಅನುಭವ ವಾಸು ! ಈಗಲೂ ಮೈ ಬೆವರುತ್ತೆ ಅದನ್ನು ಜ್ಞಾಪಿಸಿಕೊಂಡರೆ ” ಎಂದು ನಕ್ಕರು !

ನನ್ನ ಗುರುಗಳನ್ನಗಲಿ ಬರಲು ಮನಸ್ಸಿಗೆಷ್ಟು ನೋವಾಯಿತೋ, ಕೆಂಪೇಗೌಡರನ್ನು ಬಿಟ್ಟುಬರಲೂ ಅಷ್ಟೇ ಬೇಸರವಾಯಿತು. ನಾನು ಮೈಸೂರಿಗೆ ಹಿಂತಿರುಗಿದ ಕೆಲವೇ ದಿನಗಳಲ್ಲಿ ಕೆಂಪೇಗೌಡರೂ ಗುರುಕುಲ ವಾಸ ಮುಗಿಸಿ ಹೊರಡುವವರಿದ್ದರು. ಜೊತೆಯಲ್ಲಿ ಕಳೆದ ನಾಲ್ಕಾರು ವರ್ಷಗಳಲ್ಲಿ ನನಗೂ ಗೌಡರಿಗೂ ಸ್ನೇಹ ವಿಶ್ವಾಸಗಳು ತಾನೇತಾನಾಗಿ ಬೆಳೆದು ಬಂದಿದ್ದವು. ಕೆಂಪೇಗೌಡರ ಬಾಲ್ಯ ಮಾತಾಪಿತೃಗಳ ಬಗ್ಗೆ ವಿವರಗಳನ್ನು ಸಂಗ್ರಹಮಾಡಬೇಕೆಂಬ ಯೋಚನೆಯೇ ಆಗ್ಗೆ ನನಗಿರಲಿಲ್ಲ ವಾಗಿ, ಚೇಷ್ಟೆ, ತುಂಟುತನ, ಕುಚೋದ್ಯ, ಹರಟೆಯಲ್ಲೇ ಕಾಲಕಳೆದೆವು. ಅವರ ಪೂರ್ಣ ಜೀವನಪರಿಚಯ ಲಭ್ಯವಾಗಲಿಲ್ಲವಲ್ಲ ಎಂದು ಈಗ ವ್ಯಥೆ ಯಾಗುತ್ತಿದೆ. ಮಿಂಚಿಹೋದಕಾರ್ಯ ! ಜ್ಞಾಪಕವಿರುವ ಒಂದೆರಡು ಸಂಗತಿಗಳನ್ನಾದರೂ ಇಲ್ಲಿ ಪ್ರಸ್ತಾಪಿಸುವುದು ಅನುಚಿತವಲ್ಲವೆಂದು ಭಾವಿ ಸುತ್ತೇನೆ.

ಗೌಡರು ನೋಡುವುದಕ್ಕೆ ಸುರೂಪಿಯಲ್ಲದಿದ್ದರೂ ಕುರೂಪಿಯೇನೂ ಅಲ್ಲ. ಸಾಮಾನ್ಯ ಎತ್ತರದ ಆಳು......... ಗೌಡರೂ ನಾನೂ ಸಮಾನ ವಯಸ್ಕರಾಗಿದ್ದೆವು. ಅವರ ಜನ್ಮ ಸ್ಥಳ ಕೊಯಮುತ್ತೂರು. ಬಹಳಕಾಲ ಗೌಡರು ಬೆಂಗಳೂರಿನಲ್ಲಿ ವಾಸವಾಗಿದ್ದುದರಿಂದ ಬೆಂಗಳೂರು ಕೆಂಪೇ ಗೌಡರೆಂದೂ ಅವರನ್ನು ಕರೆಯುವ ವಾಡಿಕೆಯಿತ್ತು. ಕೆಂಪೇಗೌಡರು ಧನಿಕ ಮನೆತನದವರು. ಅವರು ಒಟ್ಟು ನಾಲ್ಕು ಜನ ಅಣ್ಣತಮ್ಮಂದಿರು. ಬಾಲ್ಯದಿಂದಲೂ ಸಂಗೀತದಲ್ಲಿ ಅಭಿರುಚಿ, ಆಸಕ್ತಿಯಿದ್ದುದರಿಂದ, ತಮ್ಮ ಪಾಲಿಗೆ ಬಂದ ಆಸ್ತಿಯಲ್ಲಿ ಸಹಸ್ರಾರು ರೂಪಾಯಿಗಳಷ್ಟು ಗುರುದಕ್ಷಿಣೆ ಕೊಟ್ಟು, ಸಂಗೀತಾಭ್ಯಾಸವನ್ನು ಪ್ರಾರಂಭಮಾಡಿದ್ದರು. ಗುರುಗಳ ಬಳಿ ನಾನು ಹೋದಾಗ, ನಾನೂ ಗೌಡರೂ ಒಂದೇ ಮಟ್ಟದಲ್ಲಿದ್ದೆವಾದ್ದರಿಂದ ಜೊತೆಯಲ್ಲಿ ಪಾಠ ಹೇಳಿಸಿಕೊಳ್ಳಲೂ ಸಾಧಕನಡೆಸಲೂ ಅನುವಾಯಿತು. ಗೌಡರದು ಗಂಧರ್ವಶಾರೀರ. ಬಾಯಿ ತೆರೆಯುವುದೇ ತಡ, ಕೇಳುಗರ ಮೇಲೆ ಸಮ್ಮೋಹನಾಸ್ತ್ರ ಬೀರಿದಂತಾಗುತ್ತಿತ್ತು. ಗೌಡರಂತೆ ನಿಮಿಷ ಮಾತ್ರದಲ್ಲಿ ರಾಗರಂಜನೆಯನ್ನುಂಟುಮಾಡುವ ವಿದ್ವಾಂಸರು ಅತಿವಿರಳ.

ಒಂದು ಹಿಡಿ ಕಣ್ಣು ಕೋರೈಸುವ ಸೀಮೆಯ ಕಮಲಗಳನ್ನು ಕಣ್ಣು ಮುಂದೆ ಎರಚಿದರೆ ಯಾವ ಅನುಭವವಾಗುವುದೋ ಗೌಡರು ಎರಡೇ ಆವರ್ತ ರಾಗವನ್ನು ಹಾಡಿದಾಗ ಅದೇ ಅನುಭವವಾಗುತ್ತಿತ್ತು. ರಾಗದೇವತೆಯೇ ಪ್ರತ್ಯಕ್ಷವಾದಂತೆ ತೋರುತ್ತಿತ್ತು. ಶೇಷಣ್ಣ, ಸುಬ್ಬಣ್ಣ, ಕೃಷ್ಣಪ್ಪ ಎಲ್ಲರಿಗೂ ಗೌಡರಲ್ಲಿ ಗೌರವ ವಿಶ್ವಾಸಗಳಿದ್ದವು.

ಈಗ ನಾನು ಹೇಳುವ ಮಾತು ನಡೆದು ಸುಮಾರು ನಲವತ್ತೈದು ವರ್ಷಗಳಾಗಿರಬೇಕು. ಶೇಷಣ್ಣನವರ ಮನೆ ಆಗಿನ್ನು ಕೋಟೆಯೊಳಗೇ ಇತ್ತು. ಕೃಷ್ಣೋತ್ಸವದ ಸಂದರ್ಭದಲ್ಲಿ ನನ್ನ ಸಂಗೀತವೇರ್ಪಾಡಾಗಿತ್ತು. ಕಛೇರಿಗಳು ರಾತ್ರಿ ಸುಮಾರು ಒಂಬತ್ತು ಘಂಟೆಗೆ ಪ್ರಾರಂಭವಾಗಿ ಮಧ್ಯ ರಾತ್ರಿಯವರೆಗೂ ನಡೆಯುತ್ತಿದ್ದವು. ಶೇಷಣ್ಣನವರ ಮನೆ ಅಷ್ಟು ವಿಶಾಲ ವಾಗಿರಲಿಲ್ಲವಾಗಿ, ಶೇಷಣ್ಣನವರ ಮನೆಯ ಮುಂದಿನ ಮತ್ತು ಪಕ್ಕದ ರಸ್ತೆ ಗಳೆರಡರಲ್ಲೂ ಜನಸಂದಣಿ ಬಹಳವಾಗಿ ಸೇರುತ್ತಿತ್ತು. ಊಟ ಮುಗಿಸಿ ಕೊಂಡು, ಚಾಪೆ ದಿಂಬುಗಳನ್ನು ಹೊತ್ತುಕೊಂಡು, ರಸ್ತೆಗಳಲ್ಲಿ ಹಾಕಿ ಕೊಂಡು ಆರಾಮವಾಗಿ ಮಲಗಿ ಜನ ಸಂಗೀತವನ್ನು ಕೇಳಿ ಆನಂದ ಹೊಂದುತ್ತಿದ್ದರು. ಅಂದಿನ ಕಛೇರಿಗೆ ಗೊತ್ತಾಗಿದ್ದ ಪಿಟೀಲು ಪಕ್ಕವಾದ್ಯದ ವಿದ್ವಾಂಸರು ಬಂದಿರಲಿಲ್ಲವಾಗಿ, ನಾನು ತಂಬೂರಿಯಮೇಲೆ ಹಾಡಬೇಕಾಗಿ ಬಂತು. ಸುಮಾರು ಒಂದು ಘಂಟೆಯಕಾಲ ಕಛೇರಿ ಹಾಗೆಯೇ ಸಾಗಿತು. ಅನಂತರ ಸಾವೇರಿ ರಾಗವನ್ನು ಹಾಡಲು ಮೊದಲುಮಾಡಿದೆ. ಎದುರಿನಲ್ಲಿ ಕುಳಿತಿದ್ದ ಶೇಷಣ್ಣನವರು ಇದ್ದಕ್ಕಿದ್ದಂತೆ ಎದ್ದು ಒಳಗಿನಿಂದ ಪಿಟೀಲನ್ನು ತಂದು ಶ್ರುತಿಗೆ ಸೇರಿಸಿ, "ಮುಂದುವರಿಯಲಿ ಆಚಾರ್ಯರೇ! ಸೊಗಸಾಗಿದೆ ನಿಮ್ಮ ಮನೋಧರ್ಮ" ಎಂದರು. ಹುರಿದುಂಬಿಸಿದರು. ಜನ ಪ್ರೋತ್ಸಾಹಿಸಿದರು. ಕರತಾಡನಮಾಡಿದರು. ಈ ಮಧ್ಯೆ ಸಭೆಯಲ್ಲಿ ಗೊಂದಲ ಪ್ರಾರಂಭವಾಗಿ ಎಲ್ಲರ ಗಮನವೂ ಬಾಗಿಲಕಡೆ ಸರಿಯಿತು. "ಎಂಗ ಗುರು ಇನ್ನೂ ಪೋಹಲ್ಲೆ ಅಣ್ಣ!" ಎಂದು ಕೂಗುತ್ತ ಗೌಡರು ನನ್ನ ಕಡೆಗೆ ನುಗ್ಗಿ ಬಂದರು. ಗೌಡರು ಎಲ್ಲಿದ್ದರು, ಯಾವಾಗ ಬಂದರು ಎಂಬುದು ಯಾರಿಗೂ ತಿಳಿಯಲಿಲ್ಲ. ತಾವು ಹೊದೆದಿದ್ದ ಮುಕ್ಕಾಲು ಜೀರ್ಣವಾಗಿದ್ದ ಹಳೆಯ ಶಾಲೊಂದನ್ನು ತೆಗೆದು ನನಗೆ ಹೊದ್ದಿಸಿ ಹೊರಟೇಬಿಟ್ಟರು ಗೌಡರು! "ಗೌಡ, ಗೌಡ" ಎಂದು ಶೇಷಣ್ಣನವರು ಕೂಗುತ್ತಿದ್ದುದು ಸಹ ಅವರ ಕಿವಿಯಮೇಲೆ ಬಿದ್ದಂತೆ ತೋರಲಿಲ್ಲ.

ನನ್ನ ಮನೆಯಲ್ಲಿ ಗೌಡರ ಕಛೇರಿಗಳು ಹಲವಾರು ಬಾರಿ ಆಗಿದ್ದವು. ಒಮ್ಮೆ ವಿಜಯನಗರದ ಲಕ್ಷ್ಮಣ ಶಾಸ್ತ್ರಿಗಳ ಸಂಗೀತ, ಗೌಡರ ಸಂಗೀತ ಎರಡೂ ಒಂದೇ ದಿನ ನಡೆದವು. ಸುಮಾರು ಎರಡು ಘಂಟೆಗಳ ಕಾಲ ಶಾಸ್ತ್ರಿಗಳು ಅಮೋಘವಾಗಿ ಹಾಡಿ ಸಭೆಗೆ ಕಳೆಕಟ್ಟಿಸಿದ್ದರು. ಅನಂತರ ಗೌಡರ ಕಛೇರಿ ಖರಹರಪ್ರಿಯ ರಾಗದಿಂದ ಪ್ರಾರಂಭವಾಯಿತು. ಎರಡೇ ನಿಮಿಷದಲ್ಲಿ ಹಿಂದಿನ ಕಛೇರಿಯ ವೈಖರಿಯೆಲ್ಲ ಮುಚ್ಚಿಹೋಯಿತು. ಗೌಡರದು ಅಂತಹ ದಿವ್ಯಗಾನ!

ಗೌಡರು ಹಾಡುವುದು ವಿರಳವೇ ವಿನಾ, ಮಾಡಿದಷ್ಟು ಕಛೇರಿಗಳ ವಿವರಗಳು ಸುವರ್ಣಾಕ್ಷರಗಳಲ್ಲಿ ಬರೆದಿಡಲ್ಪಡಬೇಕಾದುವು. ಮನಸ್ಸಿಗೆ ಬಂದ ಗಿರಾಕಿ ಗೌಡರು. ಮನಸ್ಸು ಬಂದರೆ ದಿನವೆಲ್ಲ ಹಾಡುತ್ತಿದ್ದರು. ಇಲ್ಲವಾದರೆ ಒಂದು ಲಕ್ಷ ವರಹ ಕೊಟ್ಟರೂ ಬಾಯಿ ತೆರೆಯುತ್ತಿರಲಿಲ್ಲ. ಹಾಡುವುದಕ್ಕೆ ಸಮಯ, ಸಂದರ್ಭ, ಸನ್ನಿವೇಶಗಳ ನಿಯಮವೇನೂ ಇರಲಿಲ್ಲ. ಒಂದು ದಿನ ಮಧ್ಯಾಹ್ನ ನಾನು ನನ್ನ ಪರಮಮಿತ್ರರಾಗಿದ್ದ ಗವಾಯಿ ಅಲ್ಲೀಜಾ಼ ಸಾಹೇಬರನ್ನು ಭೇಟಿಮಾಡುವ ನಿಮಿತ್ತ ಬೆಂಕಿ ನವಾಬರ ಬೀದಿಯಲ್ಲಿ ಹೋಗುತ್ತಿದ್ದೆ. ದಾರಿಯಲ್ಲಿದ್ದ ಬೆಳ್ಳಿಕೆಲಸದ ಅಂಗಡಿಯೊಂದರ ಮುಂಭಾಗದಲ್ಲಿ ಜನರ ಗುಂಪು ಸೇರಿತ್ತು. "ಮೊಸರು ಬೇಕೇ ಮೊಸರು" ಎಂಬ ಪಲ್ಲವಿಯನ್ನು ಗೌಡರು ಹಾಡುತ್ತಾ ಕುಳಿತಿದ್ದಾರೆ. ಸುಮಾರು ಅರ್ಧಘಂಟೆಯ ಕಾಲ ಆ ದಿವ್ಯ ಸಂಗೀತದ ಸವಿಯನ್ನನುಭವಿಸಿ ಕಾರ್ಯಗೌರವದಿಂದ ಬಲವಂತವಾಗಿ ಅಲ್ಲಿಂದ ಕಾಲನ್ನು ತೆಗೆದೆ. ಎಷ್ಟು ಹೊತ್ತು ಗೌಡರು ಭಾವಪರವಶರಾಗಿದ್ದರೋ ತಿಳಿಯದು. ಅನಂತರ ವಿಚಾರಿಸಿದ್ದರಲ್ಲಿ, ಗೌಡರು ಅಂಗಡಿಯಲ್ಲಿ ಕುಳಿತಿದ್ದರೆಂದೂ, ಮೊಸರು ಮಾರುವ ಹೆಂಗಸೊಬ್ಬಳು "ಮೊಸರು ಬೇಕೇ ಮೊಸರು" ಎಂದು ಕೂಗಿಕೊಂಡು ಹೋದಳೆಂದೂ, ಆ ಮಾತುಗಳನ್ನೇ ಪಲ್ಲವಿಯ ಸಾಹಿತ್ಯವನ್ನಾಗಿ ಮಾಡಿಕೊಂಡು ಹಾಡಲು ಗೌಡರು ಪ್ರಾರಂಭಿಸಿದರೆಂದೂ ಗೊತ್ತಾಯಿತು. ಇನ್ನೊಂದು ಸಂದರ್ಭದಲ್ಲಿ ಗೌಡರು, ಪಲ್ಲವಿಯನ್ನು ಹಾಡಲು "ತರಿಕೆರೆ ಕೆರೆಯೇರಿಮೇಲೆ ಮೂರು ಕರಿ ಕುರಿ ಮರಿ ಮೇಯ್ತಿತ್ತು" ಎಂಬ ಸಾಹಿತ್ಯವನ್ನು ಆರಿಸಿಕೊಂಡು ಅಮೋಘವಾಗಿ ಹಾಡಿ ಸಭಿಕರನ್ನು ಮೈಮರೆಸಿದರು.

ಗೌಡರು ನಮ್ಮ ಕಣ್ಮರೆಯಾಗಿ ಇಂದಿಗೆ ಸುಮಾರು ಇಪ್ಪತ್ತು ವರ್ಷಗಳಾಗಿರಬಹುದು.

# ಸದಾಶಿವರಾಯರು

"ಒಳಗೆ ದಯಮಾಡಿ ದಾಸರೇ, ಈ ಮಣೆಯ ಮೇಲೆ ಕೂಡಿ. ಇನ್ನ್ಯಾವುದಾದರೊಂದು ದೇವರನಾಮವನ್ನು ಹಾಡಿ, ಆಯಾಸವಾಗದೇ ಇದ್ದರೆ."

"ಅಗತ್ಯವಾಗಿ ಆಗಲಿ ರಾಯರೇ ; ಏನೋ, ರಾಗವಿಲ್ಲ, ತಾಳವಿಲ್ಲ, ಬಂದ ಅಲ್ಪಸ್ವಲ್ಪವನ್ನೇ ಹಾಡುತ್ತೇನೆ."

ದಾಸರು "ಹರಿನಿನ್ನೊಲುಮೆಯು ಆಗುವತನಕ" ಎಂಬ ದೇವರ ನಾಮವನ್ನು ಹಾಡಿದರು.

"ಬಹಳ ಸೊಗಸಾಗಿದೆ ದಾಸರೇ. ಏನೋ ಹುಡುಗರು, ತಿಳಿದವರಲ್ಲ. ತಾವು ಅವರ ಮೇಲೆ ಕೋಪಗೊಳ್ಳಬಾರದು. ಅವರು ಮಾಡಿದ ಅಪಚಾರ ಕ್ಕಾಗಿ ನಾನು ತಮ್ಮಲ್ಲಿ ಕ್ಷಮಾಪಣೆ ಕೇಳಿಕೊಳ್ಳುತ್ತೇನೆ.—(ಶಿಷ್ಯರ ಕಡೆ ನೋಡಿ) ಲಾ! ಹೀಗೆ ಬನ್ನಿ. ದಾಸರಿಗೆ ನಮಸ್ಕಾರ ಮಾಡಿ. 'ತಪ್ಪಾಯಿತು' ಅಂತ ಹೇಳಿ."

ಶಿಷ್ಯರಿಬ್ಬರೂ ದಾಸರಿಗೆ ಸಾಷ್ಟಾಂಗವೆರಗಿ ತಾವು ಮಾಡಿದ ತಪ್ಪನ್ನು ಮನ್ನಿಸಬೇಕೆಂದು ಬೇಡಿದರು. ಈ ವೇಳೆಗೆ ರಾಯರು ಒಳಗಿನಿಂದ ಹತ್ತು ಸೇರು ಅಕ್ಕಿ, ಐದು ರೂಪಾಯಿ, ಫಲತಾಂಬೂಲಗಳನ್ನು ತಟ್ಟೆಯಲ್ಲಿಟ್ಟು ತಂದು ದಾಸರಿಗೆ ಸಂಭಾವನೆ ಮಾಡಿದರು. ದಾಸರ ಸಂತೋಷಕ್ಕೆ ಎಣೆಯೇ ಇಲ್ಲ.

ದಾಸರು ಹೊರಟು ಹೋದ ಬಳಿಕ ರಾಯರು ಶಿಷ್ಯರಿಗೆ ಹೇಳಿದರು— "ಅಪ್ಪ! ಮಕ್ಕಳಿರಾ! ಸದ್ವಂಶಸಂಭೂತರಾಗಿ ಈ ರೀತಿ ಅಪಚಾರ ಮಾಡ ಬಾರದು. ಮನುಷ್ಯನ ಐದು ಬೆರಳುಗಳೂ ಒಂದೇ ಸಮನಾಗಿರುವುದಿಲ್ಲ. ಎಲ್ಲರೂ ನಿಮ್ಮಂತೆಯೇ ವಿದ್ಯಾವಂತರೂ ಐಶ್ವರ್ಯವಂತರೂ ಆಗಿರಲು ಸಾಧ್ಯವಿಲ್ಲ. ವಿದ್ಯೆಯಿದೆ, ಧನವಿದೆ ಎಂಬ ಸೊಕ್ಕಿನಿಂದ ಇತರರನ್ನು ಅಲ್ಲಗಳೆಯುವುದು ಮಹಾಪರಾಧ. ಇನ್ನು ಮುಂದೆ ಹೀಗೆ ಮಾಡಬೇಡಿ. ಯಾರ ಮನಸ್ಸನ್ನೂ ನೋಯಿಸಬೇಡಿ."

ಗುರುಗಳಿಗೆ ಸಾಷ್ಟಾಂಗ ಪ್ರಣಾಮ ಮಾಡಿ ಶಿಷ್ಯರಿಬ್ಬರೂ ಕ್ಷಮಾಪಣೆ ಬೇಡಿದರು.

ಅಂದು ಬೆಳಿಗ್ಗೆ, ಸುಬ್ಬಣ್ಣ, ಶೇಷಣ್ಣನವರಿಗೆ ಪಾಠಹೇಳುತ್ತಿದ್ದ ಸಮಯದಲ್ಲಿ ಸದಾಶಿವರಾಯರ ಮನೆಯಲ್ಲಿ ನಡೆದ ಈ ಪ್ರಸಂಗ ರಾಯರ ಕೋಮಲ ಹೃದಯವನ್ನು ಬಿಚ್ಚಿತೋರುತ್ತದೆ. ಸದಾಶಿವರಾಯರು ಮಹಾ ವಿನಯ ಸಂಪನ್ನರು, ಸರಳರು, ನಿಗರ್ವಿಗಳು, ಕರುಣಾಳುಗಳು, ಉದಾರಿಗಳು. ಎಂದೂ ಒಬ್ಬರ ಮನನೋಯುವ ನುಡಿಯನ್ನಾಡಿದವರಲ್ಲ, ನಡೆಯನ್ನನುಸರಿಸಿದವರಲ್ಲ.

ರಾಯರು "ಮೈಸೂರು ಸದಾಶಿವರಾವ್" ಎಂದು ಪ್ರಖ್ಯಾತಿಗೊಂಡಿದ್ದರೂ ಮೈಸೂರು ಅವರ ಜನ್ಮಸ್ಥಳವಲ್ಲ. ಉತ್ತರ ಆರ್ಕಾಟ್‌ಜಿಲ್ಲೆಯ ಚಿತ್ತೂರಿನಲ್ಲಿ ಸದಾಶಿವರಾಯರು ಜನ್ಮತಾಳಿದರು. ಮೈಸೂರಿನ ಸುಪ್ರಸಿದ್ಧ ವರ್ತಕರಾಗಿದ್ದ ದೊಡ್ಡಮುನಿಸ್ವಾಮಿಶೆಟ್ಟಿ, ಚಿಕ್ಕಮುನಿಸ್ವಾಮಿಶೆಟ್ಟಿ ಎಂಬ ಸಹೋದರರು ಒಮ್ಮೆ ಚಿತ್ತೂರಿಗೆ ತೆರಳಿದ್ದರು. ಸದಾಶಿವರಾಯರ ಗಾನ ಮಾಧುರ್ಯ, ಪಾಂಡಿತ್ಯ ಪ್ರತಿಭೆಗೆ ಮನಸೋತು ರಾಯರನ್ನು ಮೈಸೂರಿಗೆ ಕರೆದುಕೊಂಡು ಬಂದರು. ಅಲ್ಲಿಂದಾಚೆಗೆ ಸದಾಶಿವರಾಯರು ಮೈಸೂರಿನಲ್ಲೇ ನೆಲಸಿದರು. ಮೈಸೂರಿಗೆ ಬಂದಾಗ ಅವರಿಗೆ ಸುಮಾರು ಮೂವತ್ತು ವಯಸ್ಸು.

ಸದಾಶಿವರಾಯರು ಶ್ರೀಮಂತ ಮನೆತನದವರು. ಅವರ ಮಾತಾ ಪಿತೃಗಳ ವಿಷಯವಾಗಿ ಆಗಲೀ ಅಥವಾ ಬಾಲ್ಯಜೀವನದ ವಿಷಯವಾಗಿ ಆಗಲೀ ಹೆಚ್ಚಿನ ವಿವರಗಳು ದೊರೆತಿಲ್ಲದಿರುವುದು ವಿಷಾದಕರ. ಇವರು ಸ್ಮಾರ್ತ ದೇಶಸ್ಥ ಮಹಾರಾಷ್ಟ್ರ ಪಂಗಡದವರು. ಅವರಿಗೆ ಒಬ್ಬ ಸಹೋದರ ಮತ್ತು ಒಬ್ಬ ಸಹೋದರಿಯೂ ಇದ್ದರು.

ಶ್ರೀ ತ್ಯಾಗರಾಜಸ್ವಾಮಿಗಳ ಶಿಷ್ಯರಾದ ವಾಲಾಜಪೇಟ್ ವೆಂಕಟರಮಣ ಭಾಗವತರು ಸದಾಶಿವರಾಯರ ಗುರುಗಳು. ಕಂಚಿಯಿಂದ ಬರುವಾಗ್ಗೆ ತ್ಯಾಗರಾಜರು ವಾಲಾಜಪೇಟೆಗೆ ಆಗಮಿಸಿದರಂತೆ. ಶಿಷ್ಯರಾದ ವೆಂಕಟರಾಮ ಭಾಗವತರು ಗುರುಗಳ ಗೌರವಾರ್ಥವಾಗಿ "ಪಟ್ಟಣ ಪ್ರವೇಶ"ದ ಸಿದ್ಧತೆಗಳನ್ನು ಮಾಡುವಾಗ್ಗೆ ಸದಾಶಿವರಾಯರು ಅವರ ಸಂಗಡಲೇ ಇದ್ದರೆಂದೂ, ಶ್ರೀ ತ್ಯಾಗರಾಜರ ಸಂದರ್ಶನದ ಸಂಕೇತವಾಗಿ "ತ್ಯಾಗರಾಜಸ್ವಾಮಿ ವೆಡಲಿನ" ಎಂಬ ಕೃತಿಯನ್ನು ತೋಡಿರಾಗದಲ್ಲಿ ರಚಿಸಿದರೆಂದೂ ಕೆಲವು ಗ್ರಂಥಾಧಾರಗಳಿಂದ ತಿಳಿಯುಬರುತ್ತದೆ.

ರಾಯರಿಗೆ ಶಿಷ್ಯರು ಬಹುಮಂದಿ ಇದ್ದರೂ, ಅವರಲ್ಲಿ ಮುಖ್ಯರಾದವರು ಅಂದರೆ ನನ್ನ ವೀಣೆ ಶೇಷಣ್ಣ ಮತ್ತು ಸುಬ್ಬಣ್ಣನವರು. ಶಿಷ್ಯರ ಮನೆಗೆ ಪಾಠಹೇಳಲು ಗುರುಗಳು ಹೋಗುವ ಸಂಪ್ರದಾಯ ಆಗ್ಗೆ ಇನ್ನೂ ಬಳಕೆಗೆ ಬಂದಿರಲಿಲ್ಲ. ಗುರುಗಳ ಮನೆಗೆ ಶಿಷ್ಯರೇ ಹೋಗಿ ಶಿಕ್ಷಣ ಪಡೆಯಬೇಕಾಗಿತ್ತು. ಸದಾಶಿವರಾಯರು ಸುಬ್ಬಣ್ಣನವರ ತಂದೆ ಶೇಷಣ್ಣನವರೊಡನೆ ಮಾತುಕತೆಯಾಡಲು ಬರುತ್ತಿದ್ದರು. ಆಗಲೇ ನನಗೆ ಸದಾಶಿವರಾಯರನ್ನು ದರ್ಶನಮಾಡುವ ಸುಯೋಗ ಲಭಿಸಿದ್ದು. ಆದರೆ ನನಗಿನ್ನೂ ಚಿಕ್ಕವಯಸ್ಸು ಆಗ್ಗೆ. ಅಲ್ಲದೆ, ಸಂಗೀತರಂಗಕ್ಕೆ ಇನ್ನೂ ಅಷ್ಟಾಗಿ ಪ್ರವೇಶಮಾಡಿರಲಿಲ್ಲ. ಹೀಗಾಗಿ ಸದಾಶಿವರಾಯರ ಪೂರ್ಣಪರಿಚಯ ಪಡೆಯುವ ಅವಕಾಶವಾಗಲೀ ಅಭಿಲಾಷೆಯಾಗಲೀ ಅಷ್ಟಾಗಿರಲಿಲ್ಲ. ಆದಾಗ್ಯೂ ಅವರ ಭವ್ಯ ಮೂರ್ತಿಯ ನೆನಪು ಇಂದಿಗೂ ನನ್ನ ಮನಸ್ಸಿನ ತೆರೆಯಮೇಲೆ ಮಸಕಾಗದೇ ಉಳಿದಿದೆ. ಸದಾಶಿವರಾಯರು ಸಾಮಾನ್ಯ ಎತ್ತರದ ಆಳು, ದೃಢಕಾಯರು, ವಿಶಾಲವಾದ ಹಣೆ, ಕಾಂತಿಯುತವಾದ ಕಣ್ಣುಗಳು, ಗಿರಲು ಮೀಸೆ. ಸಿಂಹದ ಠೀವಿ ಎದ್ದು ಕಾಣುತ್ತಿತ್ತು ಮುಖದಲ್ಲಿ. ಉಡುಗೆಯಲ್ಲಿ ಆಡಂಬರವಿರಲಿಲ್ಲ. ಆಡುತ್ತಿದ್ದ ಭಾಷೆ ಮರಾಠಿ. ರಾಜಗಾಂಭೀರ್ಯದ ನಡೆ ನುಡಿ, ಮಧುರವಾದ ಶಾರೀರ ಸಂಪತ್ತು. ಅವರನ್ನು ನೋಡಿದ ಯಾರಿಗಾದರೂ ಒಡನೆಯೇ ಪೂಜ್ಯಭಾವನೆ ಜನಿಸುತ್ತಿತ್ತು.

ಸದಾಶಿವರಾಯರು ಸದಾಚಾರ ಸಂಪನ್ನರು, ನೃಸಿಂಹೋಪಾಸಕರು. ಅವರ ಆಸ್ತಿಪಾಸ್ತಿಗಳೆಲ್ಲ ದೇವತಾರಾಧನೆ, ಬ್ರಾಹ್ಮಣ ಭೋಜನಗಳಿಗಾಗಿಯೇ ವಿನಿಯೋಗವಾಯಿತು. ಹೊತ್ತಿಗೆ ಐವತ್ತು ಎಲೆಯಾದರೂ ಬೀಳದೆ ಇದ್ದ ದಿನವೇ ಇಲ್ಲ. ತಮ್ಮ ಪ್ರಾತಃಕಾಲದ ಆಹ್ನಿಕಗಳನ್ನು ಮುಗಿಸಿಕೊಂಡು, ಮಧ್ಯಾಹ್ನದ ಹೊತ್ತಿಗೆ ಸೊಂಟಕಟ್ಟಿ ಬೀದಿಯ ಬಾಗಿಲುಬಳಿ ರಾಯರು ನಿಲ್ಲುತ್ತಿದ್ದರು. ಆ ಮಾರ್ಗವಾಗಿ ಹೋದ ಬ್ರಾಹ್ಮಣರನ್ನೆಲ್ಲ ಕೈಮುಗಿದು ಪ್ರಾರ್ಥಿಸಿಕೊಂಡು ಭೋಜನಕ್ಕೆ ಆಹ್ವಾನಿಸುತ್ತಿದ್ದರು. ಮನೆಯತುಂಬ ಅಥಿತಿಗಳು ಸೇರದ ಹೊರತು ರಾಯರಿಗೆ ತೃಪ್ತಿಯೇ ಇಲ್ಲ. ಬಂದವರಿಗೆಲ್ಲ ರಸಭೋಜನ, ಭೂರಿದಕ್ಷಿಣೆ. ತುಪ್ಪ ಬಡಿಸಲು ಸ್ವಯಂ ರಾಯರೇ ನಿಲ್ಲುತ್ತಿದ್ದರು. ಗೋಮುಖದಿಂದ ತುಪ್ಪವನ್ನು ನೀರಿನಂತೆ ಸುರಿದು ಅಥಿತಿಗಳನ್ನು ತಣಿಸುತ್ತಿದ್ದರಂತೆ.

ಮಹಾತ್ಯಾಗಿಗಳು ಸದಾಶಿವರಾಯರು. ದೇಹಿ ಅಂದವರಿಗೆ ನಾಸ್ತಿ ಅಂದದ್ದೇ ಇಲ್ಲ. ಒಮ್ಮೆ ಒಂದು ಸ್ವಾರಸ್ಯ ನಡೆಯಿತು. ಆರುವೇಟ್ಟಿ ರಾಮಸ್ವಾಮಿಶೆಟ್ಟಿ ಎಂಬಾತ ಒಬ್ಬ ದೊಡ್ಡ ಜವಳಿಯ ವ್ಯಾಪಾರಿ. ರಾಯರಲ್ಲಿ ಅತ್ಯಂತ ಗೌರವ, ಭಕ್ತಿ, ಪ್ರೀತಿ, ನಂಬಿಕೆ ಆತನಿಗೆ. ಒಂದುಬಾರಿ ತನ್ನ ಕಾರ್ಯಗೌರವದ ನಿಮಿತ್ತ ಆತ ಪರಸ್ಥಳಕ್ಕೆ ಹೋಗಬೇಕಾಗಿ ಬಂತು. ತಾನು ಬರುವವರೆಗೆ ಅಂಗಡಿಯ ವ್ಯವಹಾರಗಳನ್ನು ನೋಡಿಕೊಳ್ಳಬೇಕೆಂದು ರಾಯರನ್ನು ಪ್ರಾರ್ಥಿಸಿದ. ರಾಯರು ಸಮ್ಮತಿಸಿದರು. ರಾಯರ ಹೃದಯ ವೈಶಾಲ್ಯದ ಪರಿಚಯವಿದ್ದ ಜನರಿಗೆ ಇದೊಂದು ಸದವಕಾಶವಾಯಿತು. ಅವರು, ಮದುವೆ, ಮುಂಜಿ ಮೊದಲಾದ ಹಲವಾರು ನೆಪಗಳನ್ನು ಹೂಡಿಕೊಂಡು ರಾಯರಲ್ಲಿ ಸಹಾಯ ಬೇಡಿದರು. ಅಂಗಡಿಯಲ್ಲಿ ಇದ್ದಬದ್ದ ಜವಳಿ ಎಲ್ಲವನ್ನೂ ರಾಯರು ಹಿಂದುಮುಂದು ನೋಡದೆ ಉದಾರವಾಗಿ ದಾನ ಮಾಡಿಬಿಟ್ಟರು. ರಾಮಸ್ವಾಮಿಶೆಟ್ಟಿ ಹಿಂತಿರುಗಿ ಬರುವ ವೇಳೆಗೆ ಅಂಗಡಿಯೆಲ್ಲ ಬರಿದಾಗಿತ್ತು. ದಿಗಿಲುಬಿದ್ದ. ರಾಯರು ಸಾವಧಾನವಾಗಿ ಹೇಳತೊಡಗಿದರಂತೆ :–"ಅಯ್ಯಾ ಶೆಟ್ಟಿ ! ಇಲ್ಲಿನೋಡು, ನಿನ್ನ ಅಂಗಡಿಯ ಜವಳಿಯನ್ನೆಲ್ಲ ಹರಿಪ್ರೀತಿಯಾಗಲೆಂದು ಬಡಬಗ್ಗರಿಗೆ ದಾನಮಾಡಿದೆ. ಪುಣ್ಯವೆಲ್ಲ ನಿನಗೇ ಸಲ್ಲತಕ್ಕದ್ದು. ಇದು ನಿನಗೆ ಒಪ್ಪಿಗೆಯಾದರೆ ಸರಿ. ಇಲ್ಲವಾದಲ್ಲಿ ನಿಸ್ಸಂಕೋಚವಾಗಿ, ನಿರ್ಭಯವಾಗಿ ಹೇಳಿಬಿಡು. ಜವಳಿಯ ಬೆಲೆ ಎಲ್ಲವನ್ನೂ ನಾನು ಪಾವತಿ ಮಾಡುತ್ತೇನೆ. ಅದರ ಪುಣ್ಯ ನನಗೆ ಉಳಿಯಲಿ" ಎಂದು. ಮರುಮಾತನಾಡಲಿಲ್ಲ ಶೆಟ್ಟಿ. "ಕೃಷ್ಣಾರ್ಪಣ" ಎಂದ. ರಾಯರ ಆಶೀರ್ವಾದದ ಬಲದಿಂದಲೋ ಎಂಬಂತೆ, ಕೆಲವೇ ತಿಂಗಳುಗಳಲ್ಲಿ ಶೆಟ್ಟಿಯ ವ್ಯಾಪಾರ ಒಂದಕ್ಕೆ ಹತ್ತರಷ್ಟು ವೃದ್ಧಿಗೊಂಡಿತಂತೆ!

ರಾಯರ ಈ ದಾನಧರ್ಮಗಳ ಫಲವಾಗಿ ಅವರ ಆಸ್ತಿಯೆಲ್ಲ ಬಹು ಬೇಗ ಕರಗಿತು. ಜೀವನ ಯಾತ್ರೆಯನ್ನು ಸಾಗಿಸುವುದು ಕೂಡ ಪ್ರಯಾಸಪ್ರದವಾಯಿತು. ಈ ದಾರುಣ ಸನ್ನಿವೇಶದಲ್ಲೇ ಅವರು ತಿಂಗಳಿಗೆ ಮೂವತ್ತು ರೂಪಾಯಿ ಸಂಬಳದ ಮೇಲೆ ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದ ವಿದ್ವಾಂಸ ಶ್ರೇಣಿಗೆ ಸೇರಿದ್ದು. ಪ್ರಭುಗಳಿಗೆ ರಾಯರನ್ನು ಕಂಡರೆ ಬಹು ಪ್ರೀತಿ, ಗೌರವ. ಪ್ರಭುಗಳು

ತೋರಿದ ಗೌರವ ಪುರಸ್ಕಾರಗಳ ನೆನಪಾಗಿ ರಾಯರು ಒಂದು ತಿಲ್ಲಾನವನ್ನು ರಚಿಸಿ ತಮ್ಮ ರಾಜಭಕ್ತಿಯನ್ನು ವ್ಯಕ್ತಪಡಿಸಿದ್ದಾರೆ.

ಸುಬ್ಬಣ್ಣನವರು ತಮ್ಮ ಸಣ್ಣದಾದ ಗಂಧರ್ವ ಶಾರೀರದಲ್ಲಿ ಆ ತಿಲ್ಲಾನವನ್ನು ಸ್ವಲ್ಪ ಸ್ವಲ್ಪ ಹಾಡುತ್ತಿದ್ದುದು ಈಗಲೂ ನನ್ನ ಕಿವಿಯಲ್ಲಿ ಸ್ಥಿರವಾಗಿ ನಿಂತಿದೆ. ಸೊಗಸಾದ ರಚನೆ. ಅದನ್ನು ಪಾಠಮಾಡಿ ಬರೆದಿಡಬೇಕೆಂಬ ನನ್ನ ಬಯಕೆ ಹಾಗೆಯೇ ಉಳಿಯಬೇಕಾಯಿತು, ಸುಬ್ಬಣ್ಣನವರು ಇಂದು ನಾಳೆ ಎಂದು ಅಂತಲೇ ಬಂದದ್ದರಿಂದ.

ಸದಾಶಿವರಾಯರು ಎಷ್ಟು ನಿಸ್ಪೃಹರಾಗಿದ್ದರೆಂಬುದನ್ನು ತೋರುವುದಕ್ಕೂ ಅವರಿಗೆ ಸಂಗೀತ ಪ್ರಪಂಚದಲ್ಲಿ ಎಂತಹ ಹಿರಿಮೆಯ ಸ್ಥಾನವಿತ್ತೆಂಬುದಕ್ಕೂ ಒಂದು ನಿದರ್ಶನವಿದೆ. ಮದ್ರಾಸಿನಲ್ಲಿ ಒಂದು ಬಾರಿ ಇಬ್ಬರು ಪ್ರಖ್ಯಾತ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿ, ಮನಸ್ತಾಪ ಉದ್ಭವಿಸಿದಾಗ, ವ್ಯಾಜ್ಯದ ತೀರ್ಪಿಗಾಗಿ ಸದಾಶಿವರಾಯರಿಗೆ ಆಹ್ವಾನ ಬಂದಿತ್ತಂತೆ. ಇದೇ ಸಂದರ್ಭದಲ್ಲಿ ರಾಯರು ದಕ್ಷಿಣ ಭಾರತದ ಯಾತ್ರಾಸ್ಥಳಗಳಲ್ಲೆಲ್ಲ ಸಂಚರಿಸಿಕೊಂಡು ಬಂದರು. ತಾವು ದರ್ಶನ ಮಾಡಿದ ಆರಾಧನಾ ಮೂರ್ತಿಗಳನ್ನು ಕುರಿತು ಭಕ್ತಿಭಾವ ಭರಿತವಾದ ಕೃತಿರತ್ನಗಳನ್ನು ರಚಿಸಿದರು. ಶ್ರೀರಂಗದ ರಂಗನಾಥಸ್ವಾಮಿಯ ದೇವಾಲಯಕ್ಕೆ ಹೋಗಿದ್ದಾಗ್ಗೆ, ಕಮಾಚಿನ 'ಪರಮಾದ್ಭುತ ಮೈನ' ಎಂಬ ಕೀರ್ತನೆಯನ್ನೂ, ಮದ್ರಾಸಿನ ಟ್ರಿಪ್ಲಿಕೇನಿನಲ್ಲಿರುವ ಶ್ರೀ ಪಾರ್ಥಸಾರಥಿ ದೇವಾಲಯಕ್ಕೆ ಹೋಗಿದ್ದ ಸಂದರ್ಭದಲ್ಲಿ "ಶ್ರೀ ಪಾರ್ಥಸಾರಥೇ ಕರುಣಾಪಯೋನಿಧೆ" ಎಂಬ ಭೈರವಿ ರಾಗದ ಕೀರ್ತನೆಯನ್ನೂ ರಚಿಸಿ ಹಾಡಿದರು. ಕಲ್ಯಾಣಿ ರಾಗದ "ಕನುಗೊನಿ" ಎಂಬ ಕೀರ್ತನೆಯನ್ನು ಕಂಚಿಗೆ ಹೋಗಿದ್ದಾಗ ರಚಿಸಿದರಂತೆ. ಈ ತೀರ್ಥಯಾತ್ರೆಯನ್ನು ಕೈಗೊಂಡಿದ್ದ ಸಮಯದಲ್ಲೇ ಸದಾಶಿವರಾಯರು ತಿರುವೈಯ್ಯಾರಿಗೆ ಬಂದು ನನ್ನ ಗುರುಗಳನ್ನು ಸಂದರ್ಶಿಸಿದ್ದು. ನಮ್ಮ ಗುರುಗಳು ಬೇಗಡೆ ರಾಗವನ್ನು ವಿಸ್ತಾರವಾಗಿ ಹಾಡಿ, ಮಧ್ಯಮಕಾಲವನ್ನು ಹಾಡಿ "ಲೋಕಾವನ ಚತುರ ಮಾಂ ಪಾಹಿ" ಎಂಬ ಪಲ್ಲವಿಯನ್ನು ವಿನ್ಯಾಸಮಾಡಿದರು. ಸದಾಶಿವರಾಯರು ಆನಂದಪರವಶರಾಗಿ "ಬೇಗಡೆರಾಗಕ್ಕಾಗಿಯೇ ನೀವು ಅವತಾರಮಾಡಿದ್ದೀರೋ, ನಿಮಗಾಗಿ ಬೇಗಡೆರಾಗ ರೂಪುಗೊಂಡಿದೆಯೋ."

ಎಂದು ಹೇಳಿ ನಮ್ಮ ಗುರುಗಳನ್ನು "ಬೇಗಡೆ ಸುಬ್ರಹ್ಮಣ್ಯಯ್ಯರ್" ಎಂದು ಕರೆದರು.

ಸುಬ್ಬಣ್ಣನವರು ಹೇಳುತ್ತಿದ್ದ ರಾಯರ ಜೀವನದ ಕೆಲವು ಅದ್ಭುತ ಘಟನೆಗಳನ್ನು ಕೇಳಿದರೆ ಯಾರಿಗಾದರೂ ಮೈ ರೋಮಾಂಚಿತವಾಗದೇ ಇರದು. ರಾಮೋತ್ಸವದ ಸಂದರ್ಭದಲ್ಲಿ ಒಂದೆಡೆ ಸದಾಶಿವರಾಯರ ಸಂಗೀತ ನಡೆಯುತ್ತಿತ್ತು. ಜನ ಕಿಕ್ಕಿರಿದು ಸೇರಿದೆ. ಕಛೇರಿ ಅಮೋಘ ವಾಗಿ ಜರುಗುತ್ತಿದೆ. ಹೀಗಿರುವಾಗ್ಗೆ ಸಭಿಕರ ಪೈಕಿ ಒಬ್ಬಾತ ಎದ್ದು ರಾಯರಿಗೆ ಕೈಮುಗಿದು ಅವರು ರಚಿಸಿದ ಕಮಲಾಮನೋಹರಿರಾಗದ 'ನರಸಿಂಹುಡು' ಎಂಬ ಕೀರ್ತನೆಯನ್ನು ಹಾಡಬೇಕೆಂದು ಪ್ರಾರ್ಥಿಸಿದ. ಈ ಕೀರ್ತನೆಯನ್ನು ಮಾತ್ರ ಸದಾಶಿವರಾಯರು ಹಾಡಲು ಸಿದ್ಧರಾಗಿರಲಿಲ್ಲ. ಸ್ನಾನ, ಆಹ್ನಿಕಗಳನ್ನು ಪೂರೈಸಿ, ಉಪವಾಸದಿಂದಿದ್ದು ತಮ್ಮ ಪೂಜಾ ಮಂದಿರದಲ್ಲಿ ಮಾತ್ರ ನೃಸಿಹ್ಮದೇವರನ್ನು ಕುರಿತ ಕೃತಿಗಳನ್ನು ಹಾಡು ತ್ತಿದ್ದರಂತೆ. ಈ ನಿಯಮವನ್ನು ಮೀರಲು ರಾಯರು ಹಿಂಜರಿದರು. ಆದರೆ ಸಭೆಯ ಬಲಾತ್ಕಾರ ಹೆಚ್ಚಾಯಿತು. ಯತ್ನವಿಲ್ಲದೇ ರಾಯರು ಜನಸೇವೆಯೇ ಜನಾರ್ಧನನ ಸೇವೆ ಅಂತ ಅಂದುಕೊಂಡರು. ಹಾಡಲುಪ ಕ್ರಮಿಸಿದರು. ಪಲ್ಲವಿ, ಅನುಪಲ್ಲವಿಯನ್ನು ಹಾಡಿ "ಸನಕಾದುಲು ವಿಸ್ಮಯಿಂಪ..." ಎಂಬ ಚರಣ ಸಾಹಿತ್ಯವನ್ನು ಹಾಡುತ್ತಿದ್ದ ಹಾಗೆಯೇ ಎದುರಿನಲ್ಲಿ ಗೋಡೆಗೆ ನೇತುಹಾಕಿದ್ದ ನೃಸಿಹ್ಮಸ್ವಾಮಿಯ ಪಠದ ಗಾಜು ಫಳಾರನೆ ಸೀಳಿತಂತೆ! ರಾಯರಲ್ಲಿ ತಾವು ಬಗೆದ ಅಪರಾಧವನ್ನು ತಿಳಿದು ಸಭೆ ಪರಿತಪಿಸಿತಂತೆ! ರಾಯರು ಕಣ್ಣಿನಲ್ಲಿ ನೀರುತಂದುಕೊಂಡು, ದೇವ ರಿಗೆ ನಮಸ್ಕರಿಸಿ, ಭಯಭಕ್ತಿಯಿಂದ ಕೀರ್ತನೆಯನ್ನು ಹಾಡಿ ಪೂರೈಸಿದ ರಂತೆ.

ರಾಯರು ಇಹಲೋಕ ವ್ಯಾಪಾರವನ್ನು ಮುಗಿಸಿ ಪರಂಧಾಮವ ನ್ನೈದುವ ಸನ್ನಿವೇಶ ಬಲು ವಿಸ್ಮಯಕರವಾಗಿದೆ. ತಮ್ಮ ಕೊನೆಯ ಉಸಿ ರಿನವರೆಗೂ ರಾಯರ ಮುಖದ ಮೇಲೆ ಶಾಂತಭಾವದ ಮುದ್ರೆಯೊತ್ತಿತ್ತು. ಹಸನ್ಮುಖಿಗಳಾಗಿದ್ದರು. ಭಗವಧ್ಯಾನಾಸಕ್ತರಾಗಿದ್ದರು. "ಕಮಲಾ ಕಾಂತ ಸುಸ್ವಾಂತ" ಎಂಬ ಮಾಯಾಮಾಳವಗೌಳರಾಗದ ಕೃತಿ ಅವರು ಇಹಲೋಕದ ಬೆಳಕಾಗಿ ಹಚ್ಚಿಟ್ಟುಹೋದ ಕಟ್ಟಕಡೆಯ ಹಣತೆ! ರಾಯರ ಭೌತಿಕ ದೇಹದ ತಂತಿಯು ಕಡಿದುಬಿದ್ದ ಘಳಿಗೆಯಲ್ಲೇ ಮನೆಯಲ್ಲಿ

ಮೂಲೆ ಮೂಲೆಯಲ್ಲಿದ್ದ ವೀಣೆ ತಂಬೂರಿಗಳ ತಂತಿಗಳು ತಮ್ಮಷ್ಟಕ್ಕೆ ತಾವೇ ಮೊಳಗಿ ಕಡಿದುಬಿದ್ದವಂತೆ! ಗಂಧರ್ವಾಂಶ ಸಂಭೂತರಾದ ಇಂತಹ ಮಹಾವಾಗ್ಗೇಯಕಾರರನ್ನು ಬಿಟ್ಟು ಹಿಂದುಳಿಯಲು ನಾದ ದೇವತೆಗೆ ತಾನೇ ಹೇಗೆ ಮನಸ್ಸು ಬರಬೇಕು!

ವೀಣೆ ಸುಬ್ಬಣ್ಣನವರು ಸದಾಶಿವರಾಯರ ರಚನೆಗಳನ್ನೆಲ್ಲ ಅಭ್ಯಾಸ ಮಾಡಿದ್ದರು. ರಾಯರು ರಚಿಸಿದ್ದ ತಾನವರ್ಣಗಳು, ಪದವರ್ಣಗಳು, ಕೃತಿ, ತಿಲ್ಲಾನ, ಸ್ವರಜತಿಗಳನ್ನು ಆಗಾಗ್ಗೆ ಕೊಂಚ ಕೊಂಚ ಹಾಡಿ ಕೇಳಿ ಸುತ್ತಿದ್ದರು. ರಚನಶೈಲಿ ನಾರೀಕೇಳಪಾಕದಂತೆ ಕಠಿಣ. ಅದರ ಸ್ವರ ಕಲ್ಪನೆ, ಸಾಹಿತ್ಯ ಸಂಯೋಜನೆಯನ್ನು ಸಿದ್ಧಿಮಾಡಿಕೊಳ್ಳುವುದು ಎಂದರೆ ಎಲ್ಲರ ಪಾಲಿಗೂ ಬಂದುದಲ್ಲ. ಸಂಗೀತದಲ್ಲಿ ಪಾಂಡಿತ್ಯವನ್ನು ಸಂಪಾದಿಸಿಕೊಂಡಿರುವ ವಿದ್ವಾಂಸರುಗಳು ಮಾತ್ರ ಆ ಕೀರ್ತನೆಗಳನ್ನು ಜೀರ್ಣಿಸಿಕೊಳ್ಳಲು ಸಾಧ್ಯ. ಸದಾಶಿವರಾಯರ ರಚನೆಗಳು ಹೆಚ್ಚು ಬಳಕೆಯಲ್ಲಿಲ್ಲದೇ ಹೋಗಿರುವುದಕ್ಕೆ ಈ ಕ್ಲಿಷ್ಟಶೈಲಿಯು ಒಂದು ಕಾರಣ. ಸದಾಶಿವರಾಯರ ಕೃತಿಗಳು ಎಂಬ ಶಿರೋನಾಮೆಯಲ್ಲಿ ಅವರ ರಚನೆ ಗಳೆಲ್ಲವನ್ನೂ ಬರೆದಿಟ್ಟುಕೊಂಡಿದ್ದ ಪುಸ್ತಕ ಒಂದನ್ನು ವೀಣೆ ಸುಬ್ಬಣ್ಣ ನವರು ನನಗೆ ತೋರಿಸುತ್ತಿದ್ದರು. ಆ ನಿಧಿ ಭಂಡಾರ ಕೊನೆಗೂ ಬೆಳಕಿಗೆ ಬಾರದೇ ಹೋದದ್ದು ನಮ್ಮಗಳ ದೌರ್ಭಾಗ್ಯ!



# ಪದ್ಮನಾಭಯ್ಯನವರು

ಚಿಕ್ಕನಾಯಕನ ಹಳ್ಳಿ ತಾಲ್ಲೋಕು ಶ್ರೀರಾಮಪುರಕ್ಕೆ ಬೂದಿ ಹಾಳು ಅಂತ ಇನ್ನೊಂದು ಹೆಸರು. ಬೂದಿ ಹಾಳಿನ ವೆಂಕಟನಾರಾಯಣ ಶಾಸ್ತ್ರಿಗಳಿಗೆ ಮೂರುಜನ ಮಕ್ಕಳು. ಪದ್ಮನಾಭಯ್ಯನವರೇ ಮಧ್ಯದವರು. ಲೋಕವಾಡಿಕೆಯಂತೆ ತಂದೆಯ ಪ್ರೀತಿ ಹಿರಿಯ ಮಗನ ಕಡೆ ತಿರುಗಿತು ; ತಾಯಿಯ ಮಮತೆ ಕಿರಿಯ ಮಗನ ಪಾಲಾಯಿತು. ಪದ್ಮನಾಭಯ್ಯನವರಿಗೆ ಬಾಲ್ಯದಿಂದಲೇ ಜೀವನದಲ್ಲಿ ಜುಗುಪ್ಸೆ ತೋರಲು ಮೊದಲಾಯಿತು. ಮನೆಯಲ್ಲಿ ಹಿತವಿಲ್ಲ; ಬೇರೆಲ್ಲಿ ಹೋಗಲೂ ಮಾರ್ಗವಿಲ್ಲ. ವೈದಿಕವೃತ್ತಿಗೆ ಬೇಕಾದಷ್ಟುಮಾತ್ರ ಸಂಸ್ಕೃತ ಪಾಠ ಹೇಳಿಸಿ ತಂದೆ ಕೈ ಬಿಟ್ಟರು. ಆದರೆ ವಿದ್ಯಾರ್ಜನೆ ಮುಂದುವರಿಸಬೇಕು, ಕೀರ್ತಿ ಗೌರವ ಸಂಪಾದಿಸಬೇಕು ಎಂಬ ಹಂಬಲ ಹುಡುಗನಿಗೆ. ತನ್ನ ಮನೋಭಿಲಾಷೆಯನ್ನು ತಮ್ಮ ಮನೆಗೆ ಬರುತ್ತಿದ್ದ ವೃದ್ಧ ಅವಧಾನಿಗಳಲ್ಲಿ ನಿವೇದಿಸಿಕೊಂಡ. ಅವಧಾನಿಗಳು ಅಂದರೆ ಮನೆಯ ಹಿರಿಯ ಯಜಮಾನರಂತೆ! ಅವರ ಮಾತನ್ನು ಯಾರೂ ಎಳ್ಳಷ್ಟೂ ಮೀರುವ ಸಾಹಸ ಮಾಡುತ್ತಿರಲಿಲ್ಲ. ಹುಡುಗನನ್ನು ಹೊಸದುರ್ಗದ ವೆಂಕಟೇಶಶಾಸ್ತ್ರಿಗಳ ಬಳಿಗೆ ಕಳುಹಿಸಿ ಸಂಗೀತಪಾಠ ಹೇಳಿಸುವಂತೆ ಅವಧಾನಿಗಳು ವೆಂಕಟನಾರಾಯಣಶಾಸ್ತ್ರಿಗಳಿಗೆ ಹೇಳಿದರು. ವೈದಿಕ ವೃತ್ತಿಯನ್ನು ಬಿಟ್ಟು ಮಗನಿಗೆ ಸಂಗೀತಾಭ್ಯಾಸ ಮಾಡಿಸುವುದು ವೆಂಕಟನಾರಾಯಣ ಶಾಸ್ತ್ರಿಗಳಿಗೆ ಇಷ್ಟವಿರಲಿಲ್ಲ. ಆದರೆ ಅವಧಾನಿಗಳ ಮಾತು ಮೀರುವಂತಿರಲಿಲ್ಲ. ಯತ್ನವಿಲ್ಲದೆಯೇ ಒಪ್ಪಿ ಮಗನನ್ನು ಹೊಸದುರ್ಗಕ್ಕೆ ಕಳುಹಿಸಿಕೊಟ್ಟರು. ನಾಲ್ಕಾರು ವರ್ಷ ವೀಣೆ ಮತ್ತು ಹಾಡುಗಾರಿಕೆಯ ಪಾಠ ನಡೆಯಿತು. ಅನಂತರ ವೆಂಕಟೇಶ ಶಾಸ್ತ್ರಿಗಳು ಶಿಷ್ಯನನ್ನು ಕುರಿತು " ಪದ್ಮನಾಭಯ್ಯ! ನನಗೆ ತಿಳಿದಿದ್ದ ನಾಲ್ಕಕ್ಷರಗಳನ್ನು ನಿನಗೆ ತಿಳಿಸಿದ್ದೇನೆ. ಇನ್ನುಮುಂದೆ ಮೈಸೂರಿಗೆ ಹೋಗಿ ನನ್ನ ಪೂಜ್ಯ ಗುರುಗಳಾದ ವೀಣೆ ಶಾಮಣ್ಣನವರಲ್ಲಿ ನಿನ್ನ ವ್ಯಾಸಂಗವನ್ನು ಮುಂದುವರಿಸು" ಅಂದರು ವೆಂಕಟೇಶ ಶಾಸ್ತ್ರಿಗಳು.

ಪದ್ಮನಾಭಯ್ಯ ಬೂದಿ ಹಾಳಿಗೆ ಹಿಂದಿರುಗುವ ವೇಳೆಗೆ ಮತ್ತೊಂದು ಸಂಸಾರದ ತೊಡರು ತಲೆಹಾಕಿತ್ತು. ವೆಂಕಟನಾರಾಯಣಶಾಸ್ತ್ರಿಗಳು

ಆಸ್ತಿಪಾಸ್ತಿಗಳನ್ನೆಲ್ಲಾ ಇಬ್ಭಾಗಮಾಡಿ ತಮ್ಮ ಹಿರಿಯ ಮಗನಿಗೂ ಕಿರಿಯ ಮಗನಿಗೂ ಹಂಚಿದ್ದರು. ಪಿತ್ರಾರ್ಜಿತ ಆಸ್ತಿಯಲ್ಲಿ ಒಂದು ಕುರುಡು ಕಾಸೂ ಪದ್ಮನಾಭಯ್ಯನಿಗೆ ದೊರೆಯಲಿಲ್ಲ. ವೆಂಕಟೇಶ ಶಾಸ್ತ್ರಿಗಳ ಬಳಿಗೆ ಸಂಗೀತ ಶಿಕ್ಷಣಕ್ಕಾಗಿ ಕಳುಹಿಸಿದಾಗ ಗುರುದಕ್ಷಿಣೆಗೆ ಐವತ್ತು ರೂಪಾಯಿಗಳನ್ನು ಕೊಟ್ಟಿದ್ದರಂತೆ. "ನಿನ್ನ ಪಾಲಿಗೆ ಬರಬೇಕಾಗಿದ್ದ ಆಸ್ತಿಎಲ್ಲ ನಿನ್ನ ಗುರುದಕ್ಷಿಣೆಗಾಗಿಯೇ ಕೊಟ್ಟಿರುತ್ತೇನೆ. ಇನ್ನು ನಿನಗೆ ಬರಬೇಕಾದ ಭಾಗವಾವುದೂ ಇಲ್ಲ." ಎಂದರಂತೆ ವೆಂಕಟನಾರಾಯಣಶಾಸ್ತ್ರಿಗಳು. ಹುಡುಗನಿಗೆ ಹದಿನೆಂಟು ಹತ್ತೊಂಭತ್ತರ ತಾರುಣ್ಯ. ಸ್ವಭಾವತಃ ಮುಂಗೋಪಿ. ತಂದೆಯಿಂದಾದ ಅನ್ಯಾಯವನ್ನು ಬಗೆದು ಮೈಯೆಲ್ಲಾ ಬೆಂಕಿಯಾಯಿತು ಪದ್ಮನಾಭಯ್ಯನವರಿಗೆ! ಮರುಮಾತಾಡದೆ, ಹಸಿಬೆಯ ಚೀಲ ಒಂದನ್ನು ಒಂದು ಹೆಗಲಿಗೂ, ಗುರುಗಳು ಅನುಗ್ರಹ ಪೂರ್ವಕವಾಗಿ ಕೊಟ್ಟಿದ್ದ ವೀಣೆಯನ್ನು ಮತ್ತೊಂದು ಹೆಗಲಿಗೂ ನೇತುಹಾಕಿಕೊಂಡು ಕಾಲ್ನಡಿಗೆಯಲ್ಲಿ ಮೈಸೂರಿಗೆ ಹೊರಟೇ ಬಿಟ್ಟರು ಪದ್ಮನಾಭಯ್ಯನವರು.

ಅರಮನೆ ಪುರೋಹಿತರಾದ ಕೃಷ್ಣಶಾಸ್ತ್ರಿಗಳ ಮನೆಯಲ್ಲಿ ಆಶ್ರಯ ಪಡೆದರು. ವೀಣೆ ಶಾಮಣ್ಣನವರಲ್ಲಿಗೆ ಹೋಗಿ ದೀರ್ಘದಂಡ ಪ್ರಣಾಮ ಮಾಡಿ ನಡೆದ ವಿದ್ಯಮಾನವನ್ನೆಲ್ಲ ಅರುಹಿ, ವಿದ್ಯಾದಾನ ಮಾಡಬೇಕೆಂದು ಬೇಡಿದರು. ಶಾಮಣ್ಣನವರು ಸಂತೋಷದಿಂದ ಸಮ್ಮತಿಯಿತ್ತರು. ಪಾಠ ಪ್ರವಚನಗಳು ಪ್ರಾರಂಭವಾದವು. ಗುರುಗಳ ಜೊತೆಯಲ್ಲಿ ಅರಮನೆಗೆ ಹೋಗಿಬರುವುದೂ ವಾಡಿಕೆಯಾಯಿತು. ಮುಮ್ಮಡಿ ಕೃಷ್ಣರಾಜ ಒಡೆಯರ ವೃದ್ಧಾಪ್ಯ. ಸಂಜೆಯವೇಳೆ ಶಿವಪೂಜೆಯನ್ನು ಮುಗಿಸಿಕೊಂಡು, ಸಂಗೀತ, ಸಾಹಿತ್ಯ ವಿದ್ವಾಂಸರುಗಳ ಸಭೆಸೇರಿಸಿ, ಪ್ರಭುಗಳು ಸರಸಸಲ್ಲಾಪದಲ್ಲಿ ಕಾಲಕಳೆಯುತ್ತಿದ್ದರು. ಸಂಗೀತ ಕಛೇರಿಗಳು ಜರುಗುತ್ತಿದ್ದವು. ಒಂದು ಸಂಜೆ, ಪ್ರಸ್ತಾಪತ್ವೇನ "ಸಂಗೀತ ರತ್ನಾಕರ" ಗ್ರಂಥದ ವಿಚಾರವಾಗಿ ಚರ್ಚೆ ಪ್ರಾರಂಭವಾಯಿತು. ವೀಣೆ ಸಾಂಬಯ್ಯನವರು ಆ ಗ್ರಂಥದ ಶ್ಲೋಕ ಒಂದಕ್ಕೆ ತಪ್ಪುವಾಕ್ಯಾರ್ಥ ಮಾಡಿದರಂತೆ! ಸಾಂಬಯ್ಯನವರು ಸಂಸ್ಥಾನದ ಹಿರಿಯ ವಿದ್ವಾಂಸರು. ಪ್ರಭುಗಳಿಗೆ ಆಪ್ತರು. ಅವರು ಹೇಳಿದ ಮಾತಿಗೆ ಪ್ರತಿ ಹೇಳುವ ಧೈರ್ಯ ಯಾರಿಗೂ ಇರಲಿಲ್ಲ. ಸಭಿಕರೆಲ್ಲರೂ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡು ಸುಮ್ಮನಾದರು. ಪದ್ಮನಾಭಯ್ಯ ಸುಮ್ಮನಿರಲಿಲ್ಲ. ಪ್ರಭುಗಳಿಗೆ ಪ್ರಣಾಮ ಮಾಡಿ ನುಡಿದರು—

“ಮಹಾಪ್ರಭು ಯುವಕನ ಉದ್ಧತತನವನ್ನು ಮನ್ನಿಸಬೇಕು. ಇಷ್ಟು ಗಣ್ಯ ವಿದ್ವಾಂಸರು, ಮಹಾಗ್ರಂಥದ ವಿಷಯದ ಬಗ್ಗೆ ಮಹಾಸ್ವಾಮಿಯವರ ಸನ್ನಿಧಿಯಲ್ಲಿ ಅನುಚಿತ ವಾಕ್ಯಾರ್ಥಮಾಡಿದುದು ಶೋಚನೀಯ. ಅವರ ವಾದಕ್ಕೆ ಬುಡವಿಲ್ಲ. ಶ್ಲೋಕದ ಅರ್ಥ ಹಾಗೆಂದಿಗೂ ಆಗುವುದಿಲ್ಲ.” ಎಂದು. ಸಾಂಬಯ್ಯನವರಿಗೆ ಮುಖ ಭಂಗವಾದಂತಾಯಿತು. ಕೋಪದ ಕಿಡಿಗಳು ಕಣ್ಣುಗಳಿಂದ ಹೊರಸೂಸಿದವು. “ಇರಲಿ, ನಿನ್ನನ್ನು ವಿಚಾರಿಸಿ ಕೊಳ್ಳುತ್ತೇನೆ” ಎಂದು ನುಡಿಯುತ್ತಿತ್ತು ಅವರ ಮುಖಭಾವ. ರಾಜ ಪುರೋಹಿತ ಕೃಷ್ಣ ಶಾಸ್ತ್ರಿಗಳಿಗೆ ಗಾಬರಿಯಾಯಿತು. ಸಾಂಬಯ್ಯನವರು ಮುದ್ದು ಮಾಟಗಳ ವ್ಯವಹಾರದಲ್ಲಿ ನಿಸ್ಸೀಮರೆಂಬ ಪ್ರತೀತಿಯೊಂದಿತ್ತು. ಪದ್ಮನಾಭಯ್ಯನವರಿಗೆ ಏನು ವಿಪತ್ತು ಕಾದಿದೆಯೋ ಎಂದು ವಿಹ್ವಲರಾದರು. ಸಭೆ ಮುಗಿದು, ಮನೆಗೆ ಹಿಂದಿರುಗಿದನಂತರ, ಪದ್ಮನಾಭಯ್ಯನವರನ್ನು ಸ್ನಾನಮಾಡಿ ಮಡಿಯಿಂದ ಬರುವಂತೆ ಹೇಳಿ, ರಾಮತಾರಕ ಮಂತ್ರವನ್ನು ಉಪದೇಶಿಸಿ, ರಾತ್ರಿಯೆಲ್ಲ ಜಾಗರಣೆ ಮಾಡಿ ಮಂತ್ರ ಪುರಶ್ಚರಣೆ ಮಾಡು ವಂತೆ ತಿಳಿಸಿದರು. ಪದ್ಮನಾಭಯ್ಯನವರಿಗೆ ಇದರ ಮರ್ಮ ತಿಳಿಯಲಿಲ್ಲ. ಆಗ ನುಡಿದರು ಶಾಸ್ತ್ರಿಗಳು–“ಪದ್ಮನಾಭಯ್ಯ! ದುಡುಕಿಬಿಟ್ಟೆ ನೀನು. ನಿನ್ನ ವಂಶವನ್ನೇ ತೊಡೆದು ಹಾಕುವುದಕ್ಕೂ ಹಿಂಜರಿಯುವುದಿಲ್ಲ ಸಾಂಬಯ್ಯ” ಎಂದು. ರಾತ್ರಿಯೆಲ್ಲ ಒಂದು ಕೋಣೆಯಲ್ಲಿ ಪದ್ಮನಾಭ ಯ್ಯನೂ, ಮತ್ತೊಂದು ಕೋಣೆಯಲ್ಲಿ ಶಾಸ್ತ್ರಿಗಳೂ ಕೂತು ರಾಮತಾರಕ ಮಂತ್ರವನ್ನು ಪುರಶ್ಚರಣೆ ಮಾಡಿದರಂತೆ.

ಮಾರನೆಯ ಬೆಳಿಗ್ಗೆ ಪದ್ಮನಾಭಯ್ಯ ಜೀವಂತರಾಗಿದ್ದುದನ್ನು ಕಂಡ ಮೇಲೆ ಶಾಸ್ತ್ರಿಗಳ ಮನೋವ್ಯಾಕುಲತೆ ದೂರವಾಯಿತಂತೆ! ಪದ್ಮನಾಭಯ್ಯ ನವರ ಕೈ ಕಾಲುಗಳು, ಉಗುರುಗಳು ಮಾತ್ರ ಕಪ್ಪಿಟ್ಟು ಊದಿದ್ದವಂತೆ. “ಬೆಟ್ಟದಹಾಗೆ ಬಂದ ವಿಪತ್ತು ಮಂಜಿನ ಹಾಗೆ ಮಾಯವಾಯಿತಲ್ಲ” ಎಂದು ಶಾಸ್ತ್ರಿಗಳು ಸಮಾಧಾನ ಹೊಂದಿದರಂತೆ. ಅಲ್ಲಿಂದಾಚೆಗೆ ಪದ್ಮ ನಾಭಯ್ಯನವರಿಗೆ ಹಾಡುವಾಗಲೆಲ್ಲ ಉಬ್ಬಸ ತಲೆದೋರುತ್ತಿತ್ತು, ಮತ್ತು ವೀಣೆ ನುಡಿಸಲು ಪ್ರಾರಂಭಿಸಿದ ಅಲ್ಪಾವಧಿಯಲ್ಲೇ ಕೈ ಸೋತು ಬೀಳುತ್ತಿತ್ತು. ಅಂತೂ ಪದ್ಮನಾಭಯ್ಯ ಪ್ರಭು ಕಟಾಕ್ಷಕ್ಕೆ ಪಾತ್ರರಾದರು. ತಿಂಗಳಿಗೆ ಮೂರು ಹಣ ಸಂಬಳವಾಯಿತು ಅರಮನೆಯಲ್ಲಿ.

ಮುಮ್ಮಡಿ ಕೃಷ್ಣರಾಜ ಒಡೆಯರ ನಂತರ ಪಟ್ಟಕ್ಕೆ ಬಂದ ಚಾಮರಾಜ ಒಡೆಯರೂ ಸಹ ಪದ್ಮನಾಭಯ್ಯನವರ ಬಗ್ಗೆ ಗೌರವ ವಿಶ್ವಾಸಗಳನ್ನು ತೋರುತ್ತ ಬಂದರು. ಪ್ರತಿದಿನ ಶಿವಪೂಜೆಯ ಸಮಯದಲ್ಲಿ ಮಹಾಸ್ವಾಮಿಯವರ ಸನ್ನಿಧಿಯಲ್ಲಿ ವೀಣೆಯನ್ನು ನುಡಿಸುವಂತೆ ಪದ್ಮನಾಭಯ್ಯನವರಿಗೆ ಅಪ್ಪಣೆಯಾಯಿತು. ಹೀಗಾಗಿ ಪದ್ಮನಾಭಯ್ಯನವರು ನಿರಂತರವೂ ರಾಜಸನ್ನಿಧಿಯಲ್ಲಿರಲು ಅವಕಾಶವಾಯಿತು. ಹೀಗಿರುವಲ್ಲಿ ಒಂದು ದಿನ ಊರಿಂದ ಪತ್ರ ಬಂದಿತು ಪದ್ಮನಾಭಯ್ಯನವರಿಗೆ. ಲಗ್ನ ನಿಷ್ಕರ್ಷೆಯಾಗಿರುವುದಾಗಿಯೂ, ಕೂಡಲೇ ಹೊರಟುಬರಬೇಕೆಂದೂ ತಿಳಿಸಿ ತಂದೆಯವರು ಬರೆಸಿದ್ದರು. ಪ್ರಭುಗಳಲ್ಲಿ ಈ ಸಮಾಚಾರವನ್ನು ಅರಿಕೆಮಾಡಿಕೊಂಡು ಊರಿಗೆ ಹೋಗಿಬರಲು ಪದ್ಮನಾಭಯ್ಯ ಅನುಮತಿ ಬೇಡಿದರು. ಸಂತೋಷದ ಸುದ್ದಿಯನ್ನು ಕೇಳಿ ಚಾಮರಾಜ ಒಡೆಯರು ಹರುಷಗೊಂಡರು. " ಎಲ್ಲಿ ಕೈ ಹಿಡಿಯಿರಿ " ಎಂದು ಹೇಳಿ ಪದ್ಮನಾಭಯ್ಯನವರ ಅಂಗೈತುಂಬ ಸವರನ್ನುಗಳನ್ನು ಸುರಿದು "ಹೋಗಿಬನ್ನಿ" ಅಂದರಂತೆ ಮಹಾರಾಜರು.

ರಾಜಮರ್ಯಾದೆಯನ್ನು ಸಂಪಾದಿಸಿಕೊಂಡು ಹಿಂದಿರುಗಿ ಬಂದ ಮಗನನ್ನು ನೋಡಿ ವೆಂಕಟನಾರಾಯಣಶಾಸ್ತ್ರಿಗಳಿಗೆ ಪರಮಾನಂದವಾಯಿತು. ದೊರೆಗಳು ಬಹುಮಾನವಾಗಿ ಕೊಟ್ಟ ಸವರನ್ನುಗಳನ್ನು ಜೋಪಾನವಾಗಿ ಒಳಗಿರಿಸುವಂತೆ ತಿಳಿಸಿದರು. ಪದ್ಮನಾಭಯ್ಯ ಬಂದು ಒಂದೆರಡು ದಿನಗಳಾದಾಗ್ಯೂ ಲಗ್ನದ ವಿಷಯವನ್ನೇ ಪ್ರಸ್ತಾಪಿಸಲಿಲ್ಲ ಶಾಸ್ತ್ರಿಗಳು. ಕೊನೆಗೆ ಪದ್ಮನಾಭಯ್ಯನವರೇ ಹುಡುಗಿಯನ್ನು ನೋಡಬೇಕೆಂಬ ಅಭಿಲಾಷೆಯನ್ನು ತಿಳಿಯಪಡಿಸಿದರು. " ಮದುವೆಯೂ ಇಲ್ಲ ಮುಂಜಿಯೂ ಇಲ್ಲ ! ನಿನ್ನನ್ನು ನೋಡಿ ಬಹಳ ದಿನಗಳಾಗಿತ್ತು. ನೋಡಬೇಕೆಂದು ಆಸೆಯಾಗಿದ್ದುದರಿಂದ ನಾನೇ ಆರೀತಿ ಕಾಗದ ಬರೆಸಿದೆ. " ಅಂತ ಸಮಾಧಾನವಾಗಿ ನುಡಿದರು ಶಾಸ್ತ್ರಿಗಳು. ಪದ್ಮನಾಭಯ್ಯನವರಿಗೆ ಮಿತಿಮೀರಿ ಕೋಪ ಬಂದಿತು. ತಾವು ತಂದಿದ್ದ ಸವರನ್ನುಗಳನ್ನು ಉಪಾಯವಾಗಿ ವಶಪಡಿಸಿಕೊಂಡದ್ದಲ್ಲದೆ, ಹುಡುಗಾಟಿಕೆ ಮಾಡುತ್ತಿದ್ದುದನ್ನು ಕಂಡು ಕಿಡಿ ಕಿಡಿಯಾದರು. ಅಪ್ಪ ಮಕ್ಕಳಲ್ಲಿ ಬಿಸಿ ಬಿಸಿ ಮಾತು ಬೆಳೆದವು. ಮಾತಿಗೆ ಮಾತು ಬೆಳೆದು ಕೈ ಕೈ ಜಗಳವೂ ಪ್ರಾರಂಭವಾಯಿತು. ಅಪ್ಪ

ನಿಗೆ ಹಿರಿಯ ಮತ್ತು ಕಿರಿಯ ಮಕ್ಕಳಿಬ್ಬರೂ ಸಹಾಯಕರಾಗಿ ನಿಂತರು. ಪದ್ಮನಾಭಯ್ಯನವರನ್ನು ಕಂಭಕ್ಕೆ ಕಟ್ಟಿಹಾಕಿ, ಅವರ ಜೀವನ ಯಾತ್ರೆಯನ್ನು ಮುಕ್ತಾಯಗೊಳಿಸಬೇಕೆಂದು ಮೂವರೂ ಹವಣಿಸಿದರು. ಅಷ್ಟರಲ್ಲಿ ಪದ್ಮನಾಭಯ್ಯ ಹಗ್ಗವನ್ನು ಬಿಗಿಯುತ್ತಿದ್ದ ಅಪ್ಪನನ್ನೂ ತಮ್ಮನನ್ನೂ ನೆಲಕ್ಕುರುಳಿಸಿ ಹತ್ತಿರ ಬಿದ್ದಿದ್ದ ಹಾರೆಯನ್ನು ಅಣ್ಣನ ಕಡೆಗೆ ಬೀಸಿದರು. ಅಣ್ಣ ಅಂದಿನಿಂದ ಶುಕ್ರಾಚಾರ್ಯರ ಶಿಷ್ಯರಾದರು! ನಿಮಿಷಮಾತ್ರದಲ್ಲಿ ಈ ಜಗಳದ ಪ್ರಸಂಗ ಕಾಡುಕಿಚ್ಚಿನಂತೆ ಗ್ರಾಮದಲ್ಲೆಲ್ಲಾ ಹಬ್ಬಿತು. ಅವಧಾನಿಗಳ ಕಿವಿಯನ್ನೂ ಮುಟ್ಟಿತು. ಕೂಡಲೆ ಅವಧಾನಿಗಳು ಕುರುಕ್ಷೇತ್ರಕ್ಕೆ ಆಗಮಿಸಿ ನಡೆದ ಸಂಗತಿ ಎಲ್ಲವನ್ನೂ ಕೇಳಿ, ನರಮೇಧಯಾಗವನ್ನು ನಡೆಸಲು ಹವಣಿಸಿದ್ದ ವೆಂಕಟನಾರಾಯಣಶಾಸ್ತ್ರಿಗಳನ್ನೂ, ಅವರ ಮಕ್ಕಳಿಬ್ಬರನ್ನೂ ಕಟುವಾಗಿ ಮೂದಲಿಸಿದರು. ಶೆಟ್ಟಿಕೆರೆಯಿಂದ ವೆಂಕಮ್ಮನೆಂಬ ಕನ್ಯೆಯನ್ನು ಕರೆತರೆಸಿ "ಇಗೋ, ಪದ್ಮನಾಭಯ್ಯನಿಗೆ ಈ ಹುಡುಗಿಯನ್ನು ಲಗ್ನಮಾಡಿಕೊಟ್ಟು ಮೈಸೂರಿಗೆ ಕಳುಹಿಸಿಕೊಡು," ಎಂದು ವೆಂಕಟನಾರಾಯಣಶಾಸ್ತ್ರಿಗಳಿಗೆ ಆಜ್ಞೆಮಾಡಿದರು.

ಲಗ್ನವಾದ ನಂತರ, ಪದ್ಮನಾಭಯ್ಯನವರು ತಂದೆಯ ಮನೆಯಿಂದ ಹೊರಬಿದ್ದರು. ಮೈಸೂರಿಗೆ ಹಿಂದಿರುಗಲು ಮನಸ್ಸೂ ಇರಲಿಲ್ಲ, ಹಣವೂ ಇರಲಿಲ್ಲ. ಊರ ಹೊರಗಡೆ, ಒಂದು ಹೊಲದಲ್ಲಿ ಗುಡಿಸಲನ್ನು ಹಾಕಿಕೊಂಡು ವೆಂಕಮ್ಮನೊಡನೆ ಹತ್ತುವರ್ಷಗಳ ಕಾಲ ಸಂಸಾರ ನೌಕೆಯನ್ನು ಅತಿ ಕಷ್ಟದಿಂದ ಸಾಗಿಸುತ್ತ ಬಂದರು. ಆದ ಎರಡು ಮಕ್ಕಳೂ ಮೃತರಾದವು. ಜೀವನವೇ ಭಾರವಾಗಿ ಕಂಡಿತು ಪದ್ಮನಾಭಯ್ಯನವರಿಗೆ. ಈ ಕಷ್ಟಸಮಯದಲ್ಲಿ ಇವರಿಗೆ ಆಸರೆಯಾಗಿ ನಿಂತವರೆಂದರೆ ಅವರ ಮುಖ್ಯ ಶಿಷ್ಯಂದಿರಾದ ಪಟ್ಟಾಭಿರಾಮಯ್ಯ ಮತ್ತು ಚಿತ್ರದುರ್ಗದ ವೆಂಕಟೇಶಶಾಸ್ತ್ರಿ. ಪಟ್ಟಾಭಿರಾಮಯ್ಯ ಪಿಟೀಲನ್ನೂ, ಶಾಸ್ತ್ರಿಗಳು ಹಾಡುಗಾರಿಕೆಯನ್ನೂ ಪದ್ಮನಾಭಯ್ಯನವರಲ್ಲಿ ಅಭ್ಯಾಸ ಮಾಡುತ್ತಿದ್ದರು. ಗುರುಗಳಲ್ಲಿ ಅತ್ಯಂತ ಪೂಜ್ಯಭಾವನೆ. ಅವರ ಜೀವನವನ್ನು ಸುಖಮಯವನ್ನಾಗಿ ಏನುಮಾಡಲೂ ಸಿದ್ಧರಾಗಿದ್ದರು. ಹೇಗಾದರೂ ಗುರುಗಳನ್ನು ಮೈಸೂರಿಗೆ ಕರೆದುಕೊಂಡು ಹೋಗಿ ಅಲ್ಲೇ ನೆಲಸುವಂತೆ ಮಾಡಲು ಪ್ರಯತ್ನಿಸುತ್ತಿದ್ದರು. ಈ ಸಮಯಕ್ಕೆ ಸರಿಯಾಗಿ ಮೈಸೂರಿನಿಂದ ಪತ್ರ

ವೊಂದು ಬಂದಿತು. ಲಲಿತ ಕಲೆಗಳ ಪುರೋಭಿವೃದ್ಧಿಗಾಗಿ ಮಹಾಪ್ರಭುಗಳು ಅನೇಕ ವಿಧದಲ್ಲಿ ಪ್ರೋತ್ಸಾಹ ನೀಡುತ್ತಿದ್ದರು ಅವರ ಅಪೇಕ್ಷೆಯಂತೆ ರಾಜಧಾನಿಯಲ್ಲಿ ಮಹಾರಾಣಿಯವರ ಗರ್ಲ್ಸ್ ಹೈಸ್ಕೂಲೊಂದು ಪ್ರಾರಂಭವಾಯಿತು. ಸಂಗೀತಾಧ್ಯಾಪಕರಾಗಿರಲು ಅಂಬಿಲ್ ನರಸಿಂಹ ಅಯ್ಯಂಗಾರ್ಯರು ಪದ್ಮನಾಭಯ್ಯನವರನ್ನು ಆಹ್ವಾನಿಸಿದರು. ಶಿಷ್ಯರ ಒತ್ತಾಯದಮೇಲೆ ಪದ್ಮನಾಭಯ್ಯ ಆ ಆಹ್ವಾನವನ್ನು ಅಂಗೀಕರಿಸಿ ಮತ್ತೆ ಮೈಸೂರಿಗೆ ಬಂದು ನೆಲಸಲು ನಿರ್ಧರಿಸಿದರು.

ಚಾಮರಾಜ ಒಡೆಯರ ಅನಂತರ ರೀಜೆಂಟರ ಆಡಳಿತ ಪ್ರಾರಂಭವಾಯಿತು. ಪದ್ಮನಾಭಯ್ಯನವರಿಗೆ ಅರಮನೆಯ ಬೆಂಬಲ ಪ್ರೋತ್ಸಾಹಗಳು ಯಥಾ ರೀತಿಯಲ್ಲಿ ದೊರಕುತ್ತಿದ್ದವು. ಪದ್ಮನಾಭಯ್ಯ ಬಾಡಿಗೆ ಮನೆಯೊಂದರಲ್ಲಿ ವಾಸಮಾಡಿಕೊಂಡಿದ್ದರು. ಶಿವರಾಮಯ್ಯನೆಂಬ ಮಗನೂ ಜಾನಕಮ್ಮನೆಂಬ ಮಗಳೂ ಜನಿಸಿದರು. ನರಸಮ್ಮನೆಂಬ ಶಿಶು ಜನಿಸಿದ ತರುಣದಲ್ಲಿ ವಾಸಿಸುತ್ತಿದ್ದ ಮನೆಯನ್ನು ಬಿಡಬೇಕಾಗಿ ಬಂತು. ಬಾಡಿಗೆಗೆ ಒತ್ತಾಯ ಹೆಚ್ಚಾಯಿತು. ಪದ್ಮನಾಭಯ್ಯನವರಿಗೆ ಬಾಡಿಗೆ ಕೊಡಲು ತೊಂದರೆಯಾಗಿತ್ತು. ಮನೆಯ ಸಾಮಾನುಗಳನ್ನು ಹೊರದೂಡಿ, ಮನೆಯನ್ನು ಖಾಲಿಮಾಡಲು ಮನೆಯ ಮಾಲಿಕರು ಸಿದ್ಧರಾದರು. ನಿಲ್ಲಲು ನೆರಳಿಲ್ಲದೆ ಮತ್ತೆ ತಮ್ಮ ಊರಿಗೆ ಹೊರಡಲು ಅನುವಾದರು ಪದ್ಮನಾಭಯ್ಯ. ಸೀತಾವಿಲಾಸ ಸನ್ನಿಧಿಯಲ್ಲಿ ತಮ್ಮ ಅಹವಾಲನ್ನು ಹೇಳಿಕೊಂಡರು. ಆ ಕೂಡಲೆ ಅಂಬಿಲ್ ನರಸಿಂಹಯ್ಯಂಗಾರ್ಯರನ್ನು ಬರಮಾಡಿಕೊಂಡು ಪದ್ಮನಾಭಯ್ಯನವರಿಗೆ ಒಂದು ಮನೆಯನ್ನು ಕೊಡಿಸಿಕೊಡುವಂತೆ ಮಹಾರಾಣಿಯವರು ಅಪ್ಪಣೆಮಾಡಿದರು. ಸೀತಾವಿಲಾಸ ಅಗ್ರಹಾರದಲ್ಲಿ ಮನೆಯೊಂದನ್ನು ಕೃಷ್ಣರಾಜನಗರ ತಾಲ್ಲೋಕಿನಲ್ಲಿ ಐದು ಎಕರೆ ಜಮೀನನ್ನೂ ಪದ್ಮನಾಭಯ್ಯನವರಿಗೆ ಮಹಾರಾಣಿಯವರು ದಯಪಾಲಿಸಿದರು. ಈ ವೇಳೆಗೆ ಮಹಾರಾಜರ ಸಂಸ್ಕೃತ ಪಾಠಶಾಲೆಯಲ್ಲೂ ಸಂಗೀತ ಅಧ್ಯಯನಕ್ಕೆ ಅವಕಾಶ ಕಲ್ಪಿಸಲಾಯಿತು. ಪಾಠ ಹೇಳಲು ಪದ್ಮನಾಭಯ್ಯನವರನ್ನೇ ನೇಮಿಸಿದರು. ಅರಮನೆಯ ಸಂಬಳ, ಸ್ಕೂಲಿನ ಸಂಬಳ, ಪಾಠಶಾಲೆಯ ಸಂಬಳ, ಸ್ವಂತ ಮನೆ ಭೂಮಿ ಮೊದಲಾದ ಸೌಕರ್ಯಗಳು ಒದಗಲಾಗಿ ಪದ್ಮನಾಭಯ್ಯನವರ ಜೀವನಪಥ ಸುಗಮ

ವಾಯಿತು. ಆ ದಿವಸಗಳಲ್ಲಿ ಪಾಠಶಾಲೆಯಲ್ಲಿ ವಿದ್ಯಾರ್ಥಿಗಳು ತಮ್ಮ ತಮ್ಮ ಪಠ್ಯ ವಿಷಯಗಳನ್ನು ತಾವೇ ಚುನಾಯಿಸಿಕೊಳ್ಳುವಂತಿರಲಿಲ್ಲ. ಚೀಟಿಗಳನ್ನು ಬರೆದು ಪಾಠಶಾಲೆಯ ವಿನಾಯಕನ ಮುಂದೆ ಹಾಕಿ ಮಗುವೊಂದರ ಕೈಯಲ್ಲಿ ಎತ್ತಿಸುತ್ತಿದ್ದರು. ವಿದ್ಯಾರ್ಥಿಯ ಹೆಸರಿಗೆ ಬಂದ ಎರಡು ಶಾಸ್ತ್ರಗಳನ್ನು ಆತ ಅಭ್ಯಾಸಮಾಡಬೇಕಾಗಿತ್ತು. ನನ್ನ ಹೆಸರಿನಲ್ಲಿ ಚೀಟಿ ಎತ್ತಿದಾಗ "ಸಂಗೀತ ಮತ್ತು ಸಾಹಿತ್ಯ" ಎಂದು ಬಂದಿತು. ನನ್ನ ಸಂತೋಷಕ್ಕೆ ಎಣೆಯೇ ಇಲ್ಲದಂತಾಯಿತು. ಬಹುಕಾಲದ ನನ್ನ ಬಯಕೆ ಈಡೇರುವ ಅವಕಾಶ ದೊರೆತದ್ದಕ್ಕಾಗಿ ಮನದಲ್ಲಿಯೇ ನನ್ನ ಇಷ್ಟ ದೈವವನ್ನು ವಂದಿಸಿದೆ. ಪದ್ಮನಾಭಯ್ಯನವರು ಸಂಗೀತದಲ್ಲಿ ನನ್ನ ಎರಡನೆಯ ಗುರುಗಳಾದರು. ಈ ಮೊದಲೇ ನನಗೂ ಅವರಿಗೂ ಪರಿಚಯವಾಗಿತ್ತು. ವೀಣೆ ಶಾಮಣ್ಣನವರೂ ನಾವೂ ಅಕ್ಕ ಪಕ್ಕದ ಮನೆಗಳಲ್ಲಿ ವಾಸವಾಗಿದ್ದೆವು. ನನಗೆ ಬಾಲ್ಯದಿಂದಲೂ ಸಂಗೀತದಲ್ಲಿದ್ದ ಅಭಿರುಚಿಯನ್ನು ನೋಡಿ ನನ್ನ ತೀರ್ಥರೂಪುರವರು ಶಾಮಣ್ಣನವರ ಸೋದರಳಿಯಂದಿರಾದ ಸುಬ್ಬರಾಯರನ್ನು ಪ್ರಾರ್ಥಿಸಿಕೊಂಡು, ನನಗೆ ಸ್ವಲ್ಪ ಸಂಗೀತ ಪಾಠ ಹೇಳಲು ಏರ್ಪಾಡು ಮಾಡಿದ್ದರು. ಸುಬ್ಬರಾಯರೆಂದರೆ ಧರ್ಮರಾಯನ ಅವತಾರವೆಂದೇ ಹೇಳಬಹುದು. ಸದಾ ಹಸನ್ಮುಖಿಗಳು. ಮಿತ ಹಾಗೂ ಮಿದುಭಾಷಿಗಳು. ಉದಾರ ಹೃದಯ. ನಿಷ್ಕಪಟ ಮತ್ತು ನಿರಾಡಂಬರ ವ್ಯಕ್ತಿ : ಈ ಮಹನೀಯರಲ್ಲಿ ಬಹುಕಾಲ ಶಿಷ್ಯವೃತ್ತಿಮಾಡುವ ಭಾಗ್ಯ ನಾನು ಪಡೆದು ಬಂದಿರಲಿಲ್ಲ. ಅವರು ನನಗೆ ಸ, ಪ, ಸ, ಕೂಗಿಸಿದ ಕೆಲವೇ ದಿನಗಳಲ್ಲೇ ನನಗೆ ಪಿತೃವಿಯೋಗ ಪ್ರಾಪ್ತವಾಯಿತು. ಅನಂತರ ನನ್ನ ಲಾಲನೆ ಪಾಲನೆಗಳ ಜವಾಬ್ದಾರಿಯನ್ನು ವಹಿಸಿದ ನನ್ನ ಮಾತಾಮಹರು ಸಂಗೀತ ಶತ್ರುಗಳು. ಸದ್ವಂಶ ಸಂಭೂತನಿಗೂ ಸಂಗೀತಕ್ಕೂ ಸಂಬಂಧ ಲವಲೇಶವೂ ಇರಕೂಡದೆಂಬುದೇ ಅವರ ಅಂತ್ಯ ಸಿದ್ಧಾಂತ. ಪಕ್ಕದ ಮನೆಗೆ ಕಾಲಿಡಕೂಡದೆಂದು ನನಗೆ ಕಟ್ಟಾಜ್ಞೆಯಾಯಿತು. ನನ್ನ ಸಂಗೀತ ವ್ಯಾಸಂಗ ಕಡಿದುಬಿತ್ತು.

ಪದ್ಮನಾಭಯ್ಯನವರೂ ಸುಬ್ಬರಾಯರೂ ಸಹಾಧ್ಯಾಯಿಗಳಾಗಿದ್ದುದರಿಂದ ಪದ್ಮನಾಭಯ್ಯನವರ ಪರಿಚಯವೂ ನನಗಾಗಲು ಸಾಧ್ಯವಾಯಿತು. ಒಮ್ಮೆ ನಾನೂ ನನ್ನ ಸಹಾಧ್ಯಾಯಿ ಮಂಡ್ಯದ ಶಾಮಾಚಾರ್ಯನೂ ಪಾಠಶಾಲೆಯಿಂದ ಮನೆಗೆ ಹಿಂತಿರುಗುತ್ತಿದ್ದಾಗ, ಪದ್ಮನಾಭಯ್ಯನವರು ಎದು

ರಿಗೆ ಸಿಕ್ಕಿದರು. "ನಮ್ಮಿಬ್ಬರಿಗೂ ಸಂಗೀತಾಭ್ಯಾಸ ಮಾಡಬೇಕೆಂಬ ಅಪೇಕ್ಷೆಯಿದೆ. ಹೇಳಿಕೊಡುವಿರಾ?" ಎಂದು ಕೇಳಿದೆವು. "ಎಲ್ಲಿ ಹಾಡಿ, ನೋಡೋಣ ನಾ ಹೇಳಿಕೊಟ್ಟಿದ್ದನ್ನ" ಅಂತ ಹೇಳಿ, "ತನು ನಿನ್ನದು ಜೀವನ ನಿನ್ನದು" ಎಂಬ ದೇವರ ನಾಮುವನ್ನು ದಾರಿಯಲ್ಲೆ ಪ್ರಾರಂಭ ಮಾಡಿದರು. ನಾವು ಧೈರ್ಯವಾಗಿ ನಿಸ್ಸಂಕೋಚವಾಗಿ, ನಮ್ಮದೇ ಶೈಲಿ ಯಲ್ಲಿ ಪಾಠ ಒಪ್ಪಿಸಿದೆವು. "ಆಗಲಿ ನೋಡೋಣ" ಅಂದರು ಪದ್ಮ ನಾಭಯ್ಯ. ಹೀಗಾಗಿ ಪಾಠಶಾಲೆಯಲ್ಲಿ ನನಗೆ ಸಂಗೀತ ಕಲಿಯಲು ಅವ ಕಾಶ ದೊರೆಯುವುದಕ್ಕೆ ಮುಂಚೆಯೇ ನಮ್ಮ ಅವರ ಗುರುಶಿಷ್ಯ ಸಂಬಂಧ ಏರ್ಪಟ್ಟಿತ್ತು.

ಮಂಡ್ಯದ ಶಾಮಾಚಾರ್ಯರು, ಸುಂದರಶಾಸ್ತ್ರಿಗಳು, ಕುಮಾರಾವ ಧಾನಿಗಳು, ಶಿವಮೊಗ್ಗೆಯ ರಾಜಾಚಾರ್ಯರು, ಪಿಟೀಲು ರಾಜಣ್ಣೋರು, ಭರಮಸಾಗರದ ವೆಂಕಟೇಶಯ್ಯ ಇವರೇ ಮೊದಲಾಗಿ ಹಲವಾರು ವಿದ್ಯಾ ರ್ಥಿಗಳು ಪದ್ಮನಾಭಯ್ಯನವರಲ್ಲಿ ಶಿಕ್ಷಣ ಪಡೆಯುತ್ತಿದ್ದರು. ಆದಾಗ್ಯೂ, ಸುಂದರಶಾಸ್ತ್ರಿಗಳು, ಪಟ್ಟಾಭಿರಾಮಯ್ಯ, ಚಿತ್ರದುರ್ಗದ ವೆಂಕಟೇಶಶಾಸ್ತ್ರಿ ಗಳು ಮತ್ತು ನಾನು ಈ ನಾಲ್ವರಮೇಲೆ ಅವರಿಗೆ ವಿಶೇಷ ಅಭಿಮಾನ. ನನ್ನೊಬ್ಬನನ್ನು ಮಾತ್ರ ಬಹುವಚನದಲ್ಲೇ ಸಂಬೋಧಿಸುತ್ತಿದ್ದರು. ಬಹು ದಯಾಪೂರಿತ ಹೃದಯದವರಾಗಿದ್ದರೂ ಬಲು ಮುಂಗೋಪಿಗಳು. ದೂರ್ವಾಸರ ಅವತಾರವೇ ಅನ್ನಬಹುದು. ಅಪಶೃತಿ ಅವಲಯಗಳನ್ನು ಕೊಂಚವೂ ಸಹಿಸುತ್ತಿರಲಿಲ್ಲ. ಶೃತಿ, ತಾಳ ಬಿಟ್ಟು ಹೋದಾಗ ತಮ್ಮನ್ನೇ ತಾವು ಖಂಡಿಸಿಕೊಳ್ಳುತ್ತಿದ್ದರು. ನಮಗೆ ಪಾಠ ಹೇಳುತ್ತಿದ್ದಾಗ ಅನೇಕ ವೇಳೆ, ತಮ್ಮ ಹಾಡುಗಾರಿಕೆಯಲ್ಲಿ ತಾವೇ ಅಸಮಾಧಾನಪಟ್ಟು ತಲೆ ಚಚ್ಚಿ ಕೊಂಡು–"ಹೊಡೀರಯ್ಯ ಮೆಟ್ಟು ತಗೊಂಡು; ಕತ್ತೆಗೆ ಬಂದ ಹಾಗೆ ಬಂತು ವಯಸ್ಸು; ಇನ್ನೂ ತಾಳಜ್ಞಾನವಿಲ್ಲ, ಶೃತಿಜ್ಞಾನವಿಲ್ಲ" ಅನ್ನು ತ್ತಿದ್ದರು.

ಒಂದು ಬಾರಿ ನನಗೂ ಮರ್ಯಾದೆಯಾಗಿತ್ತು. ನಿಮಗೆ ಸಂಗೀತ ಬರೋದು ಅಂಪ್ರೇನಯ್ಯ! ಎಲ್ಲಾದರೂ ಹೋಗಿ ಮಣ್ಣುತಿನ್ನಿ" ಎಂದು ಬಹು ಗೌರವವಾಗಿಯೇ ಪ್ರಯೋಗ ಮಾಡಿದ್ದರು. ನನಗೂ ಸ್ವೈರಣೆ

ಮೀರಿತ್ತು. "ಈ ಸಂಗೀತದ ಗೋಜೇ ಬೇಡ ನನಗೆ, ಎಷ್ಟಾದರೂ ಇನ್ನೊಬ್ಬನ ಮುಂದೆ ಕುಳಿತು ಒಪ್ಪಿಸುವ ಈ ವಿದ್ಯೆಗಾಗಿ ಇವರ ಕೈಲಿ ಯಾಕೆ ಈ ನಿಂದೆಯನ್ನು ಕೇಳಬೇಕು?" ಅಂತ ಯೋಚಿಸಿ ಪಾಠಕ್ಕೆ ಹೋಗುವುದನ್ನು ಅಂದಿನಿಂದಲೇ ನಿಲ್ಲಿಸಿಬಿಟ್ಟೆ, ಎರಡು ಮೂರು ದಿನಗಳ ಮೇಲೆ ಗುರುಗಳೇ ನಮ್ಮ ಮನೆಗೆ ದಯಮಾಡಿಸಿದರು. "ಎಲ್ಲೋ ಕೋಪದಲ್ಲಿ ಹಾಗಂದೆ ಶಾಸ್ತ್ರಿಯ್ಯ, ಕೋಪಿಸಿಕೊಳ್ಳಬೇಡಿ. ನಿಮಗೆ ಬರದೇ ಇದ್ದರೆ ಮತ್ಯಾರಿಗೆ ಬರಬೇಕು ಸಂಗೀತ? ದಯವಿಟ್ಟು ಬನ್ನಿ" ಅಂತ ಹೇಳಿ ಮತ್ತೆ ನನ್ನನ್ನು ಕರೆದುಕೊಂಡುಹೋಗಿ, ದಿವ್ಯವಾದ ಊಟ ಉಪಚಾರಮಾಡಿಸಿ, ಮತ್ತೆ ಪ್ರಾರಂಭಮಾಡಿದರು ಪಾಠ ಪ್ರವಚನಗಳನ್ನು. ಅಷ್ಟು ಮಮತೆ ಮತ್ತು ಸರಳತೆ ಪದ್ಮನಾಭಯ್ಯನವರದು.

ಇಂಥದೇ ಒಂದು ಪ್ರಸಂಗ ಮಹಾರಾಣಿಯವರ ಹೈಸ್ಕೂಲಿನಲ್ಲಿ ಪದ್ಮನಾಭಯ್ಯನವರು ಪಾಠ ಹೇಳುತ್ತಿದ್ದಾಗ್ಯೆ ನಡೆಯಿತು. "ಮುಸರೇ ತಿಕ್ಕೋ ಕೈಯಲ್ಲಿ ವೀಣೆ ನುಡೀ ಬೇಕೂ ಅಂದರೆ ಹೇಗಾದೀತೂ?" ಅಂತ K. D. ರುಕ್ಮಿಣಿಯಮ್ಮ, ಶ್ರೀ ರಂಗಮ್ಮ ಎಂಬ ವಿದ್ಯಾರ್ಥಿನಿಯ ರನ್ನು ಆಕ್ಷೇಪಿಸಿದರು. ಕೋಪ ಸ್ವಲ್ಪ ಶಮನವಾದ ಮೇಲೆ ದುಡುಕಿ ಮಾತನಾಡಿದೆನೆಂದು ಪರಿತಪಿಸಿದರು. ನೇರವಾಗಿ ಮೇಲಧಿಕಾರಿಗಳ ಬಳಿ ಹೋಗಿ, "ನನ್ನಿಂದ ಈ ರೀತಿ ಅಪರಾಧ ಒಂದು ನಡೆದಿದೆ, ದಯಮಾಡಿ ನನ್ನನ್ನು ಕೆಲಸದಿಂದ ತೆಗೆದುಬಿಡಿ" ಅಂತ ಪ್ರಾರ್ಥಿಸಿ, ನಡೆದ ವಿದ್ಯಮಾನ ವನ್ನು, ವಿವರಿಸಿದರಂತೆ. ಅಧಿಕಾರಿಗಳಿಗೆ ಒಂದುಕಡೆ ನಗು, ಮತ್ತೊಂದು ಕಡೆ ಅವರ ಸರಳತೆಯ ಬಗ್ಗೆ ಆಶ್ಚರ್ಯವೂ ಆದವಂತೆ.

ಜೀವನದಲ್ಲಿ ಬಹುವಾಗಿ ಕಷ್ಟ ಕಾರ್ಪಣ್ಯಗಳನ್ನು ಅನುಭವಿಸಿ ಪದ್ಮ ನಾಭಯ್ಯನವರ ಹೃದಯ ಮೇಣದಂತೆ ಮಿದುವಾಗಿತ್ತು. ಇದರ ಫಲವಾಗಿ, ಮಗನನ್ನು ಕುಸುಮದಷ್ಟು ಕೋಮಲವಾಗಿ ಬೆಳೆಸಿದರು. ಮಗ ಮನೆ ಬಿಟ್ಟು ಹೋಗಲು ಅಪ್ಪಣೆಯಿಲ್ಲ. ಮನೆಯಲ್ಲಿ ನೆಲದಮೇಲೆ ಓಡಾಡಿದರೆ ಶೀತವಾದೀತೆಂಬ ಕಾತುರತೆ, ಗೋಡೆಯ ಅಂಚಿನ ಉದ್ದಕ್ಕೂ ಬಟ್ಟೆಯನ್ನು ಹಾಸಿದ್ದರು. ಅದರ ಮೇಲೆಯೇ ನಡೆಯಬೇಕು ಮಗ! ಬಟ್ಟೆ ಬಿಟ್ಟು, ನೆಲದಮೇಲೆ ಹೆಜ್ಜೆ ಇಟ್ಟರೆ ಸಾಕು, ಬೆನ್ನಿನಮೇಲೆ ಛಡಿ ಏಟು ಬೀಳು ತ್ತಿತ್ತು. ಇಂಥ ಪ್ರೀತಿಯ ಮಗನ ಮೇಲೂ ಕಬ್ಬಿಣದಷ್ಟು ಕಠಿನವಾಗಿದ್ದರು. ಪಾಠ ಪ್ರವಚನಗಳಲ್ಲಿ ಲೋಪದೋಷಗಳು ಕಂಡು ಬಂದಾಗ,

"ಚಲಮೇಲರಾ" ಎಂಬ ದರ್ಬಾರು ರಾಗದ ವರ್ಣ ಪಾಠವಾಗಿತ್ತು. ಶಿವರಾಮು ಸಾಧಕ ಮಾಡುತ್ತಿದ್ದ. ಪದ್ಮನಾಭಯ್ಯ ದೇವರ ಮನೆಯಲ್ಲಿ ಕೂತು ಪೂಜೆಮಾಡುತ್ತಿದ್ದರು. ಮಗ ಅಪಸ್ವರ ನುಡಿಯುತ್ತಿದ್ದದ್ದನ್ನು ಕೇಳಿ ಕೆರಳಿ, ಕುಳಿತ ಕಡೆಯಿಂದಲೇ ಹತ್ತಿರವಿದ್ದ ಗಂಧದ ಕೊರಡನ್ನು ತೆಗೆದು ರೊಯ್ಯನೆ ಮಗನ ಕಡೆ ಬೀರಿದರು. ಅನಂತರ ಒಂದು ವಾರ ಮಗನಿಗೆ ಬಾದಾಮಿ ತೈಲವನ್ನು ಮೈ ಕೈಗೆ ಹಚ್ಚಿ ಶುಶ್ರೂಷೆ ನಡೆಸಿದವರೂ ಅವರೇ!

ವೀಣೆ ಶೇಷಣ್ಣನವರಿಗೂ ಪದ್ಮನಾಭಯ್ಯನವರಿಗೂ ಸಂಗೀತಶಾಸ್ತ್ರ ವಿಷಯಗಳ ಬಗ್ಗೆ ಒಮ್ಮತವಿರಲಿಲ್ಲ. ಪದ್ಮನಾಭಯ್ಯ ಸಂಪ್ರದಾಯ ಶರಣರು. ಶಾಸ್ತ್ರ ಸಮ್ಮತವಲ್ಲದ ಸಂಗೀತ ಸಂಗೀತವೇ ಅಲ್ಲವೆಂಬ ಖಚಿತ ಅಭಿಪ್ರಾಯ ಅವರದ್ದು! ಕಾಲ ದೇಶ ವರ್ತಮಾನಗಳಿಗೆ ಅನುಗುಣವಾಗಿ ಸಂಗೀತವೂ ಪರಿವರ್ತನೆಹೊಂದುವುದು ಅತ್ಯಗತ್ಯ, ಎಂದೇ ರೂಪಿಸಲ್ಪಟ್ಟದ್ದು ಶಾಸ್ತ್ರನಿಯಮ, ಸಂಪ್ರದಾಯವನ್ನೇ ಎಂದೆಂದೂ ಅನುಸರಿಸಬೇಕೆಂದು ವಾದಿಸುವುದು ಸರಿಯಲ್ಲ—ಎಂಬುದು ಶೇಷಣ್ಣನವರ ಅಭಿಮತ. ಇದಲ್ಲದೇ, ಶೇಷಣ್ಣನವರು ಕೋಟೆಯ ಗುಂಪಿನವರು. ಪದ್ಮನಾಭಯ್ಯ ಅಗ್ರಹಾರದ ಗುಂಪಿನವರು. ಹೀಗಾಗಿ ಇವರಿಬ್ಬರ ಬಾಂಧವ್ಯ ಅಷ್ಟಾಗಿ ಮಧುರವಾಗಿರ ಲಿಲ್ಲ. ಅರಮನೆಯಲ್ಲಿ ಇವರು ಪ್ರಾಬಲ್ಯಕ್ಕೆ ಬಾರದೇ ಇದ್ದದ್ದೂ ಕೂಡ ಇದೇ ಕಾರಣದಿಂದಲೇ. ಪದ್ಮನಾಭಯ್ಯನವರು ಹೊರಗಡೆ ಸಂಚರಿಸಿ ವಿದ್ವತ್ ಪ್ರದರ್ಶನಮಾಡಲು ಪ್ರಯತ್ನಿಸಲೇ ಇಲ್ಲ. ಇದರ ಪರಿಣಾಮ ವಾಗಿ ಇವರ ಪಾಂಡಿತ್ಯವಾಹಿನಿ ಗುಪ್ತಗಾಮಿನಿಯಾಗಿಯೇ ಕೊನೆಯ ವರೆಗೂ ಉಳಿಯಿತು. ಉತ್ತಮ ಲಯಜ್ಞಾನ ಸಾಹಿತ್ಯ ಪಾಂಡಿತ್ಯಗಳು ಇವರು ರಚಿಸಿದ ಹಲವಾರು ಸ್ವರ ಜತಿಗಳಲ್ಲಿಯೂ ಪದ್ಮನಾಭ ಪಂಚರತ್ನ ಕೃತಿಗಳಲ್ಲಿಯೂ ಪ್ರತಿಬಿಂಬವಾಗಿವೆ.

ಸಂಗ್ರಹವಾಗಿ ಹೇಳಬೇಕಾದರೆ, ಪದ್ಮನಾಭಯ್ಯನವರು ಕೃತಯುಗದ ಮನುಷ್ಯರು. ನಿಷ್ಕಪಟಿಗಳು. ನಿರಾಡಂಬರಜೀವಿ. ಪ್ರಪಂಚ ವ್ಯವಹಾರ ಜ್ಞಾನ ಶೂನ್ಯವೆನ್ನಬಹುದು. ಇದಕ್ಕೊಂದು ದೃಷ್ಟಾಂತವಿದೆ. ನಾಮಾ ಗೋವಿಂದಶೆಟ್ಟಿ ಎಂಬಾತ ಮೈಸೂರಿನ ಗಣ್ಯ ವರ್ತಕರು. ಇವರ ತಾತ ನವರಿಗೂ ಪದ್ಮನಾಭಯ್ಯನವರಿಗೂ ವಿಶೇಷ ಪರಿಚಯ ಸ್ನೇಹಗಳಿದ್ದವು. ಪದ್ಮನಾಭಯ್ಯನವರಿಗೆ ಆಗಿಂದಾಗ್ಯೆ ಹಲ್ಲುನೋವು ಬರುತ್ತಿತ್ತು. ತಮ್ಮ

ನೋವನ್ನು ಶೆಟ್ಟರಲ್ಲಿ ತೋಡಿಕೊಂಡರು. ಶೆಟ್ಟರು ಒಂದು ತಮಾಷೆ ಮಾಡಿದರು. ಪದ್ಮನಾಭಯ್ಯನವರೇ! ನಿಮ್ಮ ಹಲ್ಲುನೋವಿಗೆ ಒಂದು ರಾಜ ಔಷಧಿ ಹೇಳ್ತೀನಿ. ಪುನಃ ನಿಮ್ಮ ಜನ್ಮವಿರುವವರೆಗೂ ತಲೆಹಾಕ ಬಾರದು ಈ ಹಲ್ಲಿನ ಬಾಧೆ. ಅಂಥ ಒಂದು ಔಷಧ ಹೇಳಿದರೆ ಮಾಡ್ತೀರ?" ಅಂತ ಕೇಳಿದರು. "ಏನದು ಶೆಟ್ಟರೆ?" "ನೋಡಿ, ಒಂದು ಹಿತ್ತಾಳೆ ಪಾತ್ರೆಯಲ್ಲಿ, ಗಟ್ಟಿಮೊಸರು ಹಾಕಿ, ಒಂದು ತಾಮ್ರದ ಬಳೆ ಅದರೊಳಗೆ ಇಟ್ಟು ಬಿಡಿ. ಒಂದು ರಾತ್ರಿಯೆಲ್ಲಾ ಬಳೆ ಮೊಸರಿನಲ್ಲೇ ಇರಲಿ. ಮಾರ ನೆಯ ದಿನ ಬೆಳಿಗ್ಗೆ ಬರೀ ಹೊಟ್ಟೇಲಿ ಅಷ್ಟು ಮೊಸರನ್ನೂ ಕುಡಿದುಬಿಡಿ. ನಿಮ್ಮ ಹೆಸರು ಹೇಳಿದವರಿಗೂ ಹಲ್ಲುನೋವು ಬರೋಲ್ಲ"–ಅಂದರು ಶೆಟ್ಟರು.

ಶೆಟ್ಟರು ಹೇಳಿದ ಉಪದೇಶವನ್ನು ಅಕ್ಷರಶಃ ಪರಿಪಾಲಿಸಿದರು ಪದ್ಮ ನಾಭಯ್ಯ. "ಮೊಸರಿನಲ್ಲಿ ತಾಮ್ರದ ಬಳೆ ಹಾಕಿದರೆ ಕಿಲಬುತ್ತಲ್ಲ! ಎಲ್ಲಾದರೂ ಅದನ್ನು ಕುಡಿಯೋದುಂಟೇ! ಯಾವ ಪುಣ್ಯಾತ್ಮ ನಿಮಗೆ ಹೇಳಿದ ಈ ಔಷಧಿಯನ್ನ" ಅಂತ ಬೊಬ್ಬೆಯಿಟ್ಟರು ವೆಂಕಮ್ಮ. "ಎದುರು ವಾದಿಸುತ್ತೀಯಾ? ಎಂದು ಅವರ ಹೆಂಡತಿಯ ಮೇಲೆ ತಿರುಗಿ ಬಿದ್ದರು. ಯತ್ನವಿಲ್ಲದೆ ಸುಮ್ಮನಿದ್ದರು ವೆಂಕಮ್ಮ. ಶೆಟ್ಟರು ಹೇಳಿದ್ದಂತೆ ಚಾಚೂ ತಪ್ಪದೆ ನಡೆದುಕೊಂಡರು ಪದ್ಮನಾಭಯ್ಯ. ಮಧ್ಯಾಹ್ನ ಹನ್ನೆರಡು ಘಂಟೆಯ ಹೊತ್ತಿಗೆ ಔಷಧದ ಪರಿಣಾಮ ವ್ಯಕ್ತವಾಯಿತು. ಪದ್ಮನಾಭಯ್ಯನವರಿಗೆ ಸ್ಮೃತಿ ತಪ್ಪಿತು, ಇತ್ತಲೋ, ಅತ್ತಲೋ–ಅನ್ನುವ ಭಯ ಪ್ರಾಪ್ತವಾ ಯಿತು. ಅಷ್ಟು ಹೊತ್ತಿಗೆ ವೆಂಕಮ್ಮನವರು ಸುಬ್ಬರಾಮಾವಧಾನಿಗಳಿಗೆ ಹೇಳಿ ಕಳುಹಿಸಿದರು. ಕೈಕಾಲು ಕಟ್ಟಿ ನಲ್ಲಿಯ ಕೆಳಗೆ ಕುಳ್ಳಿರಿಸಿ, ನೆತ್ತಿಯ ಮೇಲೆ ನಿಂಬೆ ಹಣ್ಣಿನ ರಸ ಉಜ್ಜಿದ ಬಳಿಕ ಪರಿಸ್ಥಿತಿ ಸುಧಾರಿಸಿತು! ಆದಾಗ್ಯೂ ಅವರ ಮೈ ಕೈಯೆಲ್ಲಾ ಬೊಕ್ಕೆಗಳಾದವು. ವಿಪರೀತ ಬಾಧೆ ಯನ್ನು ಅನುಭವಿಸಬೇಕಾಯಿತು. ಮೈನವೆ ಮಿತಿಮೀರಿದಾಗ ಹಂಚಿ ಬಕ್ಕರೆಯನ್ನೊ ಸಿಕ್ಕಟ್ಟಿಗೆಯನ್ನೊ ತೆಗೆದುಕೊಂಡು ತುರಿಸಿಕೊಳ್ಳುತ್ತಿದ್ದರು. ಅಷ್ಟು ನಯ ನಾಜೋಕು.

ಇದೇ ಹಲ್ಲುನೋವಿನ ಸಂದರ್ಭದಲ್ಲಿ ಪದ್ಮನಾಭಯ್ಯನವರು ಎಸಗಿದ ಮತ್ತೊಂದು ಘಟನೆ ಸ್ವಾರಸ್ಯವಾಗಿದೆ. ಪದ್ಮನಾಭಯ್ಯ ನರಸಿಂಹ ಸ್ವಾಮಿಯ ಭಕ್ತರು. ಆಹ್ನೀಕ ಪರರು, ಕರ್ಮಠರು. ಪ್ರತಿದಿನ ಕರಾವ

ಲಂಬನಸ್ತೋತ್ರ ಪಾರಾಯಣ ಮಾಡದೆಯೇ ಯಾವ ಕೆಲಸವನ್ನೂ ಪ್ರಾರಂಭಿಸುತ್ತಿರಲಿಲ್ಲ. ಒಂದು ದಿನ ಹಲ್ಲುನೋವು ತಡೆಯಲಾರದಷ್ಟು ಹೆಚ್ಚಾಯಿತು. "ಇಷ್ಟು ಶ್ರದ್ಧಾ ಭಕ್ತಿಯಿಂದ ದೇವರನ್ನಾರಾಧಿಸಿದರೂ ರೋಗ ಗುಣವಾಗಲಿಲ್ಲ ಎಂದು ಕೂಗಾಡಿ, ದೇವರ ಮನೆಯೊಳಕ್ಕೆ ನುಗ್ಗಿ ದೇವರ ಸಂಪುಟವನ್ನು ತೆಗೆದುಕೊಂಡು ಹೋಗಿ ಮನೆಯ ಹಿತ್ತಲಿನಲ್ಲಿ ಹಳ್ಳ ತೋಡಿ ಹೂಳಿಬಿಟ್ಟರು! ಸಂಜೆಯ ಹೊತ್ತಿಗೆ ನೋವು ಕೊಂಚ ಕಮ್ಮಿಯಾದ ಮೇಲೆ ದೇವರ ಮೇಲಿನ ಭಕ್ತಿಯೂ ಹಿಂತಿರುಗಿ ಬಂತು. ಸ್ನಾನಮಾಡಿ ಹೂತಿದ್ದ ದೇವರನ್ನು ಹೊರಕ್ಕೆ ತೆಗೆದು ವಿಶೇಷವಾಗಿ ಪೂಜೆಮಾಡಿ, ಮಾಡಿದ ಅಪರಾಧವನ್ನು ಮನ್ನಿಸಬೇಕೆಂದು ಬೇಡಿ ಕೊಂಡರು. 1900 ರಲ್ಲಿ ಪ್ಲೇಗ್ ದೇವತೆಯ ಕಠೋರವಾದ ದವಡೆಗೆ ಸಿಕ್ಕಿ ಜನ ನರಳಬೇಕಾಯಿತು. ದಿನಕ್ಕೆ ನೂರಾರು ಜನ ಬಲಿಯಾಗುತ್ತಿದ್ದರು. ದಸರಾ ಸಮಯ. ಪಟ್ಟದ ಆನೆ, ಪಟ್ಟದ ಕುದುರೆ ಪದ್ಧತಿಯ ಪ್ರಕಾರ ಅರಮನೆಯಿಂದ ಕೆರೆ ಏರಿಗೆ ಮೆರವಣಿಗೆಯಲ್ಲಿ ಹೊರಬಿದ್ದವು. ಮೆರವಣಿಗೆ ಮುಗಿಯುವವರೆಗೆ ಹೆಣಗಳು ರಸ್ತೆಗಳನ್ನು ದಾಟಲು ಅವಕಾಶವಿರಲಿಲ್ಲ. ಅರಮನೆಯ ಕೋಟೆಯ ಬಾಗಿಲಿನಿಂದ ದೊಡ್ಡಕೆರೆ ಏರಿಗೆ ಮೆರವಣಿಗೆ ತಲುಪಲು ಸುಮಾರು ಹದಿನೈದು, ಇಪ್ಪತ್ತು ನಿಮಿಷಗಳು ಹಿಡಿಯುತ್ತಿತ್ತು. ಇಷ್ಟು ಅಲ್ಪಾವಧಿಯಲ್ಲಿ ಅರಮನೆ ತೋಪುಖಾನೆಯಿಂದ ಹಿಡಿದು ನೂರು ಅಡಿ ರಸ್ತೆಯಲ್ಲಿರುವ ಅಂಬಳೆ ಅಣ್ಣಯ್ಯ ಪಂಡಿತರ ಹೆಣ್ಣುಮಕ್ಕಳ ಪಾಠ ಶಾಲೆಯವರೆಗೂ ಹೆಣದ ಸಾಲು ನಿಂತಿರುತ್ತಿತ್ತು. ಅಷ್ಟು ಪ್ರಚಂಡವಾದ ಉಪದ್ರವ! ಅಂಟು ಜಾಡ್ಯವೆಂಬ ಭೀತಿ ಬೇರೆ ಜನಕ್ಕೆ. ಮನೆಯಲ್ಲಿ ಒಬ್ಬರಿಗೆ ಪ್ಲೇಗು ತಗುಲಿದರೆ ಅವನನ್ನಲ್ಲಿಯೇ ಬಿಟ್ಟು ಉಳಿದವರೆಲ್ಲರೂ ಗೊತ್ತು ಗುರಿಯಿಲ್ಲದೆಯೇ ಪಲಾಯನ ಮಾಡುತ್ತಿದ್ದರು. ಈ ಭೀಕರ ಪ್ಲೇಗು ಮಾರಿಯ ಉರಿನಾಲಿಗೆಯ ಜ್ವಾಲೆ ಪದ್ಮನಾಭಯ್ಯನವರನ್ನೂ ಆವರಿಸಿಕೊಂಡಿತು. ಶಿಷ್ಯರಾದ ಸುಂದರ ಶಾಸ್ತ್ರಿಗಳೂ ಕೂಡ ಗುರುಗಳ ಹತ್ತಿರ ಸರಿಯಲು ಅಂಜುತ್ತಿದ್ದರು. ಅಂಟುಜಾಡ್ಯವೆಂಬ ಹೆದರಿಕೆಯಿಂದ ಮನೆಯವರೂ ಸಹ ರೋಗಿಯ ಬಳಿ ಸುಳಿಯುತ್ತಿರಲಿಲ್ಲ. ನನ್ನನ್ನೂ ಹತ್ತಿರ ಹೋಗದಂತೆ ತಡೆದರು. ಆದರೆ ಮನ ಒಡಂಬಡಲಿಲ್ಲ. ಜೀವದ ಮೇಲಿನ ಆಸೆಯನ್ನು ತೊರೆದು ಯಥಾಶಕ್ತಿ ಶುಶ್ರೂಷೆ ಮಾಡಿದೆ. ಆದರೂ ನಮ್ಮನ್ನಗಲಿದರು ಗುರುಗಳು.

# ಬೆಂಗಳೂರು ನಾಗರತ್ನಮ್ಮ

ಕಮಲಪುಷ್ಪ ಕೆಸರಿನಲ್ಲಿ ಹುಟ್ಟಿದ್ದೇ ಆದರೂ ಭಗವದರ್ಪಣಕ್ಕೆ ಯೋಗ್ಯವೇ ಹೌದು. ದೇವದಾಸಿಯರ ಕುಲದಲ್ಲಿ ಜನ್ಮತಾಳಿದಾಗ್ಯೂ ಗಾಂಭೀರ್ಯದ ಗಣಿಯಾಗಿ, ಗಾಯನ ನರ್ತನ ಮಣಿಯಾಗಿ, ವಿರಾಗಿಣಿಯಾಗಿ ಇಹಲೋಕ ಜೀವನದ ಸಾರ್ಥಕ್ಯತೆಯನ್ನು ಪಡೆದು ಕನ್ನಡನಾಡಿನ ಕಣ್ಮಣಿಯಂತಿದ್ದ ನಾಗರತಮ್ಮನನ್ನು ಪಡೆದ ನಮ್ಮ ನಾಡು ನಿಜಕ್ಕೂ ಭಾಗ್ಯದ ಬೀಡು. ರೂಪ, ವಿದ್ಯೆ, ಸಂಪತ್ತು ಈ ಮೂರೂ ಸರಿಸಮಾನವಾಗಿ ನಾಗರತ್ನಮ್ಮನಲ್ಲಿ ಮನೆಮಾಡಿಕೊಂಡಿದ್ದರೂ ಆಕೆ ವಿನಯ ನಿಧಿಯಾಗಿದ್ದರು. ವೀಣೆ ಸುಬ್ಬಣ್ಣನವರ ಮನೆಯಲ್ಲೇ ಆಕೆಯ ಪ್ರಥಮ ಪರಿಚಯ ನನಗಾದದ್ದು. ಶೇಷಣ್ಣ, ಸುಬ್ಬಣ್ಣ, ಕೃಷ್ಣಪ್ಪ ಮೊದಲಾದ ಹಿರಿಯ ವಿದ್ವಾಂಸರುಗಳೆದುರು ಆಳುದ್ದ ದೇಹವನ್ನು ಗೇಣುದ್ದ ಮಾಡಿಕೊಂಡು ಅವರ ಪಾದಗಳಿಗೆ ಸರ್ವಸ್ವವನ್ನೂ ಸಮರ್ಪಣೆ ಮಾಡಬಯಸುವಳೋ ಎಂಬ ಭಾವಭಂಗಿಯಲ್ಲಿ ನಿಲ್ಲುತ್ತಿದ್ದ ಆಕೆಯ ಆಕೃತಿ ಇಂದಿಗೂ ಕಣ್ಣಿಗೆ ಕಟ್ಟಿದಂತಿದೆ ನನಗೆ. ಹಿರಿಯರನ್ನು ಕಣ್ಣೆತ್ತಿಯೂ ಸಹ ನೋಡುತ್ತಿರಲಿಲ್ಲ ಆಕೆ. ಇಂಪಿನ ಕೊರಳಿನಿಂದ ಹೊರಬೀಳುತ್ತಿದ್ದ ಆಕೆಯ ಮಿತವಾದ ಮಾತು ಮುತ್ತಿಗಿಂತ ನಯ, ನಾಜೂಕು. ಆಕೆಯ ಸೌಂದರ್ಯರಾಶಿಯ ಹಿಂದಡಗಿದ್ದ ಅಪೂರ್ವ ಕಾಂತಿಯೊಂದು ನೋಟಗರಲ್ಲಿ ಪೂಜ್ಯಭಾವನೆಯನ್ನುಂಟುಮಾಡುತ್ತಿತ್ತು.

ನಂಜನಗೂಡಿನ ವಕೀಲ್ ಸುಬ್ಬರಾಯರ ಆಶ್ರಯದಲ್ಲಿ ಬೆಳದವರು ನಾಗರತ್ನಮ್ಮ, ಹಾಗೂ ಆಕೆಯ ತಾಯಿ. ಬಾಲ್ಯದಲ್ಲೇ ಹುಡುಗಿಯ ಕಲಾಕಿರಣಗಳನ್ನು ಕಂಡುಕೊಂಡ ವಕೀಲರು ಕಲಾಕುಸುಮವನ್ನು ವಿಕಾಸಗೊಳಿಸುವ ಉದ್ದೇಶದಿಂದ ಮೈಸೂರಿಗೆ ಅವರನ್ನು ಕರೆತಂದರು. ಬಿಡಾರಂ ಕೃಷ್ಣಪ್ಪ ಹಾಗೂ ಆಸ್ಥಾನ ಕವಿ ಗಿರಿಭಟ್ಟರ ತಮ್ಮಯ್ಯನವರಲ್ಲಿ ನಾಗರತ್ನಮ್ಮನ ವ್ಯಾಸಂಗ ಪ್ರಾರಂಭವಾಯಿತು. ಗಿರಿಭಟ್ಟರ ತಮ್ಮಯ್ಯನವರು ಸಂಗೀತ ಮತ್ತು ಸಾಹಿತ್ಯಗಳಲ್ಲಿ ಗಣ್ಯವಿದ್ವಾಂಸರು. ಮೈಸೂರು ಅರಮನೆಯ ಶಾಕುಂತಲ ನಾಟಕ ಸಭೆಯ ಶಿಕ್ಷಕರಾಗಿದ್ದರು. ಇವರ ಬಳಿ ಒಂದೆರಡು ವರ್ಷಗಳಕಾಲ ನಾಗರತ್ನಮ್ಮ ಸಂಗೀತ, ನರ್ತನ ಹಾಗೂ ಕನ್ನಡ ಸಾಹಿತ್ಯ ಅಧ್ಯಯನವನ್ನು ಮಾಡಿದರು. ಅಲ್ಲಿಂದ ಮುಂದೆ ಬೆಂಗ

ಳೂರಿನಲ್ಲಿದ್ದ ತನ್ನ ಸೋದರ ಮಾವಂದಿರಾದ ಪಿಟೀಲು ವೆಂಕಟಸಾಮಪ್ಪನವರಲ್ಲಿ ಸಂಗೀತಾಭ್ಯಾಸವನ್ನು ಮುಂದುವರೆಸಿದರು. ತಮ್ಮಯ್ಯನವರು ಹೊಸದಾಗಿ ಕಲಾಮೂರ್ತಿಯನ್ನೇನೂ ಕಡೆಯಬೇಕಾಗಿರಲಿಲ್ಲ. ದೈವದತ್ತವಾಗಿದ್ದ ಮೂರ್ತಿಗೆ ಶೃಂಗಾರಮಾಡುವ ಕೆಲಸಮಾತ್ರ ಉಳಿದಿತ್ತು ಅಷ್ಟೆ. ಆದ್ದರಿಂದಲೇ ನಾಗರತ್ನಮ್ಮನ ವಿದ್ಯಾರ್ಜನೆ ಹೂವಿನಸರ ಎತ್ತಿದಷ್ಟು ಹಗುರವಾಗಿ ಹಾಗೂ ತ್ವರಿತವಾಗಿ ಸಾಗಿತು. ವಿದ್ವಾಂಸರ ಮತ್ತು ರಸಿಕರ ಗೌರವಾದರಗಳಿಗೆ ಪಾತ್ರರಾದರು ನಾಗರತ್ನಮ್ಮ. ಪ್ರಭುಗಳ ಕೃಪಾಕಟಾಕ್ಷ ದೊರಕಲೂ ಹೆಚ್ಚುಕಾಲ ಬೇಕಾಗಲಿಲ್ಲ.

ನಾಗರತ್ನಮ್ಮನಿಗೆ ಇನ್ನೂ ಹೆಚ್ಚಿನ ಪಾಂಡಿತ್ಯವನ್ನು ಪಡೆಯಬೇಕೆಂಬ ಹಿರಿಯಾಸೆಯಾಗಿ ಮದ್ರಾಸಿಗೆ ಪ್ರಯಾಣ ಬೆಳೆಸಿದರು. ಪ್ರಖ್ಯಾತ ವಿದ್ವಾಂಸರುಗಳ ಕಛೇರಿಗಳನ್ನು ಕೇಳಿ ವಿಷಯ ಸಂಗ್ರಹಮಾಡಿ, ಸಂಗ್ರಹ ಮಾಡಿದ್ದನ್ನು ಸಾಧಿಸಿ, ತಮ್ಮ ವಿದ್ಯೆಯನ್ನು ಪರಿಪಕ್ವಮಾಡಿಕೊಂಡರು. ಸಂಗೀತಜ್ಞಾನ ಒಂದಕ್ಕೆ ಹತ್ತರಷ್ಟಾಯಿತು.

ನಾಗರತ್ನಮ್ಮನಿಗೆ ತ್ಯಾಗಯ್ಯನವರ ಕೃತಿಗಳೆಂದರೆ ಬಲು ಅಕ್ಕರೆ. ಸಾಹಿತ್ಯಭಾವವನ್ನು ಸಂಪೂರ್ಣವಾಗಿ ಗ್ರಹಿಸಿ, ಚಿತ್ತಾಕರ್ಷಕ ಶೈಲಿಯಲ್ಲಿ ಹಾಡುತ್ತಿದ್ದರು. ಅವರು ದೀಕ್ಷಿತರ ಕೃತಿಗಳನ್ನು ಹಾಡಿದ್ದೇ ವಿರಳ. ಒಮ್ಮೆ ಆಕೆಯ ಮಿತ್ರರೊಬ್ಬರು ಕೇಳಿದರು, ದೀಕ್ಷಿತರ ಕೀರ್ತನೆಗಳನ್ನು ಅಷ್ಟಾಗಿ ಹಾಡುವುದಿಲ್ಲವೇಕೆಂದು. “ದೀಕ್ಷಿತರ ಕೀರ್ತನೆಗಳನ್ನೂ ಸಾಹಿತ್ಯವನ್ನೂ ಅರ್ಥಮಾಡಿಕೊಂಡು, ಪದಗಳನ್ನೂ ಅಕ್ಷರಗಳನ್ನೂ ಸ್ಪಷ್ಟವಾಗಿ ಉಚ್ಚರಿಸುವುದು ಸುಲಭಸಾಧ್ಯವಲ್ಲ. ಪೂರ್ಣ ಸಾಹಿತ್ಯಜ್ಞಾನ ಅತ್ಯಾವಶ್ಯಕ. ಹೇಳಿಕೊಟ್ಟದ್ದನ್ನು ಗಿಳಿಯ ಪಾಠದಂತೆ ಹಾಡಿ ಒಪ್ಪಿಸುವುದು ಹೆಚ್ಚಿನದಲ್ಲ. ನನಗೆ ಸಂಸ್ಕೃತ ಭಾಷಾಪರಿಚಯ ಅಷ್ಟಾಗಿಲ್ಲ. ತಿಳಿಯದ ವಿಷಯಕ್ಕೆ ಕೈಹಾಕಿ, ಕೀರ್ತನೆಗೂ ಅದರ ಕರ್ತೃವಿಗೂ ದ್ರೋಹಮಾಡ ಬಯಸುವುದಿಲ್ಲ”—ಎಂದು ನಾಗರತ್ನಮ್ಮ ಪ್ರತ್ಯುತ್ತರವಿತ್ತರು. ಕನ್ನಡ ದೇವರನಾಮಗಳನ್ನೂ, ತ್ಯಾಗಯ್ಯನವರ ಕೀರ್ತನೆಗಳನ್ನೂ ಭಾವಗರ್ಭಿತವಾಗಿ ಹಾಡಿ ಜನಾದರಣೀಯವನ್ನಾಗಿ ಮಾಡಲು ಶ್ರಮಿಸಿದರು. ಮದ್ರಾಸಿನಲ್ಲೂ ಸಹ ನಾಗರತ್ನಮ್ಮನವರ ಹೆಸರು ಮೂಲೆ ಮೂಲೆಗೂ ಹಬ್ಬಿತು.

ಹೀಗಿರುವಲ್ಲೊಂದು ದಿನ ವಿಚಿತ್ರ ಪ್ರಸಂಗವೊಂದು ಜರುಗಿತು. ಅಂದು ತ್ಯಾಗಯ್ಯನರ ಆರಾಧನಾದಿನ. ನಾಗರತ್ನಮ್ಮ ಭಕ್ತಿಪುರಸ್ಸರದಿಂದ

ಅಯ್ಯನವರ ಪೂಜೆ ಕೈಗೊಂಡರು. ನಾಲ್ಕಾರು ಕೀರ್ತನೆಗಳನ್ನು ಹಾಡಿ ಗಾನ ಸೇವೆಯನ್ನು ಸಲ್ಲಿಸಿದರು. ರಾತ್ರಿ ಊಟಮಾಡದೇ ಪ್ರಸಾದರೂಪವಾದ ಹಾಲು ಹಣ್ಣನ್ನು ಮಾತ್ರ ಸೇವಿಸಿ ಮಲಗಿದರು. ಎಂದೂ ಇಲ್ಲದ ಪ್ರಶಾಂತತೆ, ಗಭೀರತೆಯೊಂದು ಅವರ ಮನವನ್ನಾವರಿಸಿತ್ತಂತೆ ಆ ದಿನ. ತ್ಯಾಗರಾಜರ ಪುಣ್ಯಜೀವನದ ಒಂದೊಂದು ಘಟನೆಯೂ ಕಣ್ಮುಂದೆ ಸುಳಿದು ನಾಗರತ್ನಮ್ಮನಿಗೆ ರೋಮಾಂಚನವಾಯಿತಂತೆ. ರಾತ್ರಿ ಸುಮಾರು ಒಂದು ಘಂಟೆ ಸಮಯ. ತೇಜಃಪುಂಜರಾದ ವೃದ್ಧರೊಬ್ಬರು ಬಂದು ನಾಗರತ್ನಮ್ಮನವರನ್ನು ನಿದ್ದೆಯಿಂದ ಎಬ್ಬಿಸಿದಂತಾಯಿತಂತೆ. "ತಾಯಿ, ನಿನ್ನ ಭಕ್ತಿಪೂಜೆಯಿಂದ ರಾಮಚಂದ್ರ ತೃಪ್ತನಾಗಿದ್ದಾನೆ. ತಿರುವೆಯ್ಯಾರಿನಲ್ಲಿ ತ್ಯಾಗರಾಜರ ಬೃಂದಾವನದ ಬಳಿ ಮಂಟಪವೊಂದನ್ನು ಕಟ್ಟಿಸಿ, ವರ್ಷವರ್ಷವೂ ಭಕ್ತಶ್ರೇಷ್ಠರು ಬಂದು ಸೇರಿ ರಾಮನಾಮ ಸಂಕೀರ್ತನವನ್ನು ಮಾಡಲು ಅವಕಾಶವನ್ನು ಕಲ್ಪಿಸಿ ಪುಣ್ಯಶಾಲಿನಿಯಾಗು", ಎಂದು ಹೇಳಿ ವ್ಯಕ್ತಿ ಅದೃಶ್ಯವಾಯಿತಂತೆ. ನಾಗರತ್ನಮ್ಮನಿಗೆ ಮೈ ಪುಳಕಿತವಾಯಿತು. ಈ ಮಹತ್ಕಾರ್ಯ ಸಾಧನೆಗಾಗಿ ತನ್ನ ಇಡೀ ಜೀವಮಾನವನ್ನೇ ಮುಡುಪಾಗಿಟ್ಟಳು ಆ ಮಹಾತಾಯಿ! ಮಾರನೆಯ ದಿನವೇ ಮದ್ರಾಸಿಗೆ ತೆರಳಿ ಸಂಬಂಧಪಟ್ಟ ಅಧಿಕಾರಿಗಳನ್ನೂ, ಪ್ರಮುಖರನ್ನೂ ಕಂಡು ಮಾತು ಕತೆ ನಡೆಸಿ ಪುಣ್ಯಕೆಲಸದ ಅಂಕುರಾರ್ಪಣ ಮಾಡಿದರು. ಕೆಲಸಕಾರ್ಯಗಳ ಮೇಲ್ವಿಚಾರಣೆಯನ್ನು ಖುದ್ದಾಗಿ ಪರಿಶೀಲಿಸುವ ಉದ್ದೇಶದಿಂದ ಮದ್ರಾಸಿನಲ್ಲಿಯೇ ನೆಲಸಿದರು.

ಬಿಡಾರಂ ಕೃಷ್ಣಪ್ಪನವರು ಮೊಟ್ಟಮೊದಲು ಮದ್ರಾಸಿಗೆ ಹೋಗಿ ಅಲ್ಲಿಯ ವಿದ್ವಜ್ಜನರ ಕಣ್ಣಿಗೆ ಬೀಳುವಂತಾದುದು ನಾಗರತ್ನಮ್ಮನವರ ಪ್ರಯತ್ನದಿಂದ. ತಾವು ಮದ್ರಾಸಿನಲ್ಲಿ ಬೆಲೆಬಾಳುವ ಮನೆಯೊಂದನ್ನು ಕಟ್ಟಿ ಗೃಹಪ್ರವೇಶದ ಸಂದರ್ಭದಲ್ಲಿ ಕೃಷ್ಣಪ್ಪನವರ ಸಂಗೀತವನ್ನು ಏರ್ಪಡಿಸಿದರು. "ಯಜಮಾನರಲ್ಲಿ ಒಂದು ಪುಟ್ಟಬಿನ್ನಹ. ಇವತ್ತಿನ ಕಛೇರಿಯಲ್ಲಿ ತೆಲುಗು, ತಮಿಳು ಕೀರ್ತನೆಗಳ ಸುದ್ದಿಯೇ ಇರಬಾರದು. ದಾಸರ ದೇವರನಾಮಗಳಿಂದಲೇ ಕಛೇರಿಯಾಗಬೇಕು. ಕನ್ನಡ ಕಲಾಭಂಡಾರ ಬರಿದಲ್ಲ. ಪುರಂದರದಾಸರ ಕೀರ್ತನೆಗಳನ್ನೂ ತ್ಯಾಗಯ್ಯನವರ ಕೀರ್ತನೆಗಳಂತೆಯೇ ರಸವತ್ತಾಗಿ ಹಾಡಲು ಸಾಧ್ಯ ಎಂಬಂಶವನ್ನು ಇಲ್ಲಿಯ ಜನರಿಗೆ ತಿಳಿಯಪಡಿಸಬೇಕು. ಇದು ನಿಮ್ಮಿಂದ ಮಾತ್ರ ಸಾಧ್ಯ. ದಯ

ಮಾಡಿ ನನ್ನ ಕೋರಿಕೆಯನ್ನು ಈಡೇರಿಸಬೇಕು," ಎಂದು ಕೃಷ್ಣಪ್ಪನವರನ್ನು ಕೇಳಿಕೊಂಡರು ನಾಗರತ್ನಮ್ಮ. ಅದರಂತೆಯೇ ಅಂದಿನ ಕಛೇರಿಯೆಲ್ಲವೂ ದೇವರನಾಮಗಳಿಂದಲೇ ಜರುಗಿತು. ರಾಗಾಲಾಪನೆ, ಸ್ವರ ಕಲ್ಪನೆ, ನೆರವಲ್ ಎಲ್ಲವೂ ಸಂಪ್ರದಾಯಾನುಸಾರವೇ ನಡೆಯಿತು. ಸಭಿಕರು ಆನಂದಪರವಶರಾದರು. ಕೃಷ್ಣಪ್ಪನವರನ್ನೂ ನಾಗರತ್ನಮ್ಮನವರನ್ನೂ ಮುಕ್ತಕಂಠದಿಂದ ಹೊಗಳಿದರು. ಕನ್ನಡಿಗರಲ್ಲೂ ತಮ್ಮದೇ ಆದ ಕಲಾನಿಧಿಯೊಂದಿದೆಯೆಂಬುದನ್ನು ಕಂಡುಕೊಂಡರು.

ಸ್ಥಳ ಪರಸ್ಥಳಗಳಲ್ಲಿ ನಾಗರತ್ನಮ್ಮನವರ ಹಲವಾರು ಕಛೇರಿಗಳಾದವು. ಸಂಗ್ರಹವಾದ ಧನವೆಲ್ಲ ಕನಸನ್ನು ನನಸಾಗಿಸಲು ಕೂಡಿಟ್ಟರು. ಹಗಲಿರುಳೂ ದೇವಬ್ರಾಹ್ಮಣರ ಪೂಜೆ, ರಾಮಾಯಣ ಶ್ರವಣ, ಸಂಗೀತಾರಾಧನೆ ನಡೆಸುತ್ತ ಕಾರ್ಯಾರಂಭದ ಸುದಿನವನ್ನು ಇದಿರುನೋಡುತ್ತಿದ್ದರು. ಕೊನೆಗೊಂದು ದಿನ ನಾಗರತ್ನಮ್ಮನಿಗೆ ಕಾಲಹರಣಮಾಡದೇ ಒಡನೆಯೇ ಕಟ್ಟಡವ ಕೆಲಸವನ್ನು ಪ್ರಾರಂಭಿಸಬೇಕೆಂಬ ಆಸೆಯಾಯಿತು. ಆದರೆ ಬೇಕಾಗಿದ್ದ ಮೊಬಲಗಿಗಿಂತ ಶೇಖರಿಸಲ್ಪಟ್ಟಿದ್ದ ಹಣ ಕಡಮೆಯಾಗಿತ್ತು. ಧೈರ್ಯಗೆಡಲಿಲ್ಲ ನಾಗಮ್ಮನವರು. ಜೀವನದಲ್ಲಿ ಅನುಭವಿಸಬೇಕಾಗಿದ್ದ ಸುಖಾಭಿಲಾಷೆಗಳನ್ನೆಲ್ಲ ತೊರೆದಿದ್ದರು ಆಕೆ. ಆಗಿದ್ದ ಒಂದೆರಡು ಮಕ್ಕಳೂ ಮೃತಿ ಹೊಂದಿದ್ದರಿಂದ ನಾಗರತ್ನಮ್ಮ ವಿರಕ್ತರಾಗಿದ್ದರು. ತಮ್ಮ ಮನೆಯನ್ನು ಮಾರಿ ಬಂದ ಮೂವತ್ತು ಸಹಸ್ರ ರೂಪಾಯಿಗಳನ್ನು ನಿಧಿಗೆ ಸೇರಿಸಿದರು. ಆಪಾದಮಸ್ತಕವೂ ಇದ್ದ ತಮ್ಮ ಅಮೂಲ್ಯ ಆಭರಣಗಳನ್ನೆಲ್ಲ ಮಾರಿ, ಬಂದ ಹಣವನ್ನು "ಕೃಷ್ಣಾರ್ಪಣ" ಎಂದರು. ತ್ಯಾಗರಾಜ ಕ್ಷೇತ್ರದಲ್ಲಿ ಕಟ್ಟಡದ ನಿರ್ಮಾಣಕಾರ್ಯಕ್ಕೆ ಪ್ರಾರಂಭವಾಯಿತು. ಭಕ್ತಳು ಪವಿತ್ರಮನಸ್ಸಿನಿಂದ ಪ್ರಾರಂಭಮಾಡಿದ ಪುಣ್ಯಕಾರ್ಯಕ್ಕೆ ಜನಸಹಾಯ ತಾನಾಗಿ ಒದಗಿ ಬಂತು. ಕಟ್ಟಡ ಮುಗಿದಂದು ನಾಗರತ್ನಮ್ಮನಿಗಾದ ಆನಂದ ಸಂಭ್ರಮಗಳಿಗೆ ತುದಿಮೊದಲಿರಲಿಲ್ಲ. "ಇನ್ನು ಯಾವ ಘಳಿಗೆಯಲ್ಲಿ ಬೇಕಾದರೂ ಪ್ರಾಣತ್ಯಾಗಮಾಡಲು ಸಿದ್ಧಳಿದ್ದೇನೆ," ಎಂದೆನ್ನುತ್ತಿದ್ದರು ನಾಗರತ್ನಮ್ಮ. ವರ್ಷ ವರ್ಷವೂ ದೇಶದ ನಾನಾ ಮೂಲೆಗಳಿಂದ ತಿರುವೆಯ್ಯಾರಿಗೆ ಬಂದು ಸೇರುವ ಭಕ್ತಾಗ್ರಣಿಗಳು ಇಂದಿಗೂ ನಾಗರತ್ನಮ್ಮನ ಪವಿತ್ರ ಜೀವನವನ್ನು ಕೃತಜ್ಞತೆಯಿಂದಲೂ ಗೌರವದಿಂದಲೂ ಸ್ಮರಿಸುತ್ತಾರೆ.

ಈ ಮಹತ್ಕಾರ್ಯ ಸಾಧನೆಯಾದ ಬಳಿಕ ನಾಗರತ್ನಮ್ಮ ಬೆಂಗಳೂರಿಗೊಮ್ಮೆ ಬಂದರು. ಆರ್ಕಾಟು ರಾಮಸ್ವಾಮಿ ಮೊದಲಿಯಾರ್ ಅವರ ದಿವಾನಗಿರಿಯಕಾಲ ಅದು. ಕನ್ನಡ ನುಡಿಯಮೇಲೆ, ಕನ್ನಡಿಗರ ಮೇಲೆ ನಾಗರತ್ನಮ್ಮನವರಿಗೆ ಬಲು ಅಭಿಮಾನ. ಕನ್ನಡಿಗರ ಹೆಸರಾಗಿ "ಮೈಸೂರು ಛತ್ರ "ವೊಂದನ್ನು ತಿರುವೆಯ್ಯಾರಿನಲ್ಲಿ ಕಟ್ಟಿ ವರ್ಷಂಪ್ರತಿ ಹತ್ತುಮಂದಿ ವಿದ್ಯಾರ್ಥಿಗಳಿಗೆ ಪ್ರೌಢಸಂಗೀತ ಶಿಕ್ಷಣ ದೊರೆಯುವಂತೆ ಏರ್ಪಡಿಸಬೇಕೆಂದು ಸಂಕಲ್ಪಿಸಿ ಬೆಂಗಳೂರಿಗೆ ಆಕೆ ಬಂದಿದ್ದರು. ಆಪ್ತ ಮಿತ್ರರಲ್ಲಿ ತಮ್ಮ ಉದ್ದೇಶವನ್ನು ತಿಳಿಯಪಡಿಸಿದರು. ಧನ ಸಂಗ್ರಹಕ್ಕಾಗಿ ಕಛೇರಿಗಳನ್ನು ಮಾಡಿದರು. ಸುಮಾರು ಆರು ಸಹಸ್ರರೂಪಾಯಿಗಳಷ್ಟು ಹಣವೊದಗಿತು. ನಾಗಮ್ಮನವರ ಮುಖ ಕಿರಿದಾಯಿತು. ಆಕೆಯ ಇಂಗಿತವನ್ನರಿತ ಚಿರಪರಿಚಿತರೊಬ್ಬರು ನಾಗರತ್ನಮ್ಮನವರನ್ನು ಪ್ರಶ್ನಿಸಿದರು. "ನೀವು ಪಟ್ಟ ಇಷ್ಟು ಶ್ರಮಕ್ಕೆ ಅಲ್ಪ ಪ್ರತಿಫಲ ದೊರಕಿದ್ದರಿಂದ ನಿಮ್ಮ ಮನಸ್ಸಿಗೆ ಬೇಸರವಾಗಿರುವುದು ಸಹಜ. ಮದ್ರಾಸಿನಲ್ಲೇ ನೀವಿಷ್ಟು ಪ್ರಯತ್ನಿಸಿದ್ದರೆ ಒಂದಕ್ಕೆ ನಾಲ್ಕರಷ್ಟು ಹಣ ಶೇಖರಣೆಯಾಗುತ್ತಿತ್ತಲ್ಲ" ಎಂದು. ನಾಗರತ್ನಮ್ಮನವರು ನಕ್ಕುನುಡಿದರು. "ಈ ಅಲ್ಪ ಆರು ಸಹಸ್ರ ರೂಪಾಯಿಗಳನ್ನು ಅರೆಕ್ಷಣದಲ್ಲಿ ಕೇವಲ ಒಬ್ಬ ಮದ್ರಾಸಿನ ಧನಿಕನಿಂದ ಪಡೆಯಬಲ್ಲೆ. ಆದರೆ ನನ್ನ ಉದ್ದೇಶವೇ ಬೇರೆ. ಕನ್ನಡಿಗರಿಗಾಗಿ ಕೈಗೊಂಡ ಕಾರ್ಯಕ್ಕೆ ಕನ್ನಡೇತರರ ಕೊಂಕಿರಬಾರದು," ಎಂದು. ತಾಯ್ನಾಡಿನ ಮೇಲೆ ಅಷ್ಟು ಮಮತೆ, ಹೆಮ್ಮೆ ಆಕೆಗೆ. ಮೈಸೂರು ಛತ್ರದ ಕಟ್ಟಡದ ಕೆಲಸ ಪೂರೈಸುವುದರೊಳಗಾಗಿ ನಾಗರತ್ನಮ್ಮನವರ ಭೌತಿಕ ದೇಹ ನಮ್ಮಿಂದ ಕಣ್ಮರೆಯಾಯಿತು. ಅವರು ಮೃತಿ ಹೊಂದುವ ಸಮಯಕ್ಕೆ ಸುಮಾರು ಎಂಭತ್ತು ವರ್ಷವಾಗಿತ್ತು.

ನಾಗರತ್ನಮ್ಮನವರದು ಕಟ್ಟುಬಿಕ್ಕಟ್ಟಿನ ಸಂಗೀತ. ಖಚಿತವಾದ ಲಯಜ್ಞಾನ. ಅವರ ಶಾರೀರದ ಒಂದು ಅಪೂರ್ವ ಲಕ್ಷಣವೆಂದರೆ ಹೆಂಗಸಿನ ಶಾರೀರದ ಮಾಧುರ್ಯ, ಗಂಡಸಿನ ಶಾರೀರದ ಗಾಂಭೀರ್ಯ ಎರಡೂ ಮಿಲನವಾಗಿದ್ದವು. ಸಂಗೀತ ಶಾಸ್ತ್ರಾಧ್ಯಯನದ ಜೊತೆಯಲ್ಲೇ ನಾಟ್ಯ, ಅಭಿನಯ ಶಾಸ್ತ್ರಗಳ ಪರಿಚಯವೂ ಸಾಗಿದ್ದರಿಂದ, ಆಕೆಯ ಸಂಗೀತ ಭಾವಭರಿತವಾಯಿತು. ನಾಗರತ್ನಮ್ಮನ ಕಛೇರಿಗಳಲ್ಲಿ ಸ್ವರ ಕಲ್ಪನೆಗಿಂತ ರಾಗಾಲಾಪನೆಗೆ ಪ್ರಾಮುಖ್ಯತೆ ಹೆಚ್ಚು. ಯದುಕುಲ

ಕಾಂಭೋಜಿಯನ್ನು ಹಾಡದೇ ಇದ್ದ ಕಛೇರಿಗಳೇ ಅಪರೂಪ. ಶ್ರೀರಾಮ ಜಯರಾಮ, ಎಂಬ ಆ ರಾಗದ ಕೃತಿಯನ್ನು ಬಲು ಸೊಗಸಾಗಿ ಅನ್ನು ತ್ತಿದ್ದರು. 'ನಿತ್ಯಕಲ್ಯಾಣಿ' ಎಂಬ ರಾಗಮಾಲಿಕಾ ವರ್ಣವನ್ನು ಜನ ಪ್ರಿಯವನ್ನಾಗಿ ಮಾಡಿದವರೇ ನಾಗರತ್ನಮ್ಮ. 'ಭಕ್ತಾಪಾಯ ಭುಜಂಗ ಗಾರುಡಮಣಿಃ', 'ಶತ್ರುಚ್ಛೇದೈಕ ಮತ್ರಂ,' ಇವೇ ಮೊದಲಾದ ಮುಕುಂದ ಮಾಲಾ ಶ್ಲೋಕಗಳನ್ನೂ ದೇವರನಾಮಗಳನ್ನೂ ಹಾಡುವುದರಲ್ಲಿ ನಾಗ ರತ್ನಮ್ಮನವರದೇ ಒಂದು ಶೈಲಿ, ವೈಖರಿ. ಸಂಗೀತದಲ್ಲಿ ಖಚಿತವಾದ ಪಾಂಡಿತ್ಯವಿದ್ದದ್ದರಿಂದ ವಿದ್ವಾಂಸರ ಯಾವ ಸವಾಲಿಗೂ ಹಿಂದೆ ಮುಂದೆ ನೋಡುತ್ತಿರಲಿಲ್ಲ.

ನಾಗರತ್ನಮ್ಮನವರ ಹಲವಾರು ಕಛೇರಿಗಳನ್ನು ಕೇಳುವ ಸುಯೋಗ ನನಗೆ ದೊರೆತಿದ್ದವು. ಜಡ್ಜಿ ನರಹರಿರಾಯರು, ಚೀಫ್ ಜಡ್ಜಿ ಚಂದ್ರ ಶೇಖರಯ್ಯನವರು, ಪುಟ್ಟಣ್ಣ ಶೆಟ್ಟರು ಇವರೇ ಮೊದಲಾದ ಕಲಾಭಿಜ್ಞರು ನಾಗರತ್ನಮ್ಮನವರ ಕಛೇರಿಗಳನ್ನು ಆಗಿಂದಾಗ್ಗೆ ಏರ್ಪಡಿಸಿ ಉತ್ತೇಜನ ವನ್ನು ನೀಡುತ್ತಿದ್ದರು. ವೀಣೆ ಸುಬ್ಬಣ್ಣನವರ ಮನೆಯಲ್ಲಿ ಆಕೆ ಅನೇಕ ಸಾರಿ ಹಾಡಿದ್ದರು. ಈ ಎಲ್ಲ ಸನ್ನಿವೇಶಗಳು ನನಗೆ ಜ್ಞಾಪಕವಿದ್ದಾಗ್ಯೂ ಮದ್ರಾಸಿನಲ್ಲಿ ನಾನೊಮ್ಮೆ ಅವರ ಮನೆಗೆ ಹೋಗಿದ್ದ ಸಂದರ್ಭ ಮಾತ್ರ ನನ್ನ ಮನಸ್ಸಿನಲ್ಲಿ ಕದಲದೇ ನಿಂತಿದೆ. ಬಲು ವಿಶ್ವಾಸದಿಂದ ನಾಗರತ್ನಮ್ಮ ನನ್ನನ್ನು ಬರಮಾಡಿಕೊಂಡರು. ಅವರು ವ್ಯಾಸಂಗಮಾಡುತ್ತಿದ್ದ ಕೊಠಡಿಗೆ ಹೋದೊಡನೆಯೇ ಮೂಲೆಯಲ್ಲಿ ಒರಗಿಸಿಟ್ಟಿದ್ದ ತಂಜಾವೂರು ತಂಬೂರಿ ಯೊಂದರ ಮೇಲೆ ನನ್ನ ದೃಷ್ಟಿಬಿತ್ತು. ನನ್ನ ಇಂಗಿತವನ್ನರಿತ ನಾಗ ರತ್ನಮ್ಮ ತಂಬೂರಿಯನ್ನು ನನ್ನ ಮುಂದಿಟ್ಟರು. ತಂಬೂರಿಯ ಬುರುಡೆ, ದಂಡಿ, ಬಿರಡೆಯನ್ನೊಳಗೊಂಡ ತುದಿ, ಹೀಗೆ ಮೂರು ಭಾಗಗಳನ್ನೂ ಬೇರೆ ಬೇರೆಯಾಗಿ ಮಾಡಿ, ಮತ್ತೆ ಒಂದುಗೂಡಿಸಿ ತೋರಿಸಿದರು. ಪರ ಸ್ಥಳಗಳಿಗೆ ಹೋಗುವಾಗ ಜೊತೆಯಲ್ಲಿ ತೆಗೆದುಕೊಂಡು ಹೋಗಲು ಅನು ಕೂಲವಾಗಿರಲೆಂದು ಈರೀತಿ ಮಾಡಿಸಿದ್ದೇನೆಂದರು. ಸೊಗಸಾದ ತಂಬೂರಿ. ನನ್ನ ಕೈಗೆ ತೆಗೆದುಕೊಂಡು ಶೃತಿಮಾಡಿದೆ. ಶುದ್ಧವಾದ ತುಂಬುನಾದವನ್ನು ಕೆಲನಿಮಿಷಗಳಕಾಲ ಇಬ್ಬರೂ ಕೇಳಿ ಆನಂದಿಸಿದೆವು. "ನಿಮ್ಮ ಹಾಡು ಗಾರಿಕೆಯನ್ನು ಕೇಳಿ ಬಹುದಿನಗಳಾದವು. ಸ್ವಲ್ಪ ಏನನ್ನಾದರೂ ಅನ್ನ ಬಹುದು" ಎಂದೆ. 'ಸೂರ್ಯನಿಗೆ ದೀಪೋತ್ಸವವೇ' ಎಂದರು.

" ಬಲು ದೊಡ್ಡ ಮಾತು " ಎಂದೆ. " ಸರಿ, ತಮ್ಮ ಚಿತ್ತ," ಎಂದು ನಾಗ ರತ್ನಮ್ಮ ಹಾಡಲುಪಕ್ರಮಿಸಿದರು. ಮೈಸೂರು ಸದಾಶಿವರಾಯರ ಕಮಾಚ್ ರಾಗದ ಕೀರ್ತನೆ, 'ಪರಮಾದ್ಭುತಮೈನ' ಎಂಬುದರಿಂದ ಅಂದಿನ ಸಂಗೀತ ಪ್ರಾರಂಭವಾಯಿತು. ಕೀರ್ತನೆಯೇ ಮುದ್ದಾದ ರಚನೆ. ನಾಗರತ್ನಮ್ಮ ನವರು ಸುವರ್ಣಪುಷ್ಪಕ್ಕೆ ಸುಗಂಧ ಸೇರಿದಂತೆ ಮನೋಹರವಾಗಿ ಹಾಡಿ ದರು. ಸದಾಶಿವರಾಯರು ಕೀರ್ತನೆಗಳನ್ನು ಹಾಡುವುದು ಅಷ್ಟು ಸುಲಭ ಸಾಧ್ಯವಲ್ಲ. ಶಿಸ್ತಿನ ಅಭ್ಯಾಸಬಲದಿಂದ ಮಾತ್ರ ಸಾಧ್ಯ. ನಾಗರತ್ನಮ್ಮ ನವರ ಅಂದಿನ ಹಾಡು ಪರಿಶುದ್ಧವಾಗಿತ್ತು, ಹೃದಯಂಗಮವಾಗಿತ್ತು.





ಸಂಗೀತಶಾಸ್ತ್ರ ವಿಶಾರದ, ಸಂಗೀತಕಲಾನಿಧಿ, ಟೈಗರ್ ವರದಾಚಾರ್ಯರು

# ಟೈಗರ್ ವರದಾಚಾರ್ಯರು

" ಗುರುಗಳೇ ! "

" .............. "

" ಗುರುಗಳೇ ! ಒಂದು ವಿಜ್ಞಾಪನೆ ತಮ್ಮಲ್ಲಿ. ತಾವು ಅಸಮಾಧಾನ ಮಾಡಿಕೊಳ್ಳದೇ ಇದ್ದ ಪಕ್ಷದಲ್ಲಿ ........... "

" ಈ ದ್ರಾವಿಡ ಪ್ರಾಣಾಯಾಮ ಬೇಕಿಲ್ಲ. ವಿಷಯ ಏನು ಅನ್ನುವುದನ್ನ ನೇರವಾಗಿ, ಸಂಕೋಚವಿಲ್ಲದೆ ಹೇಳಿಬಿಡಬಹುದಲ್ಲ ! "

" ತಾವು ಹಾಕಿಕೊಂಡಿರುವ ಟೋಪಿ ತಮಗೆ ಅಷ್ಟಾಗಿ ಒಪ್ಪುವುದಿಲ್ಲ ಗುರುಗಳೇ. ದಯವಿಟ್ಟು ಅದನ್ನು ತೆಗೆದುಬಿಡೋಣವಾಗಲಿ. "

" ಇದನ್ನು ಹೇಳುವುದಕ್ಕೆ ಇಷ್ಟು ಮೀನ ಮೇಷ ಎಣಿಸುತ್ತಿದ್ದೆಯಾ! ಒಳ್ಳೆಯ ಭೂಪತಿ ನೀನು ! ಅಲ್ಲಯ್ಯ, ಈ ತಲೆಯಮೇಲೆ ಆ ಸಾಕ್ಷಾತ್ ದೇವೇಂದ್ರನ ಸುವರ್ಣಖಚಿತ ಕಿರೀಟವನ್ನೇ ತಂದಿಟ್ಟರೂ ಇಷ್ಟೇನೆ ! ಬ್ರಹ್ಮಸೃಷ್ಟಿಯೇ ಹಾಗಿರುವಾಗ, ಪಾಪ, ಆ ಟೋಪಿಯ ತಪ್ಪೇನಿದೆ ? ಅವರಿವರು ಟೋಪಿ ಹಾಕುವುದಕ್ಕೆ ಮುಂಚೆಯೇ ನಾವೇ ಟೋಪಿ ಹಾಕಿಕೊಳ್ಳುವುದು ಮೇಲಲ್ಲವೇ ? ಇದ್ದುಗೊಂಡು ಹೋಗಲಿ ಬಿಡು. "

ವರದಾಚಾರ್ಯರ ಸ್ಥೂಲಕಾಯದ ಮೇಲೆ ಆ ಪುಟ್ಟ ಟೋಪಿ ವಿಚಿತ್ರವಾಗಿ ಕಾಣಿಸುತ್ತಿತ್ತು. ಎಲ್ಲರ ತುಟಿಗಳ ಮೇಲೂ ನಗೆ ಮೂಡಿಸುತ್ತಿತ್ತು. ವರದಾಚಾರ್ಯರಿಗೆ ಈ ಸಂಗತಿ ತಿಳಿಯದೇ ಇರಲಿಲ್ಲ. ಸ್ವಯಂ ರಸಿಕರು, ಹಾಸ್ಯ ಪ್ರಿಯರು; ತಮ್ಮನ್ನು ತಾವೇ ಹಾಸ್ಯ ಮಾಡಿಕೊಳ್ಳುವುದಕ್ಕೂ ಹಿಂದು ಮುಂದೆ ನೋಡುತ್ತಿರಲಿಲ್ಲ. ಶಿಷ್ಯನನ್ನು ಕೆಣಕಿ ವಿನೋದ ಹೊಂದಬೇಕೆಂಬ ಉದ್ದೇಶದಿಂದ, ಹಿಡಿದ ಪಟ್ಟನ್ನು ಬಿಡದೆ, ಟೋಪಿಗೆ ತಲೆಯಮೇಲೆ ಸ್ಥಿರವಾದ ಸ್ಥಾನವನ್ನು ಕಲ್ಪಿಸಿದ್ದರು. ವರದಾಚಾರ್ಯರ ಶಿಷ್ಯರಿಗೂ ಮಿತ್ರರಿಗೂ ಏನೂ ತೋಚದಂತಾಗಿ ನನ್ನಲ್ಲಿ ಬಂದು ತಮ್ಮ ಸಂಕಟವನ್ನು ತೋಡಿಕೊಂಡರು. " ನೀವು ಅವರಿಗೆ ಪರಮ ಮಿತ್ರರು. ನಿಮ್ಮ ಮಾತಿಗೆ ಅವರು ಎಂದೂ ಪ್ರತಿ ಹೇಳುವುದಿಲ್ಲ. ಹೇಗಾದರೂ ಮಾಡಿ ಆ ಟೋಪಿಯನ್ನು ಅವರಿಂದ ಬೇರ್ಪಡಿಸಿ ಪುಣ್ಯ ಕಟ್ಟಿಕೊಳ್ಳಿ " ಎಂದರು. " ನೋಡೋಣ, ದೇವರಿದ್ದಾನೆ " ಎಂದುಕೊಂಡೆ.

ಒಂದು ಸಂಜೆ ಸುಮಾರು ಏಳು ಘಂಟೆಯ ಸಮಯ. ನನ್ನ ಸ್ನೇಹಿತರ ಒಂದು ಸಣ್ಣ ಕೂಟ ಸೇರಿತ್ತು ನನ್ನ ಮನೆಯಲ್ಲಿ. ಅವರ ಅಪೇಕ್ಷೆಯ ಮೇರೆ ಸ್ವಲ್ಪ ಕಾಂಬೋಧಿ ರಾಗಾಲಾಪನೆಮಾಡಿ ಮಧ್ಯಮ ಕಾಲವನ್ನು ಹಾಡುತ್ತಿದ್ದೆ. ಆ ವೇಳೆಗೆ ಸರಿಯಾಗಿ ಟೋಪಿಯ ಸಮೇತ ವರದಾಚಾರ್ಯರು ಆಗಮಿಸಿದರು! ಹಾಡುವುದನ್ನು ನಿಲ್ಲಿಸಿದೆ. "ಅಣ್ಣ! ನಾ ಮಾಡಿದ ಅನ್ಯಾಯವೇನು? ನನ್ನ ಕಿವಿಗೂ ಸ್ವಲ್ಪ ಹಾಕಿ ನಿಮ್ಮ ಸಂಗೀತವನ್ನು" ಎಂದು ಬಲವಂತ ಮಾಡಿದರು. ಸುಮಾರು ಎಂಟೂವರೆ ಘಂಟೆಯವರೆಗೂ ಹಾಡಿದೆ. ಬ್ರಹ್ಮಾನಂದವಾಯಿತು ಅಣ್ಣ. ಏನು ಕೊಡಲಿ ನಿಮ್ಮ ಈ ಭವ್ಯವಾದ ಸಂಗೀತಕ್ಕೆ?" ಎಂದರು. ಇದೇ ಸರಿಯಾದ ಸಮಯವೆಂದರಿತು, "ನಾ ಕೇಳಿದ್ದನ್ನು ಇಲ್ಲ ಎನ್ನಬಾರದು ನೀವು" ಎಂದೆ. "ಏನು ಬೇಕು ಹೇಳಿ" ಅಂದರು. "ನಿಮ್ಮ ಆ ಟೋಪಿಯನ್ನು ದಯಮಾಡಿ ಅನುಗ್ರಹಿಸಿ" ಎಂದೆ. ಎಲ್ಲರೂ ಬಿದ್ದು ಬಿದ್ದು ನಗಲಾರಂಭಿಸಿದರು. ಬಿಡುಗಡೆ ಹೊಂದಿದ ಆ ಟೋಪಿಗೂ ಪರಮಾನಂದವಾಗಿದ್ದಿರಬೇಕು!

ಪ್ರಪಂಚದಲ್ಲಿ ಗೋಮುಖ ವ್ಯಾಘ್ರಗಳು ಸಾಮಾನ್ಯ. ಆದರೆ ವ್ಯಾಘ್ರಮುಖ ಗೋವುಗಳು ಅತಿವಿರಳ. ವರದಾಚಾರ್ಯರನ್ನು 'ಟೈಗರ್' ಎಂದು ಕರೆಯುವುದು ವಾಡಿಕೆಯಾಗಿತ್ತು. ಅವರ ಆಕೃತಿ, ಅವರ ನಡಿಗೆ ಮತ್ತು ಹಾಡುವಾಗ ಅವರು ಮಾಡುತ್ತಿದ್ದ ಅಭ್ಯಾಸಬಲದ ಕೆಲವು ಅಂಗವಿನ್ಯಾಸಗಳಿಂದ ಜನ ಅವರನ್ನು 'ಟೈಗರ್' ಎಂದು ಸಂಬೋಧಿಸುತ್ತಬಂದರು. ವರದಾಚಾರ್ಯರಿಗೆ ಅದೂ ಒಂದು ವಿನೋದವೆನ್ನಿಸಿತು. 'ಟೈಗರ್' ಎಂಬುದರ ಜೊತೆಗೆ 'ಲರ್ಯ' ಎಂದೂ ಸೇರಿಸಿ, 'ಟೈಗರ್-ಲರ್ಯ ವರದಾಚಾರ್ಯ' ಎಂದು ತಮ್ಮ ಪತ್ರವ್ಯವಹಾರದ ಪುಸ್ತಕದಲ್ಲಿ ಅಚ್ಚುಹಾಕಿಸಿ, ಹಾಸ್ಯದ ಹೊನಲಿನಲ್ಲಿ ಜನರ ಜೊತೆಗೆ ತಾವೂ ಸೇರಿಕೊಂಡರು! ವಾಸ್ತವವಾಗಿ ವರದಾಚಾರ್ಯರ ಹಾಡುಗಾರಿಕೆಯಲ್ಲಿ ಗಂಡುಹುಲಿಯ ಠೀವಿಯಿತ್ತು, ಗಾಂಭೀರ್ಯವಿತ್ತು. ಆ ದೃಷ್ಟಿಯಿಂದ 'ಟೈಗರ್' ಎಂಬ ಅಡ್ಡ ಹೆಸರು ಅವರಿಗೆ ಒಪ್ಪುತ್ತಿತ್ತು. ಎಳೆಗೂಸಿನಂತಹ ತಿಳಿ ಹೃದಯ ಅವರದ್ದು. ತೆರೆದ ಹೃದಯದಲ್ಲಿ ಯಾವ ಮುಚ್ಚುಮರೆಗೂ ಎಡೆ

ಯಿರಲಿಲ್ಲ. ಬಲು ಉದಾರ ಸ್ವಭಾವದವರು. ಇತರರು ಹೂಡುತ್ತಿದ್ದ ಕಪಟ ಮತ್ತು ಕುತಂತ್ರ ಜಾಲಗಳನ್ನು ನಿಮಿಷಾರ್ಧದಲ್ಲಿ ಪತ್ತೆಹಚ್ಚುವ ಸೂಕ್ಷ್ಮ ಬುದ್ಧಿ ಅವರದ್ದು. ಆದರೆ ತಾವು ಮಾತ್ರ ಎಂದೂ ತಮ್ಮ ಬುದ್ಧಿಯನ್ನು ಆ ಕುಮಾರ್ಗಗಳಲ್ಲಿ ಹರಿಯಬಿಡುತ್ತಿರಲಿಲ್ಲ. ಅಸೂಯಾಪರರಲ್ಲ. ಸಣ್ಣದರಲ್ಲೂ ದೊಡ್ಡದನ್ನು ಕಾಣುವ ದೊಡ್ಡಗುಣವಿತ್ತು ಅವರಲ್ಲಿ.

ವರದಾಚಾರ್ಯರಿಗೆ ಶಾರೀರ ಸೌಲಭ್ಯವಿರಲಿಲ್ಲ. ಆದಕಾರಣ, ಸಮುದ್ರದಷ್ಟು ವಿಶಾಲವಾದ ಅವರ ಭಾವನಾವಿಶೇಷಗಳಲ್ಲಿ ಕೆಲವೇ ಕೆಲವು ಬಯಲಾಗುತ್ತಿದ್ದವು. ಆ ಕೆಲವೆಂದರೆ ಆಣಿಮುತ್ತುಗಳೇ ಸರಿ! ಅವರ ಬಾಯಿಂದ ಹೊರಬೀಳುತ್ತಿದ್ದ ರಾಗಗಳ ಹಾಗೂ ಸ್ವರಗಳ ಚುಟಕಗಳಲ್ಲಿ ಕಲಾಕೌಶಲ್ಯ ತುಂಬಿ ತುಳುಕಾಡುತ್ತಿತ್ತು. ತಮ್ಮ ಅಪಾರವಾದ ಮನೋಧರ್ಮವನ್ನು ಹೊರಹೊಮ್ಮಲು ಅಡಚಣೆಮಾಡುತ್ತಿದ್ದ ತಮ್ಮ ಶಾರೀರವನ್ನು ಶಪಿಸುತ್ತಿದ್ದರು. ಹಾಡುವ ಮುನ್ನ ತಕತಕನೆ ಕುದಿಯುತ್ತಿರುವ ನೀರನ್ನು ಗಂಟಲಿಗೆ ಸುರಿದುಕೊಳ್ಳುತ್ತಿದ್ದರು! ಏನು ಮಾಡಿದರೂ ಶಾರೀರ ಹತೋಟಿಗೆ ಬರುತ್ತಿರಲಿಲ್ಲ. "ಜನ್ಮಾಂತರದ ಪಾಪಕರ್ಮದ ಫಲ" ಎಂದು ತಮ್ಮನ್ನು ತಾವೇ ನಿಂದಿಸಿಕೊಳ್ಳುತ್ತಿದ್ದರು. "ತಂಬೂರಿಯ ಶ್ರುತಿ ಇಟ್ಟುಕೊಂಡು ಹಾಡಿದ್ದೇ ಅಪರೂಪ. ಕೂತಲ್ಲಿ ನಿಂತಲ್ಲಿ ತೋರಿದ್ದನ್ನು ತೋಚಿದಹಾಗೆ ಹಾಡುತ್ತ ಬಂದೆ, ಅಣ್ಣ. ಈಗ ನೋಡಿ ಅದರ ಪರಿಣಾಮವನ್ನು. ತಂಬೂರಿ ಹೇಳಿದಹಾಗೆ ಶಾರೀರ ಕೇಳುವುದಿರಲಿ; ಶಾರೀರಕ್ಕೆ ತಂಬೂರಿಯನ್ನು ಸರಿಹೊಂದಿಸುವ ಪ್ರಸಂಗ ಬಂದಿದೆ" ಎನ್ನುತ್ತಿದ್ದರು. ವರದಾಚಾರ್ಯರ ಸಂಗೀತದ ಸವಿಯನ್ನನುಭವಿಸುವುದು ಎಲ್ಲರ ಪಾಲಿಗೂ ಬಂದದ್ದಲ್ಲ. ಹುಚ್ಚು ಹೊಳೆಯಂತೆ ಅವರ ಸಂಗೀತ. ಹತ್ತಾರು ಕಛೇರಿಗಳನ್ನು ತಾಳ್ಮೆಯಿಂದ ಕೇಳಿದರೆ ಎಂದೋ ಒಂದು ಬಾರಿ ಅವರ ಅನ್ಯಾದೃಶವಾದ ಪಾಂಡಿತ್ಯ ಪ್ರತಿಭೆಯ ಅನುಭವ ದೊರೆಯುತ್ತಿತ್ತು! ನಿಜವಾಗಿಯೂ ಅದು ದೇವಯೋಗ್ಯವಾದ ಸಂಗೀತವೇ ಆಗಿರುತ್ತಿತ್ತು. ಈ ಕಾರಣದಿಂದಾಗಿ ವರದಾಚಾರ್ಯರ ಸಂಗೀತದ ಹಿರಿಮೆ ಜನಸಾಮಾನ್ಯಕ್ಕೆ ಸಕಾಲದಲ್ಲಿ ಅಭಿವ್ಯಕ್ತವಾಗಲಿಲ್ಲ. ಬಹುಕಾಲ ವರದಾಚಾರ್ಯರು ಅಜ್ಞಾತವಾಸದಲ್ಲಿಯೇ ಕಳೆಯಬೇಕಾಯಿತು.

"ಮೈಸೂರನ್ನು ಬಿಟ್ಟು ಬರುವುದಿಲ್ಲವೆಂದು ಭೀಷ್ಮಪ್ರತಿಜ್ಞೆ ಮಾಡಿರುವರೇನು? ನನಗೋಸ್ಕರವಾದರೂ ಸ್ವಲ್ಪಕಾಲ ಮದ್ರಾಸಿಗೆ ಬಂದಿರ

ಬಾರದೇ ?" ಎಂದು ಲೆಕ್ಕವಿಲ್ಲದಷ್ಟು ಸಾರಿ ನನಗೆ ಹೇಳುತ್ತಿದ್ದರು. ಕೊನೆ ಕೊನೆಗಂತೂ ನಿಷ್ಠುರದ ನುಡಿಗಳನ್ನೇ ಆಡುತ್ತಿದ್ದರು. "ನಿನ್ನ ಹಣೆಯ ಬರಹಕ್ಕೆ ಯಾರೇನು ಮಾಡಾರು ?" ಎಂದು ಸಹ ನನ್ನನ್ನು ಮೂದಲಿಸಿದರು. ಈಗ ನಾನು ಮದ್ರಾಸಿನಲ್ಲಿ ನೆಲೆಸಲು ಬಹುಮಟ್ಟಿಗೆ ಕಾರಣರಾದವರೆಂದರೆ ಟೈಗರ್ ಅವರು. ಈಗ್ಗೆ ಕೆಲವು ವರ್ಷಗಳ ಹಿಂದೆ, ಕಲಾಕ್ಷೇತ್ರದಲ್ಲಿ ಏರ್ಪಡಿಸಿದ್ದ ಸಂಗೀತೋತ್ಸವವೊಂದರಲ್ಲಿ ಭಾಗವಹಿಸಲು ನನಗೊಂದು ಆಹ್ವಾನ ಬಂದಿತು. ಇದು ವರದಾಚಾರ್ಯರ ಕೈವಾಡವೇ ಎಂಬುದು ಕ್ಷಣಮಾತ್ರದಲ್ಲಿ ನನಗೆ ವಿಶದವಾಯಿತು. ಆಹ್ವಾನವನ್ನು ಅಂಗೀಕರಿಸಿ ಮದ್ರಾಸಿಗೆ ನಾನು ಹೋದಾಗ್ಗೆ ಅವರಿಗಾದ ಆನಂದಾಶ್ಚರ್ಯಗಳು ಅಷ್ಟಿಷ್ಟಲ್ಲ. ಒಡಹುಟ್ಟಿದವರಲ್ಲೂ ಅಷ್ಟು ಅನ್ಯೋನ್ಯ ಪ್ರೀತಿ ವಿಶ್ವಾಸಗಳು ಇರುವವೇ ಎಂಬ ಸಂದೇಹ ನನ್ನಲ್ಲಿ ಉದ್ಭವಿಸಿತು. ವರದಾಚಾರ್ಯರನ್ನು ಭೇಟಿಮಾಡಲು ನಾನು ಕಲಾಕ್ಷೇತ್ರಕ್ಕೆ ಹೋದಾಗ ಮಧ್ಯಾಹ್ನ ಸುಮಾರು ನಾಲ್ಕು ಘಂಟೆಯ ಸಮಯವಿರಬಹುದು. ವರದಾಚಾರ್ಯರು ಶ್ರೀಮತಿ ರುಕ್ಮಿಣಿದೇವಿಯವರಿಗೆ ಯಾವುದೋ ರಾಗ ಲಕ್ಷಣಗಳನ್ನು ಉದಾಹರಣ ಪೂರ್ವಕವಾಗಿ ತಿಳಿಸುತ್ತಿದ್ದರು. ನಾನು ಬಂದ ಸಂಗತಿಯನ್ನು ಕಲಾ ಕ್ಷೇತ್ರದ ಅಧಿಕಾರ ವರ್ಗದವರ ಪೈಕಿ ಯಾರೋ ಅವರ ಕಿವಿಗೆ ಹಾಕಿದರು. ಪಾಠಪ್ರವಚನಗಳಿಗೆಲ್ಲ ಒಡನೆಯೇ ಪೂರ್ಣವಿರಾಮವಿತ್ತು, ದಡಬಡನೆ ಎದ್ದು ಹೊರಗೆ ಬಂದು, ದೀರ್ಘದಂಡ ಪ್ರಣಾಮಮಾಡಿ ಬಾಚಿ ತಬ್ಬಿಕೊಂಡು, 'ಅಣ್ಣ ಇವತ್ತು ನಮ್ಮಗಳ ಭಾಗ್ಯೋದಯವಾಯಿತು ! ಈಗಲಾದರೂ ಈ ಪಾಮರನ ಮೇಲೆ ಕರುಣೆ ಬಂತಲ್ಲ' ಎಂದು ಮನಕರಗುವಂತೆ ನುಡಿದರು. ಹೃದಯ ತುಂಬಿ ಬಂದದ್ದರಿಂದ ನನ್ನ ಬಾಯಲ್ಲಿ ಮಾತೇ ಹೊರಡಲಿಲ್ಲ. "ಎಂತಹ ಘನವಿದ್ವಾಂಸರಲ್ಲಿ ಎಂತಹ ಸರಳಮನಸ್ಸು !" ಎಂದುಕೊಂಡೆ. ಕಣ್ಣಂಚಿನ ಹನಿಗಳಿಂದ ಕೃತಜ್ಞತೆಯನ್ನು ಸೂಚಿಸಿದೆ. ಬಹುಕಾಲದ ಪ್ರಯತ್ನದ ಫಲವಾಗಿ ಅಮೃತ ಪಾತ್ರೆಯನ್ನು ನಿಮ್ಮ ಮುಂದೆ ತಂದಿಟ್ಟಿರುವೆ. ಅದನ್ನು ದಕ್ಕಿಸಿಕೊಳ್ಳುವುದೂ ಬಿಡುವುದೂ ನಿಮ್ಮ ಪ್ರಯತ್ನ, ಜವಾಬ್ದಾರಿ" ಎಂದರು. ಕಲಾಕ್ಷೇತ್ರದಲ್ಲಿದ್ದ ಪ್ರತಿಯೊಬ್ಬ ವಿದ್ಯಾರ್ಥಿ ವಿದ್ಯಾರ್ಥಿನಿಯನ್ನೂ ಅಧಿಕಾರಿಗಳನ್ನೂ ಹೇಳಿ ಕರೆಸಿ, ನಮಸ್ಕಾರಮಾಡಿಸಿ, ಅವರಿಗೆ ಪರಿಚಯ ಮಾಡಿಕೊಡುವ ನೆಪದಲ್ಲಿ, ನನ್ನ ಬಗ್ಗೆ ನನ್ನ ಯೋಗ್ಯತೆಗೆ ಮೀರಿದ ನುಡಿಗಳನ್ನಾಡಿದರು. ಅವರಲ್ಲಿ ಎಷ್ಟು

ಅಂಗಲಾಚಿ ಬೇಡಿದಾಗ್ಯೂ ಅವರ ಉಪಮಾನ ಉಪಮೇಯುಗಳ ಪ್ರವಾಹ ತಡೆಯಿಲ್ಲದೆ ಸಾಗಿತು. ಯತ್ನವಿಲ್ಲದೆಯೇ ಕಲಾಕ್ಷೇತ್ರವನ್ನು ಬಿಟ್ಟು ಸಂಕೋಚದಿಂದ ಮನೆಗೆ ಹಿಂತಿರುಗಿದೆ.

ಮಾರನೆಯ ದಿನವೇ ಸಂಗೀತೋತ್ಸವ ಪ್ರಾರಂಭವಾಯಿತು. ಟೈಗರ್ ಅವರದೇ ಮೊದಲನೆಯ ಕಛೇರಿ. ಕಛೇರಿ ಜರುಗಬೇಕಾಗಿದ್ದ ಆ ಸುಂದರ ಕಲಾಭವನದಲ್ಲಿನ ಏರ್ಪಾಡುಗಳು ಅತ್ಯುತ್ತಮವಾಗಿದ್ದವು. ಎಂತಹ ಅರಸಿಕನಿಗೂ ರಸಿಕತೆಯನ್ನುಂಟುಮಾಡುವಷ್ಟು ಸೊಗಸಾಗಿದ್ದವು. ತುಂಬಿದ ಸಭೆಯಾಗಿದ್ದರೂ ಸೂಜಿ ಬಿದ್ದರೆ ಕೇಳುವಷ್ಟು ನಿಶ್ಶಬ್ದತೆ. ವೇದಿಕೆಯ ಮುಂದೆ ಕುಳಿತಿದ್ದ ಪ್ರತಿಯೊಬ್ಬ ವಿದ್ಯಾರ್ಥಿ ವಿದ್ಯಾರ್ಥಿನಿಯ ಮುಂದೆಯೂ ಒಂದೊಂದು ಓಟುಮೇಜ ಮತ್ತು ಬರವಣಿಗೆಯ ಸಲಕರಣೆಗಳು. " ಈ ಏರ್ಪಾಡಿನ ಉದ್ದೇಶವೇನು? " ಎಂದು ಕೇಳಿದೆ. ಕಛೇರಿಯ ಬಗ್ಗೆ ವಿದ್ಯಾರ್ಥಿಗಳು ತಮ್ಮ ತಮ್ಮ ಅಭಿಪ್ರಾಯಗಳನ್ನೂ ತೋರಿಬಂದ ವಿಶೇಷಾಂಶಗಳನ್ನೂ ತಲೆದೋರಿದ ಸಂದೇಹಗಳನ್ನೂ ಗುರುತುಹಾಕಿಕೊಂಡು, ಕಛೇರಿ ಮುಗಿದನಂತರ ಹಾಡಿದ ವಿದ್ವಾಂಸರೊಡನೆ ಚರ್ಚೆ ಮಾಡಿ ಜ್ಞಾನಾಭಿವೃದ್ಧಿಮಾಡಿಕೊಳ್ಳುವುದು ಇಲ್ಲಿಯ ಪದ್ಧತಿ ಎಂದು ಉತ್ತರ ದೊರೆಯಿತು. ನೂರಾರು ಕಛೇರಿಗಳನ್ನು ಮಾಡಿದ್ದೇನೆ, ನೂರಾರು ಸಂಗೀತ ಸಭೆಗಳನ್ನು ನೋಡಿದ್ದೇನೆ. ಆದರೆ, ಕಲಾಕ್ಷೇತ್ರದ ಆ ಉತ್ಸವ ಸಭೆಗಳ ಶಿಸ್ತು, ಗಾಂಭೀರ್ಯವನ್ನು ಮತ್ತೆಲ್ಲಿಯೂ ನಾನು ಕಂಡಿಲ್ಲ, ಕೇಳಿಲ್ಲ. ವರದಾಚಾರ್ಯರ ಅಂದಿನ ಕಛೇರಿಯ ವೈಖರಿ ಕೇವಲ ಅನುಭವವೇದ್ಯವೇ ವಿನಾ ವರ್ಣಿಸಲಸದಳ. ಎಂದೂ ಇಲ್ಲದ ಶಾರೀರ ಸೌಲಭ್ಯ ಪ್ರಾಪ್ತವಾಗಿತ್ತು ಅವರಿಗೆ. ಮುಟ್ಟಿದ್ದೆಲ್ಲ ಚಿನ್ನ ಅನ್ನುವಹಾಗೆ, ಹಾಡಿದ ಸಂಗತಿ ಸ್ವರಗಳೆಲ್ಲ ಅನರ್ಘ್ಯರತ್ನಗಳಂತಿದ್ದವು. ಮುಖಾರಿ ರಾಗವನ್ನು ಸುಮಾರು ಒಂದು ಘಂಟೆಯಕಾಲ ಹಾಡಿ, ಅದರ ಸಾರವನ್ನೆಲ್ಲ ಹೀರಿ ತೋರಿಸಿದರು. ' ಎಂತ ನಿನ್ನೆ ಶಬರಿ ಭಾಗ್ಯ ' ವೆಂಬ ತ್ಯಾಗರಾಜರ ಕೀರ್ತನೆಯನ್ನು ಹಾಡಿದಾಗಲಂತೂ ಪ್ರತಿಯೊಬ್ಬನೂ ಭಾವಲಹರಿಯಲ್ಲಿ ಮುಳುಗಿ ಎದ್ದಂತೆ ತೋರುತ್ತಿತ್ತು. ಪ್ರತಿಯೊಂದು ಕಛೇರಿಯಲ್ಲೂ ಮಧ್ಯಮ ಕಾಲ ಹಾಡುತ್ತಿದ್ದವರು, ಅಂದು ಕಾಂಬೋಧಿರಾಗವನ್ನು ಹಾಡಿ, ಮಧ್ಯಮಕಾಲವನ್ನು ಹಾಡದೆಯೇ ಪಲ್ಲವಿಯನ್ನು ಪ್ರಾರಂಭಿಸಿದರು. ಸಭಿಕರಲ್ಲಿ ಕೊಂಚ ಕುತೂಹಲ ಕೆರಳಿತು. "ಸ್ವಲ್ಪ ಮಧ್ಯಮಕಾಲವನ್ನು

ಹಾಡಬೇಕಾಗಿ ಬೇಡುತ್ತೇವೆ" ಎಂದೂ ಒಬ್ಬಿಬ್ಬರಂದರು. "ಮಧ್ಯಮಕಾಲ ಹಾಡುವುದಕ್ಕಾಗಿಯೇ ಮತ್ತೊಬ್ಬ ಮಹನೀಯರು ಆಹ್ವಾನಿತರಾಗಿದ್ದಾರೆ. ನಾಳೆಯ ದಿನ ನಿಮ್ಮ ಮನದಣಿಯುವಷ್ಟು ಮಧ್ಯಮಕಾಲದ ವಿನಿಕೆ ಯನ್ನು ಕೇಳಬಹುದು. ಮಧ್ಯಮಕಾಲ ಅವರ ಸ್ವತ್ತು", ಎಂದು ನನ್ನ ಕಡೆ ಕೈ ಬೆರಳುಮಾಡಿ ಹೇಳಿದರು. "ಕ್ಷಮಿಸಬೇಕು. ಅಷ್ಟು ದೊಡ್ಡ ಮಾತ ನ್ನಾಡಬಾರದು. ಮಧ್ಯಮಕಾಲವನ್ನು ಹಾಡಿ ಪಲ್ಲವಿಯನ್ನು ಪ್ರಾರಂಭಿಸ ಬೇಕು" ಎಂದು ಕೇಳಿಕೊಂಡೆ. "ಇದೊಂದು ವಿಚಾರದಲ್ಲಿ ನಿಮ್ಮ ಮಾತನ್ನು ಮೀರಲು ಅನುಮತಿ ಕೊಡಬೇಕು" ಎಂದರು. ಪಲ್ಲವಿಯನ್ನೇ ಮುಂದುವರಿಸಿದರು. ಅಂತಹ ವಿದ್ವತ್ಸಭೆಯಲ್ಲಿ ನನಗಷ್ಟು ಗೌರವವನ್ನು ತೋರಿದ ನನ್ನ ಮಾನ್ಯಮಿತ್ರರೂ ಘನವಿದ್ವಾಂಸರೂ ಆದ ಟೈಗರ್ ಅವರನ್ನು ಆಜನ್ಮವೂ ಕೃತಜ್ಞತೆಯಿಂದ ಸ್ಮರಿಸುತ್ತೇನೆ. ಕಲಾವಿದರಲ್ಲಿ ಅಷ್ಟು ನಿರ್ಮಲಹೃದಯ ವಿರಳ!

ಮದ್ರಾಸಿಗೆ ನಾನು ಹೋದಾಗಲೆಲ್ಲ ನನ್ನ ಮಿತ್ರರಾದ ಸಂಗೀತ ಕಳಾನಿಧಿ ಟಿ. ವಿ. ಸುಬ್ಬರಾಯರ ಮನೆಗೆ ಹೋಗಿಬರುವುದು ಪದ್ಧತಿ ಯಾಗಿತ್ತು. ಒಮ್ಮೆ ಒಂದು ಸ್ವಾರಸ್ಯ ಪ್ರಸಂಗ ಜರುಗಿತು. ಸಂಜೆ ಉಪಹಾರ ಮುಗಿಸಿಕೊಂಡು ನಾನೂ ಸುಬ್ಬರಾಯರೂ ಅವರ ಮನೆಯ ಹೊರಾಂಗಣದಲ್ಲಿ ಮಾತುಕತೆಯಾಡುತ್ತ ಕುಳಿತಿದ್ದೆವು. ಪಟ್ಣಂ ಸುಬ್ರಹ್ಮ ಣ್ಯಯ್ಯರ್, ಮಹಾವೈದ್ಯನಾಥಯ್ಯರ್ ಮತ್ತು ತಿರುಕೋಡ್‌ಕಾವಲ್ ಕೃಷ್ಣಯ್ಯರ್ ಇವರುಗಳ ಶೈಲಿಗಳ ವಿಷಯವನ್ನು ಪ್ರಸ್ತಾಪಮಾಡುತ್ತಿ ದ್ದೆವು. ಸುಬ್ಬರಾಯರ ಅಪೇಕ್ಷೆಯಮೇರೆ ಅವರುಗಳ ಶೈಲಿಗಳನ್ನು ಆದಷ್ಟುಮಟ್ಟಿಗೆ ಅನುಕರಣಮಾಡಿ ತೋರಿಸಿದೆ. ಕ್ರಮೇಣ ಮಾತು ವರದಾಚಾರ್ಯರ ಶೈಲಿಯ ಕಡೆ ತಿರುಗಿತು. ಟೈಗರ್ ಅವರ ಹಲವಾರು ಕಛೇರಿಗಳನ್ನು ಕೇಳಿ ಮನನ ಮಾಡಿಕೊಂಡಿದ್ದರಿಂದ, ಅವರನ್ನು ಅನು ಕರಣ ಮಾಡತೊಡಗಿದೆ. ಸುಬ್ಬರಾಯರು ಒಳಗೊಳಗೇ ನಗುತ್ತಿದ್ದರು. ಇದ್ದಕ್ಕಿದ್ದ ಹಾಗೆಯೇ ಕೊಂಕಳಲ್ಲಿ ಚಾಪೆಯ ಸುರಳಿಯೊಂದನ್ನೂ ದಿಂಬೊಂದನ್ನೂ ಇರುಕಿಸಿಕೊಂಡು ಕಪಟದ ಕಣ್ಣೀರು ಹಾಕುತ್ತ, "ಸುಬ್ಬರಾಯರೇ! ಇನ್ನು ಮದ್ರಾಸಿನಲ್ಲಿ ನನಗೆ ಸ್ಥಳವಿಲ್ಲ. ನನ್ನ ಆಸ್ತಿ ಯನ್ನೆಲ್ಲ ಈ ಕಳ್ಳ ಅಪಹರಿಸಿಕೊಂಡಿದ್ದಾನೆ! ಎಲ್ಲಾದರೂ ಓಡಿಹೋಗು ವುದೊಂದೇ ಬಾಕಿ ನನಗೆ" ಎಂದು ಕಂಬಳಿಯ ಮುಸುಕಿನಲ್ಲಿ ತಲೆಮರೆಸಿ

ಕೊಂಡಿದ್ದ ವರದಾಚಾರ್ಯರು ನುಡಿದರು. ಸುಬ್ಬರಾಯರೂ ಟೈಗರ್ ಅವರೂ ಹೊಟ್ಟೆಹುಣ್ಣಾಗುವತನಕ ನಕ್ಕರು. "ಕ್ಷಮಿಸಬೇಕು ಅಣ್ಣ! ಕೇವಲ ವಿನೋದಾರ್ಥವಾಗಿ ನಿಮ್ಮ ಹಾಗೆ ಹಾಡಿ ತೋರಿಸಲು ಯತ್ನಿಸು ತ್ತಿದ್ದೆ ಅಷ್ಟೆ" ಎಂದೆ. ಬಲವಂತಮಾಡಿ ಮತ್ತೆ ನನ್ನ ಕೈಲಿ ಅದೇ ಶೈಲಿ ಯಲ್ಲಿ ಸ್ವಲ್ಪಕಾಲ ಹಾಡಿಸಿ ವಿನೋದಪಟ್ಟರು ವರದಾಚಾರ್ಯರು.

ಟೈಗರ್ ಅವರು ನನ್ನನ್ನು ಮದ್ರಾಸಿಗೆ ಕರೆಸಿಕೊಳ್ಳಬೇಕೆಂದು ಹೇಗೆ ಹಾತೊರೆಯುತ್ತಿದ್ದರೋ, ಹಾಗೆಯೆ ಅವರನ್ನು ಮೈಸೂರು ಸಂಸ್ಥಾನಕ್ಕೆ ಕರೆಸಿ, ಮಹಾಪ್ರಭುಗಳ ಕೃಪಾಕಟಾಕ್ಷಕ್ಕೆ ಪಾತ್ರರನ್ನಾಗಿಮಾಡಬೇಕೆಂಬ ಬಯಕೆ ನನಗೆ! ಕಲಾಪೋಷಕರೂ ಸ್ವಯಂ ಕಲಾವಿದರೂ ಆದ ಆಳುವ ಪ್ರಭುಗಳು ವರದಾಚಾರ್ಯರನ್ನು ಬರಮಾಡಿಕೊಂಡು ಆಸ್ಥಾನ ವಿದ್ವನ್ಮಣಿ ಗಳನ್ನಾಗಿ ನೇಮಕಮಾಡಿದಂದು ನನಗಾದ ಆನಂದಕ್ಕೆ ಮೇರೆ ಮಿತಿ ಯಿರಲಿಲ್ಲ. ನಮ್ಮಿಬ್ಬರಿಗೂ ಒಂದೇ ಸಂದರ್ಭದಲ್ಲಿ ಒಂದೇ ವಿಧವಾದ ಬಿರುದನ್ನು ಪ್ರಭುಗಳು ದಯಪಾಲಿಸಿದ್ದಾಗ್ಗೆ, "ಯಾವುದೋ ಜನ್ಮದಲ್ಲಿ ಒಬ್ಬ ತಾಯಿಯ ಮಕ್ಕಳಾಗಿದ್ದಿರಬೇಕು ನಾವು," ಎಂದು ಒಬ್ಬರನ್ನೊಬ್ಬರು ಆಲಂಗಿಸಿಕೊಂಡೆವು.

ಟೈಗರ್ ಅವರಿಗೆ ಉಡಿಗೆ ತೊಡಿಗೆಗಳ ಮೇಲೆ ಗಮನ ಅಷ್ಟಕ್ಕಷ್ಟೆ. ಎಷ್ಟೋ ಬಾರಿ ಜುಬ್ಬವನ್ನು ಜೇಬು ಬೆನ್ನಿನ ಮೇಲೆ ಬರುವಂತೆ ಹಿಂದು ಮುಂದಾಗಿ ಹಾಕಿಕೊಂಡಿದ್ದುಂಟು! ಜುಬ್ಬವನ್ನೇ ಹಾಕದೆ ಕರಿಯ ನಿಲು ವಂಗಿಯನ್ನೇ ತಗುಲಿ ಹಾಕಿಕೊಂಡ ಸಂದರ್ಭಗಳೆಷ್ಟೋ! ಪೇಟವನ್ನು ಸುತ್ತಿ ಅಭ್ಯಾಸವೆ ಇಲ್ಲ. ಯಾರೋ ಅವರ ತಲೆಯಳತೆಗೆ ಸುತ್ತಿದ್ದ ಪೇಟದಲ್ಲಿ ತಮ್ಮ ತಲೆಯನ್ನು ಬಲವಂತವಾಗಿ ತೂರಿಸುತ್ತಿದ್ದರು. ಕನ್ನಡಿಯ ಮುಂದೆ ನಿಂತು 'ಆಂಜನೇಯ ಸ್ವಾಮಿನೇ ನಮಃ' ಎಂದು ತಮ್ಮನ್ನು ತಾವೇ ಹಾಸ್ಯಮಾಡಿಕೊಳ್ಳುತ್ತಿದ್ದರು! 'ಈ ವಿಚಿತ್ರ ರೂಪಕ್ಕೆ ತಕ್ಕ ಸ್ಥೂಲಕಾಯ ಬೇರೆ' ಎಂದು ಪರಿಹಾಸ್ಯ ಮಾಡಿಕೊಳ್ಳುತ್ತಿದ್ದರು. ಕೂತರೆ ನಿಂತರೆ 'ಅಪ್ಪನೇ, ಆದಿಮೂಲನೇ' ಎಂದು ರಾಗ ಎಳೆಯುವುದು ಅವರ ಅಭ್ಯಾಸ. ನೋಡಲು ಹೇಗಿದ್ದರೇನು! ಸರಸ್ವತಿಯ ವರಪುತ್ರರಾದ ಅವರ ಮುಖದಲ್ಲಿದ್ದ ವಿಶೇಷ ಕಳೆ ಯಾರಿಗಾದರೂ ನೋಡಿದೊಡನೆಯೇ ಅವರಲ್ಲಿ ಪೂಜ್ಯಭಾವನೆಯನ್ನು ತರುತ್ತಿತ್ತು.

ಟೈಗರ್ ಅವರ ಬಾಲ್ಯ ಜೀವನದ ಪರಿಚಯ ಅಷ್ಟಾಗಿಲ್ಲ ನನಗೆ. ಅವರೂ ಸಹ ಆ ಬಗ್ಗೆ ಎಂದೂ ಪ್ರಸ್ತಾಪ ಮಾಡುತ್ತಿರಲಿಲ್ಲ. 1876 ನೆಯ ಇಸವಿಯಲ್ಲಿ ಚಂಗಲ್‌ಪೇಟ್ ಡಿಸ್ಟ್ರಿಕ್ಟ್ ಶ್ರೀ ಪೆರಂಬೂರ್ ತಾಲ್ಲೋಕಿನ ಕೊಳತ್ತೂರಿನಲ್ಲಿ ಜನ್ಮತಾಳಿದರು. 'ತ್ಯಾಗರಾಜ ಹೃದಯ' ಎಂಬ ಗ್ರಂಥ ಬರೆದು ಗಾನಪ್ರೇಮಿಗಳೆಲ್ಲರಿಗೂ ಚಿರಪರಿಚಿತರಾಗಿದ್ದ ಶ್ರೀನಿವಾಸ ಯ್ಯಂಗಾರ್ಯರು ವರದಾಚಾರ್ಯರ ಅಣ್ಣಂದಿರು. ಸುಪ್ರಸಿದ್ಧ ವೈಣಿಕ ವಿದ್ವಾಂಸರಾಗಿದ್ದ ಕೃಷ್ಣಮಾಚಾರಿಯವರು ಅವರ ತಮ್ಮಂದಿರು.

ಸೇಲಂ ಡಿಸ್ಟ್ರಿಕ್ಟಿನ ಕಾವೇರಿ ಪಟ್ಟಣದಲ್ಲಿ ವರದಾಚಾರ್ಯರು ಸರ್ಕಾರಿ ಇಲಾಖೆಯೊಂದರಲ್ಲಿ ಗುಮಾಸ್ತೆಯಾಗಿದ್ದರಂತೆ. "ಸರ್ಕಾರಿ ನೌಕರಿಯನ್ನು ಬಿಟ್ಟು ಸಂಗೀತ ಪ್ರಪಂಚಕ್ಕೆ ಬಂದದ್ದು ಹೇಗೆ?" ಎಂದು ಕೇಳಿದಾಗಲೆಲ್ಲ, "ಅದೊಂದು ರಾಮಾಯಣ; ಮತ್ಯಾವಾಗಲಾದರೂ ಹೇಳುತ್ತೇನೆ," ಎಂದು ಬೇರೆ ವಿಷಯ ಪ್ರಸ್ತಾಪಿಸುತ್ತಿದ್ದರು. ಕಾಲಾಡಿಪೇಟ್ ಮಾಸಲಾ ಮಣಿ ಮೊದಲಿಯಾರ್ ಎಂಬಾತ ಉತ್ತಮ ಸಂಗೀತ ವಿಮರ್ಶಕ ಹಾಗೂ ಪಿಟೀಲುವಿದ್ವಾಂಸರಂತೆ. "ಅವರೇ ನನ್ನನ್ನು ಸಂಗೀತ ಪ್ರಪಂಚಕ್ಕೆ ಪ್ರವೇಶಮಾಡುವಂತೆ ಪ್ರೇರೇಪಿಸಿದವರು" ಎಂದಷ್ಟನ್ನು ಮಾತ್ರ ಟೈಗರ್ ಅವರು ಆಗಾಗ್ಗೆ ಹೇಳುತ್ತಿದ್ದರು. ಪ್ರಾರಂಭದಲ್ಲಿ ವರದಾಚಾರ್ಯರು ನೀಲಕಂಠಶಾಸ್ತ್ರಿಗಳೆಂಬುವರ ಬಳಿ ಸಂಗೀತ ಶಿಕ್ಷಣವನ್ನು ಹೊಂದಿದರಂತೆ. ನಮ್ಮ ಗುರುಗಳು ಆಗಿಂದ್ದಾಗ್ಗೆ ತೆಚ್ಚೂರು ಶಿಂಗ್ರಾಚಾರ್ಯರೆಂಬ ವಿದ್ವಾಂಸರ ಮನೆಗೆ ಹೋಗಿಬರುತ್ತಿದ್ದರು. ಆ ಸಂದರ್ಭಗಳಲ್ಲಿ ಪಟ್ಣಂ ಸುಬ್ರಹ್ಮಣ್ಯಯ್ಯರ್ ಅವರಲ್ಲಿ ಶಿಷ್ಯವೃತ್ತಿಮಾಡಿ ವಿದ್ಯಾಭಿವೃದ್ಧಿ ಮಾಡಿ ಕೊಂಡರೆಂದು ಟೈಗರ್ ಅವರು ಹೇಳುತ್ತಿದ್ದರು.

ಮದ್ರಾಸು ಮ್ಯೂಸಿಕ್ ಅಕಾಡಿಮಿಯ ಟೀಚರ್ಸ್ ಕಾಲೇಜಿನ ಪ್ರಥಮ ಪ್ರಿನ್ಸಿಪಾಲರಾಗಿಯೂ ಮದ್ರಾಸು ವಿಶ್ವವಿದ್ಯಾನಿಲಯ ಹಾಗೂ ಅಣ್ಣಾಮಲೈ ವಿಶ್ವವಿದ್ಯಾನಿಲಯಗಳ ಸಂಗೀತ ಇಲಾಖೆಯ ಮುಖ್ಯಾಧಿ ಕಾರಿಗಳಾಗಿಯೂ ಶ್ಲಾಘನೀಯವಾದ ಸೇವೆ ಸಲ್ಲಿಸಿದರು. ಜೀವನದ ಕೊನೆಯ ದಿನಗಳನ್ನು ಕಲಾಕ್ಷೇತ್ರದಲ್ಲಿ ಕಳೆದರು. ವೃದ್ಧಾಪ್ಯದಲ್ಲಿ ತಮಗೆ ಆಶ್ರಯ ನೀಡಿ ಗೌರವಿಸಿ ಕಾಪಾಡಿದ ಶ್ರೀಮತಿ ರುಕ್ಮಿಣಿ ದೇವಿಯರಲ್ಲಿ

ವರದಾಚಾರ್ಯರಿಗೆ ಅಪಾರ ಗೌರವ, ಕೃತಜ್ಞತೆ, ವಿಶ್ವಾಸಗಳಿದ್ದವು. ಬಾಳು ನೆಮ್ಮದಿಯಾಗಿದ್ದುದರಿಂದ ಕಲಾಸೇವೆ ನಿರ್ವಿಘ್ನವಾಗಿ ಸಾಗಲವಕಾಶವಾಯಿತು. ಅನೇಕ ವರ್ಣ, ಕೀರ್ತನೆ, ತಿಲ್ಲಾನಗಳನ್ನು ರಚಿಸಿ ಕೀರ್ತಿಶಾಲಿಗಳಾದರು.

1951 ನೆಯ ಜನವರಿ ಮಾಹೆಯ ಕೊನೆಯ ದಿನ ವರದಾಚಾರ್ಯರ ಇಹಲೋಕ ಯಾತ್ರೆ ಕೊನೆಯಾಯಿತು.



# ಮುತ್ತಯ್ಯ ಭಾಗವತರು

"ಸ್ನಾನಕ್ಕೆ ಏನು ವ್ಯವಸ್ಥೆಮಾಡಿಕೊಂಡಿದ್ದೀರಿ ?"

"ದೇವರು ಕೊಟ್ಟಹಾಗೆ ಹೊಳೆಯಿದೆ. ಮೂರು ಮುಳುಗು ಹಾಕಿದರೆ ಮುಗಿಯಿತು ಸ್ನಾನ. ಹಂಡೆ ಬೇಡ, ಸೌದೆ ಬೇಡ!"

"ಊಟ ಎಲ್ಲಿ ಮಾಡುತ್ತೀರಿ ?"

"ನಾಲ್ಕು ಮನೆಯಲ್ಲಿ ನಾಲ್ಕು ತುತ್ತು ಅನ್ನ ಸಿಕ್ಕರೆ ಆಯಿತು. ಉಪನಯನವಾಗಿದೆ. 'ಭಿಕ್ಷಾನ್ನ'! ಎಂದು ಕೈನೀಡಿದರೆ ಯಾವ ಜನ್ಮದ ತಾಯಂದಿರೋ ಹಿಡಿ ಅನ್ನ ಕರುಣಿಸುತ್ತಾರೆ. ದಿನಕ್ಕೊಂದು ಬಗೆ ಊಟ, ದಿನಕ್ಕೊಂದು ರುಚಿಯ ಕವಳ!"

"ಸರಿ! ಹೊಳೆಯಲ್ಲಿ ಸ್ನಾನ, ಭಿಕ್ಷಾನ್ನ ಭೋಜನ; ಅಂದಮೇಲೆ ವಾಸಕ್ಕೆ ಛತ್ರ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಯೇ ಇಲ್ಲ!"

"ನಿಮ್ಮ ಊಹೆ ಯಥಾರ್ಥವಾದದ್ದು. ನನ್ನ ಹನ್ನೆರಡನೆಯ ವರ್ಷದಿಂದಲೂ ಈ ಛತ್ರವೇ ನನ್ನ ಮನೆಯಾಗಿದೆ. ಯಾವುದಕ್ಕೇನು ಕಡಿಮೆ ನನ್ನ ಬಾಳಿನಲ್ಲಿ?"

ತಿರುವೆಯಾರಿನಲ್ಲಿ ವಿದ್ಯಾರ್ಜನೆಮಾಡುವ ವೇಳೆಯಲ್ಲಿ ನನಗೂ ಮುತ್ತಯ್ಯ ಭಾಗವತರಿಗೂ ನಡುವೆ ನಡೆದ ಪ್ರಥಮ ಸಂಭಾಷಣೆಯ ಸಾರಾಂಶವಿದು. ಹೃದಯದ ವೇದನೆಯನ್ನು ತೋಡಿಕೊಳ್ಳುವಾಗಲೂ ಭಾಗವತರು ಹಸನ್ಮುಖಿಗಳಾಗಿಯೇ ಇದ್ದರು. ಬಾಳಿನ ನೋವನ್ನೂ ಸಹ ನಗೆಯ ಅಲೆಯಮೇಲೆ ತೇಲಿಬಿಡುತ್ತಿದ್ದರು. ಒಂದು ಸಂಜೆ, ಛತ್ರದ ಜಗುಲಿಯಮೇಲೆ ಕುಳಿತು ನಮ್ಮ ನಮ್ಮ ಪೂರ್ವ ವೃತ್ತಾಂತಗಳನ್ನು ಒಬ್ಬರಿಗೊಬ್ಬರು ಹೇಳಿಕೊಂಡೆವು. ನಮ್ಮಿಬ್ಬರ ಬಾಳ ನೌಕೆಗಳನ್ನೂ ಸೃಷ್ಟಿನಿಯಾಮಕ ಒಂದೇ ವಿಧದಲ್ಲಿ ನಿರ್ಮಾಣಮಾಡಿದ್ದಂತೆ ಕಂಡಿತು. ಅಲ್ಲಿಂದಾಚೆಗೆ ನನ್ನ ಹಾಗೂ ಭಾಗವತರ ಸ್ನೇಹಸೌಹಾರ್ದಗಳು ಬೆಳೆದು ಬಂದವು.

ತಿನ್ನವೇಲಿ ಜಿಲ್ಲೆಯ ಹರಿಕೇಶನೆಲ್ಲೂರು ಭಾಗವತರ ಜನ್ಮಸ್ಥಳ. 1877 ನೇ ಜನವರಿಯಲ್ಲಿ ಭಾಗವತರು ಜನಿಸಿದರು. ತಂದೆಯ ಹೆಸರು ಲಿಂಗಮಯ್ಯರ್. ಭಾಗವತರಿಗೆ ಸುಮಾರು ಹತ್ತುವರ್ಷ ವಯಸ್ಸಾಗಿದ್ದಾಗ



ಗಾಯಕ ಶಿಖಾಮಣಿ, ಸಂಗೀತಕಲಾನಿಧಿ ಡಾ|| ಹೆಚ್. ಮುತ್ತಯ್ಯಭಾಗವತರು

ಲಿಂಗಮಯ್ಯರ್ ವಿಧಿವಶರಾದ್ದರಿಂದ, ಭಾಗವತರ ಪೋಷಣೆಯ ಭಾರ ಅವರ ಚಿಕ್ಕಪ್ಪನವರ ಮೇಲೆ ಬಿತ್ತು. ಆತ ವೇದಾಧ್ಯಯನ ಸಂಪನ್ನರು. ಸಂಗೀತ, ನೃತ್ಯ, ಸತ್ಕುಲಸಂಭೂತರಿಗಲ್ಲ ಎಂಬ ಸಿದ್ಧಾಂತವನ್ನು ಪ್ರತಿಪಾದಿಸುತ್ತಿದ್ದ ಗುಂಪಿನವರು. ಬಾಲ್ಯದಿಂದಲೂ ಸಂಗೀತದಕಡೆ ಜಾರಿದ್ದ ಭಾಗವತರ ಮನಸ್ಸನ್ನು ಸಂಸ್ಕೃತ ಸಾಹಿತ್ಯಾಧ್ಯಯನದ ಕಡೆ ತಿರುಗಿಸಲು ವಿಶ್ವಪ್ರಯತ್ನಪಟ್ಟರಂತೆ. ಸುಮಾರು ಎರಡು ವರ್ಷಗಳಕಾಲ ಭಾಗವತರ ಸಂಸ್ಕೃತಾಭ್ಯಾಸ ಹಾಗೂ ಹೀಗೂ ಮುಂದುವರೆಯಿತು. ಒಂದು ದಿನ ಭಾಗವತರು ಯಾರಿಗೂ ತಿಳಿಯದಂತೆ ತಿನ್ನವೇಲಿಯನ್ನು ಬಿಟ್ಟು ತಿರುವೆಯಾರಿಗೆ ಬಂದರು. ಭಿಕ್ಷಾನ್ನ ಮಾಡಿಕೊಂಡು ಜೀವಿಸಿಯಾದರೂ ಸಂಗೀತ ಕಲಿಯಬೇಕೆಂಬ ತಮ್ಮ ಹೆಬ್ಬಯಕೆಯನ್ನು ಈಡೇರಿಸಿಕೊಳ್ಳಬೇಕೆಂಬ ದೃಢ ಸಂಕಲ್ಪದಿಂದ ಭಾಗವತರು ತಮ್ಮ ಗುರುವನ್ನು ಅರಸುತ್ತ ಅಲೆದಾಡಿದರು. ಸಾಂಬಶಿವಯ್ಯರ್ ಎಂಬ ಪ್ರಸಿದ್ಧ ವಿದ್ವಾಂಸರು ವಿದ್ಯಾದಾನ ಮಾಡಲು ಒಪ್ಪಿದರು. ಏಳು ವರ್ಷಗಳಕಾಲ ಸಾಂಬಶಿವಯ್ಯರ್ ಅವರಲ್ಲಿ ಶುಶ್ರೂಷೆಮಾಡಿ ಸಂಗೀತ ಶಾಸ್ತ್ರದ ಲಕ್ಷ್ಯ ಲಕ್ಷಣಗಳೆರಡರಲ್ಲೂ ಪೂರ್ಣ ಪಾಂಡಿತ್ಯವನ್ನು ಸಂಪಾದಿಸಿಕೊಂಡು, ಭಾಗವತರು ತಮ್ಮ ಇಪ್ಪತ್ತನೆಯ ವಯಸ್ಸಿನಲ್ಲಿ ಹರಿಕೇಶನೆಲ್ಲೂರಿಗೆ ಹಿಂತಿರುಗಿದರು. ಸುಮಾರು ಐದು ವರ್ಷಗಳಕಾಲ ಭಾಗವತರು ತಮ್ಮ ಊರಿನಲ್ಲೇ ನೆಲಸಿದ್ದು ಸಣ್ಣಪುಟ್ಟ ಸಂಗೀತ ಕಛೇರಿಗಳನ್ನು ಮಾಡುತ್ತ ಕಾಲತಳ್ಳುತ್ತಿದ್ದರಂತೆ. ಆಗ್ಗೆ, ಹರಿಕಥಾ ಕಾಲಕ್ಷೇಪಗಳಿಗಿದ್ದಷ್ಟು ಉತ್ತೇಜನ ಸಂಗೀತ ಕಛೇರಿಗಳಿಗಿರಲಿಲ್ಲವಾಗಿ, ಭಾಗವತರು ಕಥಾಕಾಲಕ್ಷೇಪಗಳನ್ನೇ ಮಾಡಿ ಜೀವನ ನಡೆಸಲು ತೀರ್ಮಾನಿಸಿದರು. ಬಾಲ್ಯದಲ್ಲೇ ಸಂಸ್ಕೃತ ಪಾಂಡಿತ್ಯವನ್ನು ಸಂಪಾದಿಸಿದ್ದುದರಿಂದಲೂ ಅಸಾಧಾರಣ ವಾಗ್ಧೋರಣೆಯಿದ್ದುದರಿಂದಲೂ ಅಮೋಘವಾದ ಸಂಗೀತಜ್ಞಾನ ಮತ್ತು ಶಾರೀರ ಸಂಪತ್ತು ಇದ್ದುದರಿಂದಲೂ ಭಾಗವತರ ಕಥಾಕಾಲಕ್ಷೇಪಗಳು ಶೀಘ್ರವಾಗಿ ಜನಾದರಣೀಯಗಳಾದವು. ಜೀವನದ ಕಷ್ಟಕಾರ್ಪಣ್ಯಗಳನ್ನು ನಿವಾರಿಸಿ ಊಟ ಉಡುಗೆಗಳಿಗಾದರೂ ಆತಂಕವಿಲ್ಲದಂತಾಗಲು ಅವಕಾಶವನ್ನು ಒದಗಿಸಿಕೊಟ್ಟವು. ಈ ಮಧ್ಯೆ ಒಂದು ಬಾರಿ ತಿರುವಾಂಕೂರು ಸಂಸ್ಥಾನಕ್ಕೆ ಹೋಗಿ ತಮ್ಮ ವಿದ್ವತ್ಪ್ರದರ್ಶನ ಮಾಡಿ ರೆಟ್ಟೆತೋಡ ಅಂದರೆ, ಎರಡು ಕೈಗೂ ಎರಡು ತೋಡಗಳನ್ನೂ ಶಾಲು ಜೋಡಿಗಳನ್ನೂ ಸಂಪಾದಿಸಿಕೊಂಡು ಬಂದರು. ತಿರುವಾಂಕೂರಿನಲ್ಲಿ

ದೊರೆತ ಈ ಪ್ರೋತ್ಸಾಹ ಬೆಂಬಲಗಳಿಂದ ಭಾಗವತರ ಮನಸ್ಸು ಮತ್ತೆ ಸಂಗೀತ ಕಛೇರಿಗಳ ಕಡೆ ತಿರುಗಿತು.

ತಮ್ಮ ಇಪ್ಪತ್ತೈದನೆಯ ವಯಸ್ಸಿನಲ್ಲಿ ಮುತ್ತಯ್ಯ ಭಾಗವತರು ಮಧುರೆಗೆ ಹೋಗಿ ನೆಲೆಸಿದರು. ಸಂಗೀತ ಪಾಠಶಾಲೆಯೊಂದನ್ನು ಪ್ರಾರಂಭಿಸಿ ಜೀವನ ಮಾರ್ಗವನ್ನು ಕಲ್ಪಿಸಿಕೊಂಡರು. ಇದಾದ ಸ್ವಲ್ಪಕಾಲದ ಮೇಲೆ ಭಾಗವತರು ಕರೂರಿಗೆ ಪ್ರಯಾಣ ಬೆಳೆಸಿದರು. ಈ ಸನ್ನಿವೇಶದಲ್ಲೇ ಭಾಗವತರಿಗೆ ಪೆತ್ತಾಚೆಟ್ಟಿಯಾರ್ ಎಂಬ ಆಂಡಿಪಟ್ಟಿಯ ದೊಡ್ಡ ಜಮೀನುದಾರರ ಸ್ನೇಹ ಲಾಭವುಂಟಾಯಿತು. ಮುತ್ತಯ್ಯ ಭಾಗವತರ ಭಾಗ್ಯೋದಯವಾಯಿತು. ಜಮೀನುದಾರರು ಭಾಗವತರ ವಿದ್ವತ್ತಿಗೆ ತಲೆದೂಗಿ ವಿಶೇಷವಾಗಿ ಗೌರವಿಸಿದರು. ಭಾಗವತರ ಸಲಹೆಯಮೇಲೆ ಪ್ರತಿ ವರ್ಷವೂ ಸ್ಕಂದಷಷ್ಠಿ ಉತ್ಸವಗಳನ್ನು ಏರ್ಪಡಿಸಿ ಜಮೀನುದಾರರು ಪ್ರಸಿದ್ಧರಾದ ಸ್ಥಳ ಪರಸ್ಥಳಗಳಿಂದ ಸಂಗೀತ ವಿದ್ವಾಂಸರುಗಳನ್ನು ಆಹ್ವಾನಿಸಿ, ಕಛೇರಿಗಳನ್ನು ಏರ್ಪಡಿಸಿ ಉಚಿತ ಸಂಭಾವನೆಗಳನ್ನು ಕೊಡುತ್ತ ಬಂದರು. ಭಾಗವತರಿಗೆ ದೊಡ್ಡ ದೊಡ್ಡ ಸಂಗೀತ ವಿದ್ವಾಂಸರುಗಳ ಪರಿಚಯವಾಯಿತು. ಭಾಗವತರ ಕೀರ್ತಿಶ್ರೀಯೂ ಸಹ ಬೆಳಗಲವಕಾಶವಾಯಿತು. ಈ ಸಂಭ್ರಮದ ಜೀವನ ನಡೆದದ್ದು ಕೇವಲ ಐದು ವರ್ಷಗಳು ಮಾತ್ರ. ಪೆತ್ತಾಚೆಟ್ಟಿಯಾರ್ ಅವರು ಕಾಲವಾದನಂತರ ಭಾಗವತರ ಮನಸ್ಸು ಕದಡಿತು. ಕರೂರನ್ನು ಬಿಟ್ಟು ರಂಗೂನ್, ಕಲ್ಕತ್ತ ಮುಂತಾದ ಸ್ಥಳಗಳಲ್ಲಿ ಸಂಚಾರ ಮಾಡಿಕೊಂಡು ಮದ್ರಾಸಿಗೆ ಬಂದು ನೆಲಸಿದರು.

1927 ನೇ ಇಸವಿಯಲ್ಲಿ ದಸರಾ ಮಹೋತ್ಸವದ ಸಮಯಕ್ಕೆ ಮುತ್ತಯ್ಯ ಭಾಗವತರು ಮೈಸೂರಿಗೆ ಆಗಮಿಸಿದರು. ಆಗ್ಗೆ ಅವರಿಗೆ ಸುಮಾರು ಐವತ್ತು ವರ್ಷ ವಯಸ್ಸು. ನಾಲ್ವಡಿ ಕೃಷ್ಣರಾಜ ಪ್ರಭುಗಳೆದುರು ಒಂದೆರಡು ಕಛೇರಿಗಳು ಜರುಗಿ, ಪ್ರಭುಗಳ ಕೃಪಾಕಟಾಕ್ಷ ಭಾಗವತರ ಮೇಲೆ ಬಿತ್ತು. ಆಸ್ಥಾನ ವಿದ್ವನ್ಮಂಡಲಿಯಲ್ಲಿ ಉನ್ನತ ಸ್ಥಾನ ದೊರೆಯಿತು. 1928 ನೇ ದಸರ ಹಬ್ಬದಲ್ಲಿ ಗಾಯಕ ಶಿಖಾಮಣಿ ಎಂಬ ಅನ್ವರ್ಥವಾದ ಬಿರುದನ್ನು ಪ್ರಭುಗಳು ದಯಪಾಲಿಸಿದರು.

ಮೈಸೂರಿನಲ್ಲಿದ್ದಾಗ ಮುತ್ತಯ್ಯ ಭಾಗವತರು ಪ್ರತಿ ಶುಕ್ರವಾರ ಚಾಮುಂಡಿ ಬೆಟ್ಟಕ್ಕೆ ಹೋಗಿ ಚಾಮುಂಡೇಶ್ವರಿಗೆ ವಿಶೇಷ ಅರ್ಚನೆ ಸಲ್ಲಿಸಿ ಬರುತ್ತಿದ್ದರು. ದೇವಿಯಲ್ಲಿ ಅವರಿಗಿದ್ದ ಅಪಾರ ಭಕ್ತಿಗೆ ಅವರು ರಚಿಸಿರುವ

ಚಾಮುಂಡೇಶ್ವರಿ ಅಷ್ಟೋತ್ತರ ಕೀರ್ತನೆಗಳೇ ಸಾಕ್ಷೀಭೂತವಾಗಿವೆ. 1929 ರಿಂದ 1932 ರ ವರೆಗೆ ಭಾಗವತರು ಈ ಮಹತ್ಕಾರ್ಯದಲ್ಲಿ ಪ್ರವೃತ್ತರಾಗಿದ್ದರು. ನೂರ ಹದಿನಾಲ್ಕು ಕೀರ್ತನೆಗಳನ್ನೂ, ಅವು ಪೂರೈಸಿದಂತೆಲ್ಲ ಮಹಾಪ್ರಭುಗಳೆದರು ಹಾಡಿ ಅವರ ಮೆಚ್ಚುಗೆಯನ್ನೂ ಒಪ್ಪಿಗೆಯನ್ನೂ ಪಡೆದರು. ಸಾಹಿತ್ಯರಚನೆಯನ್ನು ಆಸ್ಥಾನವಿದ್ವಾಂಸ ರಾಗಿದ್ದ ದೇವೋತ್ತಮ ಜೋಯಿಸರಿಂದ ಮಾಡಿಸಿ, ಭಾಗವತರು ಸ್ವರಪ್ರಸ್ತಾ ರಗಳನ್ನು ಹಾಕಿದರು. ರಾಗಭಾವ ಪೂರ್ಣವಾಗಿರುವ ಅಷ್ಟೋತ್ತರ ಕೀರ್ತನೆಗಳನ್ನು ಕೇಳಿ ಸುಪ್ರೀತರಾದ ಪ್ರಭುಗಳು ರತ್ನಖಚಿತವಾದ ಚಾಮುಂಡೇಶ್ವರಿ ಪದಕವನ್ನು ಭಾಗವತರಿಗೆ ದಯಪಾಲಿಸಿದರು.

1936 ರಲ್ಲಿ ತಿರುವಾಂಕೂರು ಸಂಸ್ಥಾನದಿಂದ ಭಾಗವತರಿಗೆ ಆಹ್ವಾನ ಬಂದಿತು. ಮಹಾರಾಣಿ ಸೇತೂ ಪಾರ್ವತೀಬಾಯಿಯವರ ಅಭಿಲಾಷೆ ಯಂತೆ ಭಾಗವತರು ಎರಡು ವರ್ಷಗಳು ಅಲ್ಲೇ ಇದ್ದು ತಮ್ಮ ಗಾನಸುಧೆ ಯಿಂದ ಮಹಾರಾಣಿಯವರನ್ನು ತೃಪ್ತಿಗೊಳಿಸಿದರು. 1938 ರಲ್ಲಿ ಸ್ಥಾಪಿತವಾದ ಸ್ವಾತಿ ತಿರುನಾಳ್ ಮ್ಯೂಸಿಕ್ ಅಕ್ಯಾಡಮಿಗೆ ಪ್ರಪ್ರಥಮ ಮುಖ್ಯಾಧಿಕಾರಿಗಳಾಗಿ ನೇಮಿಸಲ್ಪಟ್ಟರು. ಸ್ವಾತಿ ತಿರುನಾಳ್ ಅವರ ಸುಮಾರು ಮುನ್ನೂರು ಕೀರ್ತನೆಗಳ ಸ್ವರಪ್ರಸ್ತಾರವನ್ನು ಕ್ರಮಪಡಿಸಿದರು. 'ಸಂಗೀತ ಕಲ್ಪದ್ರುಮ' ಎಂಬ ಶಾಸ್ತ್ರಗ್ರಂಥವೊಂದನ್ನು ತಮಿಳಿನಲ್ಲಿ ಬರೆದು ಪ್ರಚುರಪಡಿಸಿದರು. ಸಂಗೀತ ಶಾಸ್ತ್ರದ ಪುರೋಭಿವೃದ್ಧಿಗೆ ಇಷ್ಟು ಅಮೂಲ್ಯ ಸೇವೆ ಸಲ್ಲಿಸಿದುದರ ಸಂಕೇತವಾಗಿ 1943 ರಲ್ಲಿ ತಿರುವಾಂಕೂರು ವಿಶ್ವವಿದ್ಯಾ ನಿಲಯದವರು ಮುತ್ತಯ್ಯ ಭಾಗವತರಿಗೆ ಡಾಕ್ಟರ್ ಪ್ರಶಸ್ತಿಯನ್ನು ಕೊಟ್ಟು ಸನ್ಮಾನಮಾಡಿದರು. ಮುತ್ತಯ್ಯ ಭಾಗವತರು ಮೈಸೂರಿಗೆ ಹಿಂತಿರುಗಿ ತಮ್ಮ ಕೊನೆಯ ದಿನಗಳನ್ನು ಇಲ್ಲಿಯೇ ಕಳೆದರು. 1945 ನೇ ಜೂನ್ 30 ನೆಯ ದಿನಾಂಕ ಭಾಗವತರು ನಮ್ಮ ಕಣ್ಮರೆಯಾದರು.

ಜೀವನದ ಕಷ್ಟನಿಷ್ಠುರಗಳ ಪೂರ್ಣಾನುಭವ ಪಡೆದಿದ್ದ ಮುತ್ತಯ್ಯ ಭಾಗವತರ ಮನಸ್ಸು ಹೂವಿಗಿಂತಲೂ ಕೋಮಲವಾಗಿದ್ದಿತು. ದೀನ ದಲಿತರ ಬಗ್ಗೆ ಅವರಿಗೆ ಅತ್ಯಂತ ಕನಿಕರವಿತ್ತು. ತಮ್ಮಲ್ಲಿಗೆ ಬಂದ ಸಂಗೀತ ವಿದ್ವಾಂಸರನ್ನು ಬರಿಗೈಲಿ ಹೋಗಗೊಡಲಿಲ್ಲ. ಭಾಗವತರ ಕುಟುಂಬ ದಲ್ಲಿದ್ದವರೆಂದರೆ ಅವರ ಪತ್ನಿ ಮತ್ತು ಏಕಮಾತ್ರ ಪುತ್ರಿ. ಮೈಸೂರಿಗೆ ಬಂದ ತರುಣದಲ್ಲೇ ಪುತ್ರಿಯೂ ಮರಣಹೊಂದಿದಳು, ಮನೆಯಲ್ಲಿ

ದಂಪತಿಗಳಿಬ್ಬರೇ ಇದ್ದಾಗ್ಯೂ ಊಟಕ್ಕೆ ಒಪ್ಪತ್ತಿಗೆ ಕೊನೆಯಪಕ್ಷ ಹದಿನೈದು ಎಲೆಯಾದರೂ ಬೀಳುತ್ತಿತ್ತು. ಭಾಗವತರ ಸುತ್ತಲೂ ಮಿತ್ರರ ಹಾಗೂ ಬಂಧು ಬಾಂಧವರ ಒಂದಲ್ಲ ಒಂದು ತಂಡವಿದ್ದೇ ಇರುತ್ತಿತ್ತು. ಉದಾರ ಮನಸ್ಸಿನಿಂದ ಬಂದವರಿಗೆಲ್ಲ ಆತಿಥ್ಯ ನೀಡುತ್ತಿದ್ದರು. ಅವರಿದ್ದೆಡೆ ಒಂದು ಕಲಾದೇಗುಲವಿದ್ದಂತೆ ಭಾಸವಾಗುತ್ತಿತ್ತು. ಕೆಲಸಕ್ಕೆ ಬಾರದ ಪೊಳ್ಳು ಹರಟೆಗೆ ಭಾಗವತರು ಎಂದೂ ಆಸ್ಪದ ಕೊಡುತ್ತಿರಲಿಲ್ಲ. ಯಾವಾಗ ನೋಡಿದರೂ ಸಂಗೀತಕ್ಕೆ ಸಂಬಂಧಪಟ್ಟ ಮಾತೇ. ಅವರ ಬಳಿಗೆ ಹೋದ ವರಾರೂ ಏನಾದರೊಂದು ಅಪೂರ್ವ ಸಂಗತಿಯನ್ನು ಸಂಪಾದಿಸದೇ ಹಿಂತಿರುಗಿದ್ದೇ ಇಲ್ಲ. ಮನಸ್ಸಿಗೆ·ತುಂಬ ಬೇಸರಬಂದಾಗ ಇಸ್ಪೀಟು ಆಡಲು ಕೂಡುತ್ತಿದ್ದರು. ಜೊತೆಯಲ್ಲಾಡಲು ನನಗೂ ಅನೇಕ ವೇಳೆ ಆಹ್ವಾನ ನೀಡಿದ್ದರು.

ಮುತ್ತಯ್ಯ ಭಾಗವತರು ಶಂಕರಾಭರಣ, ಖರಹರಪ್ರಿಯ ರಾಗದ ಕೀರ್ತನೆಗಳನ್ನುಮಾಡುವ ಮುನ್ನ ನನಗೆ ಹೇಳಿ ಕಳುಹಿಸಿ, ಆ ರಾಗಗಳಲ್ಲಿ ನಾನು ಮಾಡಿದ್ದ 'ಹರಿನಿ ಭಜಿಂಚೆ' ಮತ್ತು 'ರಾರಾ ಎನಿ ಪಿಲಿಚಿತೆ' ಎಂಬ ಕೀರ್ತನೆಗಳನ್ನು ಹದಿನೈದು ಇಪ್ಪತ್ತು ಸಾರಿ ಹಾಡಿಸಿ ಕೇಳಿ, ಅನಂತರ, 'ಸಾಕು ಆಚಾರ್ಯರೇ. ರಾಗರಸಗಳ ಸಂಪೂರ್ಣ ದರ್ಶನ ವಾಯಿತು. ಇನ್ನು ನನ್ನ ರಚನೆಗೆ ಆರಂಭಮಾಡುತ್ತೇನೆ' ಎಂದರು.

ಮುತ್ತಯ್ಯ ಭಾಗವತರು ರಚಿಸಿರುವ ವರ್ಣಗಳೂ ಕೀರ್ತನೆಗಳೂ ರಸಪಾಕಗಳೇ ಆದಾಗ್ಯೂ ಅವರ ತಿಲ್ಲಾನ ಹಾಗೂ ದರುಗಳ ವಿಷಯದಲ್ಲಿ ನನಗೆ ಬಲು ಗೌರವ, ಅಭಿರುಚಿ. ಮುತ್ತಯ್ಯ ಭಾಗವತರು ಮೃದಂಗ ವನ್ನು ಸೊಗಸಾಗಿ ನುಡಿಸುತ್ತಿದ್ದರು. ಅನೇಕವೇಳೆ ಅವರ ಮನೆಯಲ್ಲಿ ನನ್ನ ಹಾಡುಗಾರಿಕೆಗೆ ಅವರು ಮೃದಂಗ ನುಡಿಸಿದ್ದರು. ತಂಜಾವೂರು ನಾರಾಯಣಸ್ವಾಮಪ್ಪನವರಲ್ಲಿ ಮೃದಂಗವನ್ನು ಅಭ್ಯಾಸಮಾಡಿದ್ದರಿಂದ ಮೇಲೆ ಕೇಳಬೇಕೆ! ಲಯದಲ್ಲಿ ಅಷ್ಟು ಪರಿಶ್ರಮ ಹೊಂದಿದ್ದರಿಂದ ಅವರು ರಚಿಸಿದ ತಿಲ್ಲಾನ, ದರುಗಳು ಅಷ್ಟು ಉತ್ಕೃಷ್ಟವಾಗಿವೆ. ತಮ್ಮ ರಚನೆಗಳನ್ನು ವಿದ್ವಾಂಸರುಗಳೆದುರಿಗಿಟ್ಟು, ಅವರು ನೀಡುತ್ತಿದ್ದ ಸಲಹೆ, ಟೀಕೆಗಳನ್ನು ಸಹೃದಯದಿಂದ ಸ್ವಾಗತಿಸಿ, ಉಚಿತವೆಂದು ತೋರಿಬಂದೆಡೆ

ಅನುಮೋದಿಸಿ ರಚನೆಗಳನ್ನು ತಿದ್ದುತ್ತಿದ್ದರು. ಎಲ್ಲ ರಾಗಗಳನ್ನೂ ರಸಭರಿತವಾಗಿ ಹಾಡುತ್ತಿದ್ದಾಗ್ಯೂ, ಮುಖಾರಿ ರಾಗದ ಮೇಲೆ ಅವರಿಗೆ ಬಲು ಪ್ರೀತಿ. ಆ ರಾಗವನ್ನು ಹಾಡುವುದರಲ್ಲಿ ಭಾಗವತರದು ಎತ್ತಿದ ಕೈ.



# ತಿದ್ದುಪಡಿ.



| ಪುಟ | ಪಂಕ್ತಿ | ಇರುವುದು | ಇರಬೇಕಾದುದು |
|---|---|---|---|
| ಲೇಖಕನ ಮಾತು | 19 | ಅನುಭವಿಸದಂತಹವು | ಅನುಭವಿಸಿದಂತಹವು |
| vii | 1 | ಚಿತ್ರಸದೇ | ಚಿತ್ರಿಸದೇ |
| 9 | 12 | ಚಿಕ್ಕರಾಮುಪ್ಪನವರಿಗೆ | ಚಿಕ್ಕಶೇಷಣ್ಣನವರಿಗೆ |
| 20 | 24 | ಚಲ ಮೇಲರ | ಚಲಮೇಲಜೇಸೇವುರ |
| 27 | 20 | ಸಂತೋಷ | ಸಂಕೋಚ |
| 29 | 19 | ಮಹಿಮುಕಾಲ | ಮಧ್ಯಮುಕಾಲ |
| 31 | 6 | ಆಸ್ಥಾನಕ್ಕೆ | ಸ್ನಾನಕ್ಕೆ |
| 33 | 1 | Month | mouth |
| 35 | 13 | ಸಂಬಳವನ್ನು ತರುವವರಿಗೆ | ಸಂಬಳವನ್ನು ಪತ್ರ ತರುವವರಿಗೆ |
| 42 | 22 | ಸ್ವರಕಂಪಕಗಳ | ಸ್ವರಪಂಪಕಗಳ |
| 58 | 27 | ಕೋಟಾಗಳನ್ನಿಟ್ಟು | ತೋಟಾಗಳನ್ನಿಟ್ಟು |
| 61 | 3 | ಪೂಚೆ | ಪೂಚಿ |
| 67 | 1 | ಕರುಣಾತೋ ನನ್ನ | ಕರುಣಾತೋ ನನ್ನು |
| 67 | 14 | ಎಟುಲಾ ವ್ರಾಸಿ | ಎಟುಲ ವ್ರಾಸಿ |
| 67 | 15 | ಎಟುಲಾ ಬ್ರೋತು | ಎಟುಲ ಬ್ರೋತು |
| 89 | 22 | ತನ್ನ ಶಿಕ್ಷಣದಲ್ಲಿ | ನನ್ನ ಶಿಕ್ಷಣದಲ್ಲಿ |
| 100 | 24 | ವೆಂಕಟರಾಮ ಭಾಗವತರು | ವೆಂಕಟರಮಣ ಭಾಗವತರು |
| 101 | 25 | ಸೇರದಹೊರತು | ಸೇರಿದ ಹೊರತು |
| 119 | 29 | ತ್ಯಾಗೈಯ್ಯನರ | ತ್ಯಾಗೈಯ್ಯನವರ |
| 127 | 28–29 | ಮಾಡಿರುವರೇನು ? | ಮಾಡಿರುವಿರೇನು ? |
| 136 | 10 | ಸ್ಕಂದಪ್ರುಷ್ಠಿ | ಸ್ಕಂದಷಷ್ಠಿ |